# "ಕರ್ನಾಟಕದ ರಾಣಿಯರು – ಒಂದು ಸಮಗ್ರ ಅಧ್ಯಯನ (ಕದಂಬ ಸಾಮ್ರಾಜ್ಯದಿಂದ ವಿಜಯನಗರ ಸಾಮ್ರಾಜ್ಯದವರೆಗೆ ಕ್ರಿ.ಶ 345 ರಿಂದ 1565)"

ಪಿಹೆಚ್.ಡಿ ಪದವಿಗಾಗಿ ಬೆಂಗಳೂರು ವಿಶ್ವವಿದ್ಯಾಲಯದ ಇತಿಹಾಸ ವಿಭಾಗಕ್ಕೆ ಸಲ್ಲಿಸಲಾದ ಮಹಾಪ್ರಬಂಧ


**ಸಂಶೋಧಕರು:**

**ಪಿ. ಕನ್ಯಾಕುಮಾರ** ಎಂ.ಎ., ಡಿ.ಎಪಿಗ್ರಫಿ
ಸಂಶೋಧನಾ ವಿದ್ಯಾರ್ಥಿ
ಇತಿಹಾಸ ವಿಭಾಗ,
ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು–56.

**ಮಾರ್ಗದರ್ಶಕರು:**

**ಡಾ. ಎಸ್.ನಾಗರತ್ನಮ್ಮ** ಎಂ.ಎ., ಎಂ.ಫಿಲ್., ಪಿಹೆಚ್.ಡಿ
ಸಹ ಪ್ರಾಧ್ಯಾಪಕರು, ಇತಿಹಾಸ ವಿಭಾಗ
ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.






ಇತಿಹಾಸ ವಿಭಾಗ
ಬೆಂಗಳೂರು ವಿಶ್ವವಿದ್ಯಾಲಯ, ಜ್ಞಾನಭಾರತಿ, ಬೆಂಗಳೂರು–56


**2012**

# ಮಾರ್ಗದರ್ಶಕರ ಪ್ರಮಾಣಪತ್ರ

ಬೆಂಗಳೂರು ವಿಶ್ವವಿದ್ಯಾಲಯದ ಪಿಹೆಚ್.ಡಿ ಪದವಿಗಾಗಿ "ಕರ್ನಾಟಕದ ರಾಣಿಯರು – ಒಂದು ಸಮಗ್ರ ಅಧ್ಯಯನ (ಕದಂಬ ಸಾಮ್ರಾಜ್ಯದಿಂದ ವಿಜಯನಗರ ಸಾಮ್ರಾಜ್ಯದವರೆಗೆ ಕ್ರಿ.ಶ 345 ರಿಂದ 1565)" ಎಂಬ ಸಂಶೋಧನಾ ಮಹಾಪ್ರಬಂಧವನ್ನು ಪಿಹೆಚ್.ಡಿ ಪದವಿಗಾಗಿ ಸಿದ್ಧಪಡಿಸಿದ್ದು, ಈ ಮಹಾಪ್ರಬಂಧವು ಪ್ರಪ್ರಥಮ ಮೂಲಕೃತಿಯಾಗಿದೆ ಎಂದು ಈ ಮೂಲಕ ದೃಢೀಕರಿಸುತ್ತೇನೆ.

ಕನ್ಯಾಕುಮಾರ.ಪಿ ಅವರು ಬೆಂಗಳೂರು ವಿಶ್ವವಿದ್ಯಾಲಯದ ಇತಿಹಾಸ ವಿಭಾಗದಲ್ಲಿ ಸಂಶೋಧನೆ ನಡೆಸಿ ಪ್ರಸ್ತುತ ಮಹಾಪ್ರಬಂಧವನ್ನು ಸಿದ್ಧಪಡಿಸಿರುತ್ತಾರೆ. ಈ ಸಂಶೋಧನಾ ಮಹಾ ಪ್ರಬಂಧವು ಪಿಹೆಚ್.ಡಿ ಪದವಿಗೆ ಸರ್ವದಾ ಸಮರ್ಥವಾಗಿದೆ ಎಂದು ಈ ಮೂಲಕ ದೃಢೀಕರಿಸುತ್ತೇನೆ.

ಸ್ಥಳ: ಬೆಂಗಳೂರು
ದಿನಾಂಕ: ಮಾರ್ಗದರ್ಶಕರು

ಡಾ. ಎಸ್.ನಾಗರತ್ನಮ್ಮ ಎಂ.ಎ., ಎಂ.ಫಿಲ್., ಪಿಹೆಚ್.ಡಿ
ಸಹ ಪ್ರಾಧ್ಯಾಪಕರು, ಇತಿಹಾಸ ವಿಭಾಗ
ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

# ದೃಢೀಕರಣ ಪತ್ರ

ಶ್ರೀಮತಿ ಡಾ.ಎಸ್. ನಾಗರತ್ನಮ್ಮ, ಸಹಪ್ರಾಧ್ಯಾಪಕರು, ಇತಿಹಾಸ ವಿಭಾಗ ಇವರ ಮಾರ್ಗದರ್ಶನದಲ್ಲಿ "ಕರ್ನಾಟಕದ ರಾಣಿಯರು – ಒಂದು ಸಮಗ್ರ ಅಧ್ಯಯನ (ಕದಂಬ ಸಾಮ್ರಾಜ್ಯದಿಂದ ವಿಜಯನಗರ ಸಾಮ್ರಾಜ್ಯದವರೆಗೆ ಕ್ರಿ.ಶ 345 ರಿಂದ 1565)" ಎಂಬ ಸಂಶೋಧನಾ ಮಹಾಪ್ರಬಂಧವನ್ನು ಪಿಹೆಚ್.ಡಿ. ಪದವಿಗಾಗಿ ಸಿದ್ಧಪಡಿಸಿದ್ದೇನೆ. ಈ ಮಹಾಪ್ರಬಂಧವು ಪೂರ್ಣವಾಗಿ ಅಥವಾ ಆಂಶಿಕವಾಗಿ ಯಾವುದೇ ಪದವಿ, ಉದ್ದೇಶಗಳಿಗಾಗಿ ಉಪಯೋಗಿಸಲ್ಪಟ್ಟಿಲ್ಲವೆಂದು ಈ ಮೂಲಕ ಪ್ರಾಮಾಣಿಕವಾಗಿ ದೃಢೀಕರಿಸುತ್ತೇನೆ

ಸ್ಥಳ: ಬೆಂಗಳೂರು
ದಿನಾಂಕ:

ಕನ್ಯಾಕುಮಾರ. ಪಿ
ಸಂಶೋಧನಾ ವಿದ್ಯಾರ್ಥಿ

## ಅಧ್ಯಯನಕ್ಕೆ ಮುನ್ನ

### ನನ್ನ ಮಾತು

ಕನ್ನಡ ಸಾಹಿತ್ಯ ಪರಿಷತ್‌ನ ಶಾಸನಶಾಸ್ತ್ರದ ವಿದ್ಯಾರ್ಥಿಯಾದ ನನಗೆ ಮೊದಲಿನಿಂದಲೂ ಪ್ರಾಚೀನ ಕರ್ನಾಟಕದ ಇತಿಹಾಸ, ಪ್ರಿಯವಾದ ವಸ್ತುವಿಷಯ. ಸ್ನಾತಕೋತ್ತರ ಪದವಿಯಲ್ಲಿದ್ದಾಗಲೇ ಸಂಶೋಧನೆಯನ್ನು ನಡೆಸುವ ನನ್ನ ಇಂಗಿತವನ್ನು ನನ್ನ ನೆಚ್ಚಿನ ಮಾತೃ ಸಹೃದಯಿ ಡಾ. ಎಸ್. ನಾಗರತ್ನಮ್ಮನವರಲ್ಲಿ ವ್ಯಕ್ತಪಡಿಸಿದ್ದೆನು. ಅದಕ್ಕೆ ಅವರು ನನ್ನನ್ನು ಪ್ರೋತ್ಸಾಹಿಸುವುದರೊಂದಿಗೆ ಸಮ್ಮತಿಯನ್ನು ನೀಡಿದ್ದರು. ಎಂ.ಎ., ಮುಗಿಸಿ ಶಾಸನಶಾಸ್ತ್ರವನ್ನು ಅಧ್ಯಯನ ನಡೆಸಲು ಕನ್ನಡ ಸಾಹಿತ್ಯ ಪರಿಷತ್‌ಗೆ ಸೇರ್ಪಡೆಗೊಂಡಾಗ ಅಲ್ಲಿ ಪ್ರಾಚೀನ ಕರ್ನಾಟಕದ ಮನೆತನಗಳ ಬಗ್ಗೆ ಪಾಠ–ಪ್ರವಚನಗಳನ್ನು ಕೇಳುವಾಗ ಅರಮನೆಗಳ ಒಂದು ಭಾಗವಾಗಿದ್ದ ಸ್ತ್ರೀಯರ ಬಗೆಗಿನ ಹೆಚ್ಚಿನ ಅಧ್ಯನಗಳು ನಡೆದಿಲ್ಲದಿರುವುದನ್ನು ಗಮನಿಸಿದ ನಾನು ಮಹಿಳೆಯರ ಸ್ಥಾನ–ಮಾನಗಳ ಬಗ್ಗೆ ಸಂಶೋಧನೆ ಕೈಗೊಳ್ಳುವ ಹಂಬಲ ದ್ವಿಗುಣವಾಯಿತು.

ಈ ವಿಷಯವನ್ನು ಹೊತ್ತು ನನ್ನ ಇತಿಹಾಸ ವಿಭಾಗಕ್ಕೆ ಬಂದು ನನ್ನ ಗುರು ಡಾ.ಎಸ್. ನಾಗರತ್ನಮ್ಮ ನವರ ಬಳಿ, ಸಂಶೋಧನಾ ವಿಷಯದ ಬಗ್ಗೆ ವಿವರಿಸಿದಾಗ ಅವರು ನಿಮಗೆ ಇಷ್ಟವಿರುವ ವಿಷಯದಲ್ಲೇ ಸಂಶೋಧನೆ ನಡೆಸಿ ಎಂದು ಮರು ಮಾತಿಲ್ಲದೆ ಮಾರ್ಗದರ್ಶಕರಾಗಲು ಸಮ್ಮತಿಸಿದರು. ಸಂಶೋಧನಾ ಶೀರ್ಷಿಕೆಯನ್ನು **“ಕರ್ನಾಟಕದ ರಾಣಿಯರು – ಒಂದು ಸಮಗ್ರ ಅಧ್ಯಯನ ಕದಂಬ ಸಾಮ್ರಾಜ್ಯದಿಂದ ವಿಜಯನಗರದ ಸಾಮ್ರಾಜ್ಯದವರೆಗೆ (ಕ್ರಿ.ಶ. 345–1565)”** ಎಂದು ಶೀರ್ಷಿಕೆಯಡಿಯಲ್ಲಿ ಪ್ರಾಚೀನ ಕರ್ನಾಟಕವನ್ನಾಳಿದ ರಾಜ್ಯಮನೆತನಗಳಲ್ಲಿ ಎಲೆಮರೆಯಕಾಯಿಗಳಂತೆ ಇದ್ದ ರಾಜಮನೆತನಗಳ ರಾಣಿಯರ ಬಗೆಗೆ ಅಧ್ಯಯನ ನಡೆಸಲು ಮುಂದಾದೆನು. ನನ್ನ ಸಂಶೋಧನೆಯ ಮಾರ್ಗದರ್ಶಕರಾದ **ಡಾ.ಎಸ್.ನಾಗರತ್ನಮ್ಮ**ನವರು ಹೆಚ್ಚಿನ ರೀತಿಯಲ್ಲಿ ಸಲಹೆ, ಸೂಚನೆಗಳನ್ನು ನೀಡಿ ಆಕರಗಳನ್ನು ಯಾವ ರೀತಿ ಬಳಸಬೇಕು, ಅವುಗಳನ್ನು ಯಾವ ರೀತಿ ಸಂಯೋಜನೆಗೊಳಿಸಬೇಕು ಎಂದು ಹೇಳಿ ಪ್ರಸ್ತುತ ಸಂಶೋಧನೆಯ ಬೆನ್ನೆಲುಬಾಗಿದ್ದಾರೆ, ಅವರನ್ನು ಅಭಿಮಾನದಿಂದ ನೆನೆಯುತ್ತಾ, ಕೃತಜ್ಞತೆಯಿಂದ ಅವರಿಗೆ ನನ್ನ ತುಂಬು ಹೃದಯದ ಅನಂತ, ಅನಂತ ವಂದನೆಗಳನ್ನು ಸಲ್ಲಿಸುತ್ತೇನೆ.

ಇಂತಹ ಒಂದು ವಿಭಿನ್ನ ಅಧ್ಯಯನಕ್ಕೆ ತಮ್ಮ ಸಮಸ್ತ ಸಹಕಾರವನ್ನು ನೀಡಿ ತಮ್ಮ ಮನೆಯ ಗ್ರಂಥಾಲಯವನ್ನು ವೈಯಕ್ತಿಕವಾಗಿ ಬಳಸಲು ಅನುವು ಮಾಡಿಕೊಟ್ಟ ಖ್ಯಾತ ಇತಿಹಾಸಕಾರರಾದ **ಡಾ.ಎಚ್.ಎಸ್.ಗೋಪಾಲ್‌ರಾವ್**ರವರನ್ನು ಗೌರವಿಸುತ್ತಾ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ. ತಾಯಿಯಂತೆ ಯಾವ ರೀತಿಯ ದ್ವಿ-ಮನಸ್ಸಿಲ್ಲದೆ ನನ್ನನ್ನ ಸಲುಹಿದ **ಶ್ರೀಮತಿ ಸೀತಮ್ಮಗೋಪಾಲ್‌ರಾವ್**ರವರನ್ನು ತುಂಬುಹೃದಯದಿಂದ ನೆನೆಯುತ್ತೇನೆ. ನನ್ನ ಸಂಶೋಧನೆಯ ಅವಧಿಯಲ್ಲಿ ನಾನು ನನ್ನ ಮಾರ್ಗದರ್ಶಕರನ್ನು ಭೇಟಿ ಮಾಡುವುದಕ್ಕೆ ಹೋಗಲು ಬಹು ಸಮಯವಾಗುತ್ತಿದ್ದರಿಂದ ಅಲ್ಲಿಯೇ ಇದ್ದ ಅವರ ಮನೆಗೆ ಹೋಗುತ್ತಿದ್ದೆ ಆಗ ಅಲ್ಲಿ ಅವರ ಬಾಳಸಂಗಾತಿಯಾದ **ಶ್ರೀ.ಶ್ರೀನಿವಾಸನಾಯಕ್**ರವರು ನನ್ನ ಸಂಶೋಧನೆಯನ್ನು ಹೆಜ್ಜೆ-ಹೆಜ್ಜೆಗೂ ವಿಚಾರಿಸುತ್ತಾ ಪ್ರೋತ್ಸಾಹಿಸಿದ್ದಾರೆ. ಅವರಿಗೆ ನನ್ನ ಕೃತಜ್ಞತೆಗಳು ಮತ್ತು ಮಾರ್ಗದರ್ಶಕರ ಏಕೈಕ ಪುತ್ರಿ **ಸಂಜು**ಗೂ ನನ್ನ ಶುಭ ಹಾರೈಕೆಗಳನ್ನು ತಿಳಿಸುತ್ತಾ ನೆನೆಯುತ್ತೇನೆ.

ಇತಿಹಾಸ ವಿಭಾಗದ ಮತ್ತು ನನ್ನ ಗುರುಗಳಾದ **ಡಾ.ಎಂ. ಜಮುನಾ, ಡಾ.ಎಸ್.ಷಡಕ್ಷರಯ್ಯ, ಡಾ. ವಿಜಯಲಕ್ಷ್ಮಿ, ಡಾ. ಉಷಾದೇವಿ, ಡಾ. ಷೇಕ್‌ಮಸ್ತಾನ್, ಡಾ.ಅಶ್ವತ್ಥ್‌ನಾರಾಯಣ್, ಡಾ. ಮುನಿರಾಜಪ್ಪ, ಡಾ. ವಸು, ಡಾ.ಶಶಿಧರ್**ರವರುಗಳೆಲ್ಲರೂ ನನ್ನ ಸಂಶೋಧನೆಗೆ ಒಂದಲ್ಲಾ ಒಂದು ರೀತಿ ಸಲಹೆ, ಸೂಚನೆಗಳನ್ನು ನೀಡಿ ಪ್ರೋತ್ಸಾಹಿಸಿರುತ್ತಾರೆ. ಇವರೆಲ್ಲರಿಗೂ ನನ್ನ ತುಂಬು ಹೃದಯದ ಧನ್ಯವಾದಗಳು. **ಡಾ.ಎಸ್. ಚಂದ್ರಶೇಖರ್** ಪ್ರಸ್ತುತ ಗುಲ್ಬರ್ಗಾ ವಿಶ್ವವಿದ್ಯಾಲಯದ ಉಪ ಕುಲಪತಿಗಳಾಗಿ ಸೇವೆಸಲ್ಲಿಸುತ್ತಿದ್ದಾರೆ. ಇವರು ನನ್ನ ಎಂ.ಎ ಪದವಿಯ ಸಮಯದಲ್ಲಿ ನೆಚ್ಚಿನ ಗುರುವಾಗಿದ್ದವರು. ಹಾಗೆಯೇ ನನ್ನ ಸಂಶೋಧನೆಯ ಸಾರಲೇಖದ ಅಪ್ರೂವಲ್ ಸಮಯದಲ್ಲಿ ಒಂದು ಒಳ್ಳೆಯ ಮತ್ತು ವಿಭಿನ್ನ ಸಂಶೋಧನೆ ಎಂದು ಹೇಳಿ ನನ್ನ ಸಂಶೋಧನೆಗೆ ಸಹಕರಿಸಿದ್ದಾರೆ. ಅವರಿಗೆ ನನ್ನ ವಿಶೇಷ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ.

ರಾಮನಗರ ಜಿಲ್ಲೆಯನ್ನೊಳಗೊಂಡ ಸಂಶೋಧನೆಯನ್ನು ಮಾಡುತ್ತಲೇ ಬಂದಿರುವ ಖ್ಯಾತ ಇತಿಹಾಸಕಾರರು ಮತ್ತು ವಿದ್ವಾಂಸರಾದ **ಡಾ.ಎಂ.ಜಿ. ನಾಗರಾಜು** ಅವರು ನನ್ನ ಶಾಸನಶಾಸ್ತ್ರ ತರಗತಿಯ ಮಾರ್ಗದರ್ಶಕರು ಇವರು ನನ್ನಲ್ಲಿ ಸಂಶೋಧನಾ ಮನೋಭಾವನೆಯನ್ನು ಬೆಳೆಸಿ ನನ್ನ ಸಂಶೋಧನೆಗೆ ಸಹಕರಿಸಿದ್ದಾರೆ ಇವರಿಗೆ ನನ್ನ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ. **ಶ್ರೀ ಕರೀಗೌಡ. ಕೆ,** ಉಪನ್ಯಾಸಕರು, ಸರ್ಕಾರಿ ಪದವಿಪೂರ್ವ ಕಾಲೇಜು ಹನುಮಂತನಗರ, ರಾಮನಗರ ಜಿಲ್ಲೆ ಹಾಗೂ

ಪ್ರಾಂಶುಪಾಲರಾದ ಶ್ರೀ.ಎಸ್.ಎಲ್ ವನರಾಜು ಸರ್ಕಾರಿ ಪದವಿ ಪೂರ್ವ ಕಾಲೇಜು ಸುಗ್ಗನಹಳ್ಳಿ, ರಾಮನಗರ, ನನ್ನ ಸಂಶೋಧನೆಯ ಬಗ್ಗೆ ವಿಚಾರಿಸುತ್ತಾ ಪ್ರೋತ್ಸಾಹಿಸುತ್ತಾ ಬಂದಿದ್ದಾರೆ. ಅವರಿಗೆ ನನ್ನ ಅನಂತ ವಂದನೆಗಳು. ಹಾಗೆಯೇ ಡಾ.ಪಿ.ವಿ. ಕೃಷ್ಣಮೂರ್ತಿ, ಇತಿಹಾಸದರ್ಶನದ ಸಂಪಾದಕರು, ಶಾಸನಶಾಸ್ತ್ರದ ಉಪನ್ಯಾಸಕರು ಇವರು ನನ್ನ ಸಂಶೋಧನೆಯಲ್ಲಿ ಶಾಸನಗಳ ಮಹತ್ವವನ್ನು ತಿಳಿಸಿದ್ದಾರೆ. ಇವರಿಗೂ ನನ್ನ ನಮನಗಳು.

ಪ್ರೊ. ರಾಜಣ್ಣ, ಉಪನಿರ್ದೇಶಕರು ಪದವಿ ಪೂರ್ವ ಶಿಕ್ಷಣ ಇಲಾಖೆ, ಬೆಂಗಳೂರು. ಇವರಿಗೆ ನನ್ನ ವಂದನೆಗಳು. ನನ್ನ ನೆಚ್ಚಿನ ಗುರುಗಳಾದ ನಂಜುಂಡಯ್ಯ, ಪೂರ್ಣಚಂದ್ರ, ರಾಮಣ್ಣ, ಸೂ.ಚಿ. ಗಂಗಾಧರ್ ಮತ್ತು ಗೌರಿಶಂಕರ್‌ರವರಿಗೆ ತುಂಬು ಹೃದಯದ ವಂದನೆಗಳನ್ನು ಅರ್ಪಿಸುತ್ತೇನೆ. ನನ್ನ ಸಹೋದ್ಯೋಗಿಗಳಾದ ವರಲಕ್ಷ್ಮಿ,ಡಿ ಭಾರತಿ.ಸಿ, ಮಮತ ಸಿ.ಎಸ್. ಚನ್ನವೀರಯ್ಯ,ಜೆ.ಬಿ, ಬೇಬಿ ಕೆ.ಸಿ. ಶಿವಕುಮಾರ್. ಎ, ಜುಬೇದಸುಲ್ತಾನ ರವರುಗಳಿಗೆ ನನ್ನ ವಂದನೆಗಳು ಸಲ್ಲುತ್ತವೆ. ನನ್ನ ಸಂಶೋಧನೆಯ ಸಮಯದಲ್ಲಿ ಸೂಕ್ತ ಸಲಹೆ ಸೂಚನೆ ನೀಡಿ ಪ್ರೋತ್ಸಾಹಿಸಿದ ನನ್ನ ಸ್ನೇಹ ವೃಂದವಾದ ಮಧುಸೂಧನ್.ಕೆ.ಎಂ, ಪ್ರದೀಪ್, ರಾಮಣ್ಣ, ರಾಜೇಶ್, ನರಸಿಂಹಸ್ವಾಮಿ, ನಾರಾಯಣಗೌಡ, ಕೃಷ್ಣಮೂರ್ತಿ. ಸಿ.ಎನ್, ಭೈರೇಗೌಡ, ಬಿ.ಪಿ, ವೆಂಕಿ, ನವೀನ್, ಶಶಿ, ರವಿಚಂದನ್, ಶಿವಕುಮಾರ್, ವೆಂಕಟೇಶ್, ಮಣಿಪ್ರಸಾದ್, ನಾಗೇಶ್, ಲಕ್ಷ್ಮಣ್, ರಾಮಕೃಷ್ಣ, ಶ್ರೀನಿವಾಸ್ ಮತ್ತು ಶ್ರೀನಿವಾಸನ್, ಲೀಲಾ, ನಂದಿನಿ, ಪವಿತ್ರ, ಸ್ಮಿತಾ ಎಲ್ಲರಿಗೂ ನನ್ನ ಧನ್ಯವಾದಗಳು ಸಲ್ಲುತ್ತವೆ. ನನ್ನ ಪ್ರೀತಿಯ ತಮ್ಮನಾದ ಹರೀಶ್‌ಕುಮಾರ್ ಜೆ.ಎಲ್, ಕ್ಷೇತ್ರಕಾರ್ಯದಲ್ಲಿ ಹಾಗೂ ಸಂಶೋಧನಾ ಅಧ್ಯಯನದಲ್ಲಿ ಸಹಕರಿಸಿದ್ದಾನೆ. ಅವರಿಗೆ ನನ್ನ ಧನ್ಯವಾದಗಳು.

ನನ್ನ ಸಂಶೋಧನೆಯ ಪ್ರಾರಂಭದಿಂದ ಹಿಡಿದು ಅಂತ್ಯದವರೆವಿಗೂ ಮತ್ತು ಕ್ಷೇತ್ರಕಾರ್ಯಗಳಲ್ಲಿ ಸಹಕರಿಸಿದ ಗೆಳತಿ ಅರುಣಾಸುದರ್ಶನ್‌ರಿಗೂ ನನ್ನ ಋತ್ಪೂರ್ವಕ ವಂದನೆಗಳು. ನನ್ನ ಆತ್ಮೀಯ ಗೆಳೆಯ ವಿಜಯ್,ಎಂ.ಪಿ ಮತ್ತು ಅತ್ತಿಗೆ ಪುಷ್ಪರವರನ್ನೂ ಈ ಕ್ಷಣದಲ್ಲಿ ನೆನೆಯುತ್ತೇನೆ. ನನ್ನ ಸಂಶೋಧನಾ ಹೊಣೆಗಾರಿಕಾ ಸಮಯದಲ್ಲಿ ನನಗೆ ಸಹಕರಿಸಿದ ನನ್ನ ಸಮಸ್ತ ಶಿಷ್ಯವೃಂದಕ್ಕೂ ಹಾಗೂ ನನ್ನನ್ನು ಕಡುಬಡತನದಲ್ಲೂ ಸಾಕಿ, ಸಲುಹಿದ, ವಿದ್ಯಾವಂತನಾಗಲು ತಮ್ಮ ಜೀವನವನ್ನು ಮುಡುಪಾಗಿಟ್ಟು ಸಮಾಜದಲ್ಲಿ ಒಂದು ಉತ್ತಮ ಗೌರವಯುತ ಸ್ಥಾನವನ್ನು ದೊರೆಕಿಸಿಕೊಡುವಲ್ಲಿ ಯಶಸ್ವಿಯಾದ ನನ್ನ ಪೂಜ್ಯ ತಂದೆ–ತಾಯಿಯರಾದ ಶ್ರೀ ಪುಟ್ಟಸ್ವಾಮಯ್ಯ

**ಮತ್ತು ಶ್ರೀಮತಿ ಗೌರಮ್ಮನವರಿಗೆ** ನನ್ನ ನಮನಗಳು, ಅಂತೆಯೇ ಅಕ್ಕ **ಮಂಜುಳಾ,** ಬಾವ, **ಚಲುವರಾಜು,** ನಗುಮೊಗದ ನಕ್ಷತ್ರಗಳಾದ **ನಿಶ್ಚಿತಾ** ಮತ್ತು **ವರ್ಷಿತಾ**ರವರನ್ನು ನೆನೆಯುತ್ತೇನೆ.

ಮೈಸೂರು ವಿಶ್ವವಿದ್ಯಾಲಯದ ಇತಿಹಾಸ ವಿಭಾಗದ ಪ್ರೊಫೆಸರ್ ಆಗಿರುವ **ಡಾ॥ ಸುಗೀತಾಸುವರ್ಣ**ರವರು, ನನ್ನ ಸಂಶೋಧನೆಗೆ ಸಹಕರಿಸಿದ್ದಾರೆ. ಅವರಿಗೆ ನನ್ನ ತುಂಬುಹೃದಯದ ನಮನಗಳು. **ಡಾ. ದೇವರಕೊಂಡಾರೆಡ್ಡಿ** ಪ್ರಸ್ತುತ ಹಂಪಿ ವಿಶ್ವವಿದ್ಯಾಲಯದ ಚರಿತ್ರೆ ವಿಭಾಗದ ಮುಖ್ಯಸ್ಥರು ಇವರಿಗೂ ನನ್ನ ನಮನಗಳು ಸಲ್ಲುತ್ತವೆ. **ಡಾ.ಡಿ.ಎನ್ ಯೋಗೀಶ್ವರಪ್ಪ** ಸಹಾಯಕ ಪ್ರಾಧ್ಯಾಪಕರು ಮತ್ತು ಇತಿಹಾಸ ವಿಭಾಗದ ಸರ್ಕಾರಿ ಮಹಿಳಾ ಪದವಿ ಕಾಲೇಜು, ತುಮಕೂರು ಇವರು ನನ್ನ ಸಂಶೋಧನೆಯಲ್ಲಿ ಅಪಾರ ಬೆಂಬಲವನ್ನು ನೀಡಿ, ಪ್ರಸ್ತುತ ಸಂಶೋಧನ ಪ್ರಬಂಧ ಹೊರಬರಲು ಸಹಕರಿಸಿದ್ದಾರೆ. ಹಾಗೆಯೇ ಶಾಸನಗಳ ಉಪಯೋಗಗಳನ್ನು ಯಾವ ರೀತಿ ಬಳಸಿಕೊಳ್ಳಬೇಕೆಂಬುದನ್ನು ತಿಳಿಸಿ ಸಂಶೋಧನೆಯ ಮೌಲ್ಯವನ್ನು ಹೆಚ್ಚಿಸಲು ಕಾರಣರಾಗಿದ್ದಾರೆ. ಹಾಗಾಗಿ ಅವರಿಗೆ ನನ್ನ ತುಂಬು ಹೃದಯದ ನಮನಗಳು. **ಪ್ರೊ. ಐ.ಕೆ. ಪತ್ತಾರ್,** ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ಇವರು ನನ್ನ ಸಂಶೋಧನೆಯ ಹಂತದಲ್ಲಿ ಸಹಕರಿಸಿದ್ದಾರೆ ಅವರಿಗೂ ನನ್ನ ವಂದನೆಗಳು. **ಶ್ರೀ. ಹರಿಶ್ಚಂದ್ರ** ಸೂಪರಿಂಡೆಂಟ್, ಪಿಹೆಚ್.ಡಿ ವಿಭಾಗ ಇವರಿಗೂ ನನ್ನ ವಂದನೆಗಳು ಹಾಗೂ ನನ್ನ ಬಾಳ ಸಂಗಾತಿಯಾಗಿರುವ **ಕೆ.ಎಸ್. ಸತ್ಯಶ್ರೀಯವರು** ನನ್ನ ಸಂಶೋಧನಾ ಸಮಯದಲ್ಲಿ ಸಹಕರಿಸಿದ್ದಾರೆ ಅವರಿಗೂ ನನ್ನ ಋತ್ಪೂರ್ವಕವಾದ ಧನ್ಯವಾದಗಳನ್ನು ತಿಳಿಸುತ್ತೇನೆ ಹಾಗೂ **ಕಿರಣ್‌ಗೌಡ, ಭುವನ, ಅರುಣ್, ಸಿಂಧು, ಭರತ್, ಶರತ್** ಇವರಿಗೂ ನನ್ನ ಧನ್ಯವಾದಗಳನ್ನು ತಿಳಿಸುತ್ತೇನೆ.

ನನ್ನ ಸಂಶೋಧನೆಯ ಸಂಪೂರ್ಣ ಭಾಗದಲ್ಲಿ ಗ್ರಂಥಾಲಯಗಳ ಪಾಲು ಹಿರಿದು. ಮಿಥಿಕ್ ಸೊಸೈಟಿ ಗ್ರಂಥಾಲಯ, ಬೆಂಗಳೂರು, I.C.H.R ಗ್ರಂಥಾಲಯ, ಬೆಂ.ವಿ.ವಿ. ಗ್ರಂಥಾಲಯ, ಮೈಸೂರು ವಿ.ವಿ. ಗ್ರಂಥಾಲಯ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ತುಮಕೂರು ವಿ.ವಿ. ಗ್ರಂಥಾಲಯಗಳು ಮತ್ತು ಅಲ್ಲಿನ ವೃಂದಕ್ಕೆ ನಾನು ಚಿರಋಣಿ. ಸಂಶೋಧನಾ ಮಹಾಪ್ರಬಂಧವನ್ನು ತಪ್ಪಿಲ್ಲದಂತೆ, ಅಂದವಾಗಿ ಡಿ.ಟಿ.ಪಿ ಮಾಡಿಕೊಟ್ಟ ಗೆಳೆಯ **ಮಹೇಶ್.ಕೆ** ರವರಿಗೂ ನನ್ನ ತುಂಬು ಹೃದಯದ ನಮನಗಳನ್ನು ತಿಳಿಸುತ್ತೇನೆ.

# ಪರಿವಿಡಿ

## ಸಂಕ್ಷಿಪ್ತ ಸೂಚಿ

| | | |
|---|---|---|
| ಪು.ಸಂ | – | ಪುಟಸಂಖ್ಯೆ |
| ಎ.ಕ | – | ಎಪಿಗ್ರಪಿಯಾ ಕರ್ನಾಟಕ |
| ಬಿ.ಕೆ.ಐ | – | ಬಾಂಬೆ ಕರ್ನಾಟಕ ಇನ್ಸ್ಕ್ರಪ್ಸನ್ಸ್ |
| ಎಸ್.ಐ.ಐ | – | ಸೌತ್ ಇಂಡಿಯನ್ ಇನ್ಸ್ಕ್ರಪ್ಸನ್ಸ್ |
| ದಾ.ಜಿ.ಶಾ.ಸೂ | – | ಧಾರವಾಡ ಜಿಲ್ಲಾ ಶಾಸನ ಸೂಚಿ |
| ದಾ.ತಾ.ಶಾ.ಸೂ | – | ಧಾರವಾಡ ತಾಲ್ಲೂಕು ಶಾಸನ ಸೂಚಿ |
| ಎಂ.ಎ.ಆರ್ | – | ಮೈಸೂರು ಆರ್ಕಿಯಾಲಾಜಿಕಲ್ ಅನ್ಯುಯಲ್ ರಿಪೋರ್ಟ್ಸ್ |
| ಕೆ.ಐ | – | ಕರ್ನಾಟಕ ಇನ್ಸ್ಕ್ರಪ್ಸನ್ಸ್ |
| ಐ.ಎ | – | ಇಂಡಿಯನ್ ಆಂಟಿಕ್ವೇರಿ |
| ಎ.ಇ. | – | ಎಪಿಗ್ರಪಿಯಾ ಇಂಡಿಕಾ |
| ಎ.ಆರ್.ಎ.ಎಸ್ಐ | – | ಆನ್ಯುಯಲ್ ರಿಪೋರ್ಟ್ ಆರ್ಕಿಯಾಲಾಜಿಕಲ್ ಸರ್ವೆ ಆಫ್ ಇಂಡಿಯಾ |
| ಎ.ಆರ್.ಎಸ್.ಐ.ಇ | – | ಆನ್ಯುಯಲ್ ರಿಪೋರ್ಟ್ ಆಫ್ ಸೌತ್ ಇಂಡಿಯನ್ ಎಪಿಗ್ರಫಿ |

## ಚಿತ್ರಸೂಚಿ

23) ವಿಜಯ ವಿಠ್ಠಲ ದೇವಾಲಯದ ಗೋಪುರ–ಹಂಪಿ

24) ತಿರುಮಲ ಗೋಪುರ– ಹಂಪಿ

25) ವಿಜಯ ವಿಠ್ಠಲ ದೇವಾಲಯ – ಹಂಪಿ

26) ವಿಜಯ ವಿಠ್ಠಲ ದೇವಾಲಯ ಒಳ ನೋಟ – ಹಂಪಿ

27) ವಿಜಯ ವಿಠ್ಠಲ ದೇವಾಲಯ ಮತ್ತೊಂದು ಒಳ ನೋಟ – ಹಂಪಿ

28) ಕಮಲ ಮಹಲ್ – ಹಂಪಿ

29) ಕಮಲ ಮಹಲ್‌ನ ಮತ್ತೊಂದು ದೃಶ್ಯ–ಹಂಪಿ

30) ನೃತ್ಯಮಂಟಪ–ಹಂಪಿ

31) ತುಲಬಾರ ಮಂಟಪದ ದೃಶ್ಯ–ಹಂಪಿ

32) ರಾಣಿಯರ ಸ್ನಾನಗೃಹದ ಹೊರನೋಟ–ಹಂಪಿ

33) ರಾಣಿಯರ ಸ್ನಾನಗೃಹದ ಮತ್ತೊಂದು ನೋಟ–ಹಂಪಿ.

# ಅಧ್ಯಾಯ–1

## ಪ್ರಸ್ತಾವನೆ

ಹತ್ತೊಂಬತ್ತನೆಯ ಶತಮಾನದಿಂದ ಈಚೆಗೆ ಮಹಿಳೆಯನ್ನು ನೋಡುವ ದೃಷ್ಟಿಕೋನಗಳು ಬದಲಾಗುತ್ತಿವೆ. ಬ್ರಿಟೀಷರು ಭಾರತಕ್ಕೆ ಬಂದು ಶಿಕ್ಷಣವನ್ನು ಸಾರ್ವತ್ರಿಕರಣಗೊಳಿಸಿದ ಮೇಲೆ ಸ್ತ್ರೀಯರು ಅಕ್ಷರಸ್ತರಾದರು. ತಮ್ಮ ಸ್ಥಿತಿಗತಿಯ ಕುರಿತು ಆಲೋಚಿಸತೊಡಗಿದರು. ಭಾರತ ದೇಶದಲ್ಲಿ ಮಹಿಳೆಯರನ್ನು ಕುರಿತಂತೆ ಎರಡು ವೈರುಧ್ಯಗಳಿವೆ. ವೇದ, ಪುರಾಣ, ಸಾಹಿತ್ಯಗಳಲ್ಲಿ ಒಂದು ರೀತಿಯ ವೈಭವೀಕರಣವಿದ್ದರೆ, ವಾಸ್ತವ ಸ್ಥಿತಿಯಲ್ಲಿ ಸಾಮಾಜಿಕ ಸಂದರ್ಭದಲ್ಲಿ ಅತ್ಯಂತ ಕೀಳಾದ, ಗ್ರಾಹಕ ವಸ್ತುವಿನ ರೀತಿಯಲ್ಲಿ ಚಿತ್ರಿತವಾಗಿರುವುದು. ಇಪ್ಪತ್ತನೆಯ ಶತಮಾನದಲ್ಲಿ ಈ ಎರಡೂ ಮಾದರಿಗಳಿಂದ ಹೊರತಾದ ಮಹಿಳೆಯನ್ನು ಗುರುತಿಸಲು ಹೊಸ ಆಲೋಚನೆಗಳು ವಿಭಿನ್ನ ದೃಷ್ಟಿಕೋನಗಳು ಪ್ರಾರಂಭವಾದವು.

ಭಾರತೀಯ ಸಮಾಜದಲ್ಲಿ ಮಹಿಳೆಯರ ಸ್ಥಾನ ಅತ್ಯಂತ ಗೌಣ. ಸಂವಿಧಾನಾತ್ಮಕವಾಗಿ ಕಾನೂನು ರೀತ್ಯ ಸಮಾನ ಸ್ಥಾನಮಾನ ನೀಡಲ್ಪಟ್ಟಿದ್ದರೂ ವಾಸ್ತವದಲ್ಲಿ ಮಹಿಳೆ ಎಲ್ಲೆಲ್ಲಿಯೂ ಅಧೀನಳೇ ಆಗಿ ಉಳಿದಿದ್ದಾಳೆ. ಇದು ಪುರುಷ ಪ್ರಧಾನ ಸಮಾಜವಾಗಿವುದರಿಂದ ಆಧುನಿಕ ಸಮಾಜದಲ್ಲಿನ ಮಹಿಳೆಯರ ಸ್ಥಾನಮಾನ ಅಥವಾ ಸ್ಥಿತಿಗತಿಗಳು ಪ್ರಾಚೀನ ಕಾಲಕ್ಕಿಂತ ಹೆಚ್ಚೇನೂ ಭಿನ್ನವಾಗಿಲ್ಲವಾದರೂ ಸಮಾಧಾನಕರವಾಗಿದೆಯಷ್ಟೆ. ಇದಕ್ಕೆ ಸಂಬಂಧಿಸಿದಂತೆ ಮಹಿಳೆಯರ ಸ್ಥಿತಿಗತಿಗಳನ್ನು ಲಿಂಗಸಂಬಂಧಿ ವ್ಯವಸ್ಥೆಗಳ ನೆಲೆಗಳಲ್ಲಿ ವಿವಿಧ ಆಯಾಮಗಳಲ್ಲಿ ಗ್ರಹಿಸುವ ಉದ್ದೇಶವನ್ನು ಇಂದಿನ ಮಹಿಳಾ ಅಧ್ಯಯನಗಳನ್ನು ನಡೆಸುತ್ತಾ ಸಾಗುತ್ತಲಿವೆ. ಸ್ತ್ರೀವಾದಿ ಸಂಶೋಧನೆಯಲ್ಲಿ ಪ್ರಕರಣ ಅಧ್ಯಯನ ವಿಧಾನವು ಪ್ರಮುಖ ವಿಧಾನವಾಗಿದೆ. ಈ ಅಧ್ಯಯನದಲ್ಲಿ ಮಹಿಳೆಯರನ್ನು ವಿಶೇಷವಾಗಿ ಆಯ್ಕೆ ಮಾಡಿ ಅವರ ಬಗ್ಗೆ ಪ್ರತ್ಯೇಕವಾದ ಅಧ್ಯಯನವನ್ನು ನಡೆಸಲಾಗುತ್ತಿದೆ.

ಪ್ರಾಚೀನ ಕಾಲದಲ್ಲಿ ಕರ್ನಾಟಕವನ್ನು ಸಾಕಷ್ಟು ರಾಜವಂಶಗಳು ಆಳ್ವಿಕೆ ನಡೆಸಿವೆ. ಈ ರಾಜಮನೆತನಗಳಲ್ಲಿನ ರಾಜರು ಕರ್ನಾಟಕದ ಸಂಸ್ಕೃತಿಗೆ ಅಗಣ್ಯವಾದ ಕೊಡುಗೆಗಳನ್ನು ನೀಡುವುದರ

ಮೂಲಕ ಶ್ರೀಮಂತಗೊಳಿಸಿದ್ದಾರೆ. ಪ್ರಾಚೀನ ಕಾಲದ ಸಾಮ್ರಾಜ್ಯಗಳು ವೈಭವದಿಂದ ಕೂಡಿದ್ದು ಸುವರ್ಣಯುಗಗಳು ಸೃಷ್ಟಿಯಾಗಿದ್ದವು. ಈ ವೈಭವದ ಮಟ್ಟಕ್ಕೆ ಕೊಂಡೊಯ್ಯುವುದಕ್ಕೆ ಅರಸನೊಂದಿಗೆ ಇದ್ದ ರಾಣಿಯರ ಪಾತ್ರವು ಇಲ್ಲಿ ಸ್ಮರಣೀಯವಾದದ್ದು. ಇಲ್ಲಿ ರಾಣಿಯರು ಎಲೆಮರೆಕಾಯಿಯಂತೆ ಸಾಮ್ರಾಜ್ಯಕ್ಕೆ ತಮ್ಮ ಅಗಣ್ಯ ಸೇವೆ ಸಲ್ಲಿಸಿದ್ದಾರೆ. ಇವರಿಂದಲೇ ಸಾಕಷ್ಟು ದೇವಾಲಯಗಳ ನಿರ್ಮಾಣ, ಸಾರ್ವಜನಿಕ ಕಾರ್ಯಗಳು ಕೈಗೊಂಡಿರುವುದು ಇಲ್ಲಿ ಗಮನಾರ್ಹ. ಪುರುಷರಷ್ಟೇ ಅಲ್ಲದೆ ಮಹಿಳೆಯರು ಸಹ ಸಾಂಸ್ಕೃತಿಕ ಬೆಳವಣಿಗೆಯಲ್ಲಿ ಸಿಂಹಪಾಲನ್ನು ಪಡೆದಿದ್ದರು. ಅಂಥವರ ಬಗ್ಗೆ ಎಲ್ಲೂ ಸ್ಪಷ್ಟವಾಗಿ ದಾಖಲೆಯಾಗಿಲ್ಲ. ವೈವಿದ್ಯಮಯವಾದ ಕರ್ನಾಟಕದ ಸಾಂಸ್ಕೃತಿಕ ಪರಂಪರೆಯನ್ನು ಪ್ರೋತ್ಸಾಹಿಸಿ ಶ್ರೀಮಂತಗೊಳಿಸಿದ ರಾಣಿಯರು ಕದಂಬ ಕಾಲದಿಂದ ವಿಜಯನಗರದ ಕಾಲದ ಸಾಮ್ರಾಜ್ಯದವರೆಗೂ ಅಧಿಕ ಸಂಖ್ಯೆಯಲ್ಲಿ ಪ್ರಾಪ್ತವಾಗಿದ್ದು ಇವರುಗಳ ಕೊಡುಗೆಗಳು ವೈವಿಧ್ಯಪೂರ್ಣವಾಗಿವೆ. ಆದರೆ ಇಂದಿಗೂ ಅವು ಬೆಳಕು ಕಂಡಿಲ್ಲ.

ಡಾ. ಎಂ. ಚಿದಾನಂದ ಮೂರ್ತಿ, ಎ.ಎಸ್. ಆಲ್ತೇಕರ್, ಎ.ವಿ ವೆಂಕಟರತ್ನಂ ಎಸ್.ಕೆ. ರಾಮಚಂದ್ರರಾವ್, ಡಾ.ಶಾಮಲಾರತ್ನಕುಮಾರಿ, ವಸುಂಧರಾ ಫಿಲಿಯೋಜಾ, ಡಾ.ಯು. ಸೂರ್ಯನಾಥ್ ಕಾಮತ್ ಮೊದಲಾದ ಚರಿತ್ರೆಕಾರರು, ಸಾಹಿತಿಗಳು ಸ್ತ್ರೀಯರ ವಿಚಾರವಾಗಿ ಸಾಕಷ್ಟು ಕೃಷಿ ನಡೆಸಿರುವುದು ಸ್ಮರಣೀಯ. ಆದರೆ ಈವರೆಗೂ ಕರ್ನಾಟಕವನ್ನು ಆಳಿದ ರಾಜಮನೆತನಗಳಲ್ಲಿನ ರಾಣಿಯರ ಕುರಿತು ಯಾರೂ, ಸಮಗ್ರವಾಗಿ ಅಧ್ಯಯನ ಮಾಡಿರುವುದಿಲ್ಲ. ಡಾ. ಚೆನ್ನಕ್ಕ ಎಲಿಗಾರರವರ 'ಪ್ರಾಚೀನ ಕರ್ನಾಟಕದ ರಾಣಿಯರು' ಎಂಬ ಕೃತಿ ಹಾಗೂ ಅಲ್ಲಲ್ಲಿ ಪ್ರಾಸಂಗಿಕವಾಗಿ ರಚನೆಯಾಗಿರುವ ಬಿಡಿ ಬಿಡಿ ಲೇಖನಗಳು ರಾಣಿಯರ ಕುರಿತು ಹೊಸ ಬೆಳಕು ಚೆಲ್ಲುತ್ತವೆ. ಪ್ರಾಚೀನ ರಾಜಮನೆತನಗಳ ಬಗ್ಗೆ ಹಲವಾರು ಸಂಶೋಧನೆಗಳು ನಡೆದಿದ್ದರೂ ಸಹ ರಾಜಮನೆತನಗಳಲ್ಲಿನ ರಾಣಿಯರ ಬಗ್ಗೆ ಅಧ್ಯಯನಗಳು ನಡೆದಿರುವುದು ಕಡಿಮೆ. ಮಹಿಳೆಯರ ಕುರಿತಂತೆ ನಿರ್ಲಕ್ಷ್ಯವಹಿಸಿರುವುದು ಸ್ಪಷ್ಟ, ಈ ಹಿನ್ನೆಲೆಯಲ್ಲಿ ರಾಜಮನೆತನಗಳಲ್ಲಿನ ರಾಣಿಯರನ್ನು ಕುರಿತು ಸಂಶೋಧನೆ ಮಾಡಲು ಮತ್ತು ಇತಿಹಾಸಕ್ತರ ಗಮನ ಸೆಳೆಯಲು ಪ್ರಸ್ತುತ ವಿಷಯವನ್ನು ಕೈಗೆತ್ತಿಕೊಳ್ಳಲಾಗಿದೆ.

ರಾಣಿ ಎಂದರೆ ರಾಜನಪತ್ನಿ, ಅರಸಿ, ಚಕ್ರವರ್ತಿನಿ, ಅರಸನ ಹೆಂಡತಿ ಎಂದರ್ಥ. ಇವಳಿಗೆ ಅರಸಿ, ಪಟ್ಟಮಹಿಷಿ, ರಾಣಿ, ಮಹಾರಾಣಿ ಎಂದೆಲ್ಲಾ ಕರೆಯುತ್ತಾರೆ. ಕರ್ನಾಟಕದ ರಾಣಿಯರು

ತಮ್ಮದೇ ಆದ ಜೀವನ ಶೈಲಿಯನ್ನು, ಆಚಾರ, ಸಂಪ್ರದಾಯಗಳನ್ನು ರೂಡಿಸಿಕೊಂಡಿದ್ದು ಅವರ ಜೀವನವು ವೈಶಿಷ್ಟ್ಯ ಪೂರ್ಣವಾಗಿದೆ. ಇವರು ವೈವಿದ್ಯಮಯವಾದ ಕರ್ನಾಟಕದ ಸಾಂಸ್ಕೃತಿಕ ಪರಂಪರೆಯನ್ನು ಪ್ರೋತ್ಸಾಹಿಸಿ ಶ್ರೀಮಂತಗೊಳಿಸಿದ ವಿವರಗಳು ಕದಂಬ ಕಾಲದಿಂದ ವಿಜಯನಗರದ ಕಾಲದ ಸಾಮ್ರಾಜ್ಯದವರೆಗೂ ದೊರೆಯುತ್ತವೆ.

ರಾಣಿಯರು ಸೀಮಿತ ಪರಿಸರವನ್ನು ಮೀರಿ ಜೀವನದಲ್ಲಿ ಹೆಚ್ಚಿನದನ್ನು ಸಾಧಿಸಬೇಕೆಂಬ ಹಂಬಲವುಳ್ಳವರಾಗಿದ್ದು, ಕೆಲವರು ಸ್ಥಾನಬಲದಿಂದ ಪ್ರಾಮುಖ್ಯತೆ ಪಡೆದರೆ ಇನ್ನು ಕೆಲವರು ಸ್ವ-ಕಾರ್ಯಬಲದಿಂದ ಪ್ರಾಮುಖ್ಯತೆ ಪಡೆದವರಾಗಿದ್ದರು. ಅವರು ರಾಜ್ಯದ ಆಡಳಿತವನ್ನು ಸ್ವತಂತ್ರವಾಗಿ ನಿರ್ವಹಿಸುವಲ್ಲಿ, ಮತ್ತು ಸಾಮಾಜಿಕ ಕಾರ್ಯಗಳಲ್ಲಿ ಯುದ್ಧಕಾರ್ಯಗಳನ್ನು ನಿರ್ವಹಿಸುವಲ್ಲಿ ತಮ್ಮ ಹೆಗ್ಗಳಿಕೆಯನ್ನು ಮೆರೆದಿದ್ದಾರೆ. ಲೋಕ ಕಾರ್ಯಗಳನ್ನು ಕೈಗೊಂಡು ಶಾಸನಗಳ ಮುಖಾಂತರ ನಮ್ಮ ಇತಿಹಾಸದ ಬೆಲೆಯುಳ್ಳ ಘಟಕಗಳಾಗಿ ಕಾಣಿಸಿಕೊಂಡಿರುವುದು ವಿಶೇಷ ಮತ್ತು ಗಮನಾರ್ಹ. ಉದಾಹರಣೆಗೆ ಕದಂಬರ ಕಕುತ್ಸವರ್ಮನ ಮಗಳು ಅಜಿತಭಟ್ಟಾರಿಕೆ, ಇಮ್ಮಡಿ ಪುಲಿಕೇಶಿಯ ಸೊಸೆ ವಿಜಯಭಟ್ಟಾರಿಕೆ, ಜಯಸಿಂಹನ ರಾಣಿ ಸುಗ್ಗಲೆ, ಒಂದನೇ ಪುಲಿಕೇಶಿಯ ರಾಣಿ ದುರ್ಲಭಾದೇವಿ, ವಿಕ್ರಮಾದಿತ್ಯನ ರಾಣಿಯರಾದ ಲೋಕಮಹಾದೇವಿ ಮತ್ತು ತ್ರೈಲೋಕ್ಯಮಹಾದೇವಿಯರು, ವಿಜಯಾದಿತ್ಯನ ಪ್ರಾಣವಲ್ಲಭೆಯಾದ ವಿನಾಪೋಡಿ, ಹೊಯ್ಸಳ ವಿಷ್ಣುವರ್ಧನನ ಪಟ್ಟದ ರಾಣಿ ಶಾಂತಲೆ, ಇಮ್ಮಡಿ ದೇವರಾಯನ ರಾಣಿಯರಾದ ಪೊನ್ನಲಾದೇವಿ, ಭೀಮಾದೇವಿ, ಕೃಷ್ಣದೇವರಾಯನ ರಾಣಿಯರುಗಳಾದ ತಿರುಮಲಾದೇವಿ, ಚಿನ್ನಲಾದೇವಿ ಮತ್ತು ಜಗನ್ಮೋಹಿನಿಯರು ವಿಶೇಷವಾಗಿದ್ದಾರೆ.

ಹೀಗೆ ಅನೇಕ ರಾಣಿಯರು ಶ್ರೀಮಂತ ಪರಂಪರೆಯ ಕೊಂಡಿಗಳಾಗಿದ್ದಾರೆ. ಆದುದ್ದರಿಂದ ಪ್ರಸ್ತುತ ಅಧ್ಯಯನದಲ್ಲಿ ಲಭ್ಯವಿರುವ ಎಲ್ಲಾ ಆಕರಗಳ ಅವಲೋಕನದ ಮೇರೆಗೆ ಕ್ರಮಬದ್ಧ ಅಧ್ಯಯನವನ್ನು ಮಾಡಲಾಗಿದೆ.

**ಅಧ್ಯಯನದ ಸ್ವರೂಪ ಮತ್ತು ಉದ್ದೇಶ**

ಪ್ರಸ್ತುತ ಅಧ್ಯಯನವನ್ನು ಸೂಕ್ಷ್ಮದೃಷ್ಟಿಕೋನದಿಂದ ಅಧ್ಯಯನ ನಡೆಸಿ ಕರ್ನಾಟಕವನ್ನಾಳಿ ಶ್ರೀಮಂತವನ್ನಾಗಿಸಿದ ರಾಜಮನೆತನಗಳಾದ ಕದಂಬ ಸಾಮ್ರಾಜ್ಯದಿಂದ ವಿಜಯನಗರದ

ಸಾಮ್ರಾಜ್ಯದವರೆವಿಗೂ ವಿಮರ್ಶಾತ್ಮಕವಾಗಿ ಮತ್ತು ಕೂಲಂಕುಷವಾಗಿ ಅಧ್ಯಯನ ನಡೆಸುವ ಉದ್ದೇಶವನ್ನಿಟ್ಟುಕೊಂಡು ಪ್ರಯತ್ನಿಸಲಾಗಿದೆ. ಪ್ರಾಚೀನ ಕಾಲದ ಸಾಮ್ರಾಜ್ಯಗಳಲ್ಲಿನ ರಾಣಿಯರು ಅವರ ಅಸ್ತಿತ್ವ, ಅವರ ಸ್ಥಾನಮಾನ, ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ಕ್ಷೇತ್ರಗಳಲ್ಲಿನ ಅವರ ಉತ್ಸಾಹ, ಕೊಡುಗೆಗಳೇನು? ಎಂಬುದರ ಬಗ್ಗೆ ವಿಚಾರ ಮಾಡಲಾಗಿದೆ. ಇವರು ಸಾಮ್ರಾಜ್ಯದ ಸರ್ವತೋಮುಖ ಅಭಿವೃದ್ಧಿಗೆ ಕಾರಣೀಭೂತರಾಗಿದ್ದರು. ಜೊತೆಗೆ ಕೆಲವೊಂದು ಸಂದರ್ಭಗಳಲ್ಲಿ ಸ್ವತಃ ಪಾಲ್ಗೊಳ್ಳುತ್ತಿದ್ದರು. ಆಗಾಗಿ ರಾಣಿಯರ ಬಗ್ಗೆ ಸಮಗ್ರವಾಗಿ ಅಧ್ಯಯನ ನಡೆಸುವುದು ಅವಶ್ಯಕವಾಗಿರುವುದರಿಂದ ಹಾಗೂ ಸಂಶೋಧಕರ, ಇತಿಹಾಸಕಾರರ ಗಮನಾಸಕ್ತಿಯನ್ನು ಇತ್ತ ಕಡೆ ಹರಿಯುವಂತೆ ಮಾಡಲು ಕರ್ನಾಟಕದ ಸಂಸ್ಕೃತಿಯಲ್ಲಿ ಅವರ ಮಹತ್ವವನ್ನು ಗುರುತಿಸುವುದು ಪ್ರಸ್ತುತ ಈ ನನ್ನ ಸಂಶೋಧನೆಯ ಸ್ವರೂಪ ಮತ್ತು ಉದ್ದೇಶವಾಗಿದೆ.

**ಅಧ್ಯಯನದ ವ್ಯಾಪ್ತಿ**

ಕರ್ನಾಟಕವನ್ನಾಳಿದ ರಾಜಮನೆತನಗಳಲ್ಲಿನ ರಾಣಿಯರ ಸಮಗ್ರ ಅಧ್ಯಯನವನ್ನು 'ಕದಂಬ ಸಾಮ್ರಾಜ್ಯದಿಂದ ವಿಜಯನಗರದ ಸಾಮ್ರಾಜ್ಯದವರೆಗಿನ' ಚೌಕಟ್ಟಿನೊಳಗೆ ಆರಿಸಿಕೊಂಡು ಅಧ್ಯಯನ ಮಾಡಲಾಗಿದೆ. ಕಾಲಮಾನವನ್ನು ಕ್ರಿ.ಶ. 345 ರಿಂದ ಕ್ರಿ.ಶ. 1565ರವರೆಗೆ ನಿಗಧಿಗೊಳಿಸಲಾಗಿದೆ. ಈ ಅಧ್ಯಯನವನ್ನು ಮಾಹಿತಿಯ ಮಹತ್ವದ ಆಧಾರದ ಮೇಲೆ ಹಾಗೂ ಚಾರಿತ್ರಿಕ ಅಧ್ಯಯನದ ಮಾರ್ಗವನ್ನು ಮತ್ತು ಸಂಶೋಧನಾ ವೈಧಾನಿಕತೆಯನ್ನು ಅನುಸರಿಸಿ ಪ್ರಸ್ತುತ ಅಧ್ಯಯನವನ್ನು ಒಟ್ಟು ಐದು ಅಧ್ಯಾಯಗಳನ್ನಾಗಿ ವಿಭಾಗಿಸಲಾಗಿದೆ.

ಮೊದಲನೆ ಅಧ್ಯಾಯವು ಪೀಠಿಕೆಯ ಸ್ವರೂಪದ್ದಾಗಿದ್ದು, ಅದರಲ್ಲಿ ಪ್ರಸ್ತುತ ಸಂಶೋಧನಾ ಅಧ್ಯಯನದ ಸ್ಥೂಲಪರಿಚಯ, ಅಧ್ಯಯನದ ಪ್ರಧಾನ ಉದ್ದೇಶ, ವ್ಯಾಪ್ತಿ, ಪ್ರಾಮುಖ್ಯತೆ, ಸಂಶೋಧನಾಕ್ರಮ, ಅದರ ಬಗೆಗಿನ ವಿಚಾರಧಾರೆಗಳು ಮತ್ತು ಆಧಾರಗಳನ್ನು ಒಳಗೊಂಡಂತೆ ಸ್ಪಷ್ಟವಾದ ವಿವರಣೆಯನ್ನು ನೀಡಲಾಗಿದೆ.

ಅಧ್ಯಾಯ ಎರಡರಲ್ಲಿ ಕರ್ನಾಟಕವನ್ನಾಳಿದ ವಿವಿಧ ರಾಜವಂಶಗಳ ರಾಣಿಯರ ಸಮೀಕ್ಷೆಯನ್ನು ಮಾಡಲಾಗಿದೆ. ಕರ್ನಾಟಕವು ಸುಧೀರ್ಘ ಸಮೃದ್ಧ ಪರಂಪರೆಯನ್ನು ಹೊಂದಿರುವ ನಾಡು. ನಂದರು ಮತ್ತು ಮೌರ್ಯಸಾಮ್ರಾಟರುಗಳೊಂದಿಗೆ ನಿಕಟ ಬಾಂಧವ್ಯವನ್ನು ಹೊಂದಿದ್ದು,

ವಿಶೇಷ ಸ್ಥಾನವನ್ನು ಪಡೆದಿರುವ ಈ ನಾಡನ್ನು ಕ್ರಿ.ಪೂರ್ವದಿಂದ ಕ್ರಿ.ಶ 1656ರ ವರೆವಿಗೂ ಕದಂಬರು, ಗಂಗರು, ಬಾದಾಮಿ ಚಾಳುಕ್ಯರು, ರಾಷ್ಟ್ರಕೂಟರು, ಕಲ್ಯಾಣಿ ಚಾಲುಕ್ಯರು ಮತ್ತು ವಿಜಯ ನಗರ ಸಾಮ್ರಾಜ್ಯ ಎಂಬ ಹಲವಾರು ರಾಜಮನೆತನಗಳು ಆಳ್ವಿಕೆ ನಡೆಸಿದ್ದಾರೆ. ಈ ಅಧ್ಯಾಯದಲ್ಲಿ ಕರ್ನಾಟಕವನ್ನಾಳಿದ ರಾಜಮನೆತನಗಳನ್ನು ಉಲ್ಲೇಖಿಸುತ್ತಾ ಪ್ರತಿಯೊಂದು ರಾಜವಂಶಗಳಲ್ಲಿ ಕಾಣಸಿಗುವ ರಾಣಿಯರುಗಳನ್ನು ಗುರುತಿಸಿ ಅವರುಗಳು ರಾಜರುಗಳೊಂದಿಗೆ ಹೊಂದಿದ್ದ ಸಂಬಂಧಗಳನ್ನು ರಾಜ್ಯದಲ್ಲಿ ರಾಣಿಯರುಗಳಿಗಿದ್ದ ವಿಶೇಷಣವನ್ನು ಸಮೀಕ್ಷೆಯ ಮೂಲಕ ವಿಸ್ತೃತವಾಗಿ ತಿಳಿಸಲಾಗಿದೆ. ಈ ರಾಣಿಯರು ಸಮಾಜಕ್ಕೆ ನೀಡಿರುವ ಕೊಡುಗೆಗಳನ್ನು ಪ್ರತ್ಯೇಕ ಅಧ್ಯಾಯದಲ್ಲಿ ವಿಶ್ಲೇಷಿಸಲಾಗಿದೆ.

ಅಧ್ಯಾಯ ಮೂರರಲ್ಲಿ ರಾಣಿಯರು ಕರ್ನಾಟಕದ ಸಾಂಸ್ಕೃತಿಕತೆಗೆ ನೀಡಿದ ಕೊಡುಗೆಗಳನ್ನು ಚರ್ಚಿಸಲಾಗಿದೆ. ರಾಣಿಯರು ತಮ್ಮನ್ನು ರಾಜಕೀಯ ಸಾಮಾಜಿಕ, ಧಾರ್ಮಿಕ, ಸಾಹಿತ್ಯ, ಕ್ಷೇತ್ರಗಳಿಗೆ ಅರ್ಪಿಸಿಕೊಂಡು ನೀಡಿದ ಕೊಡುಗೆಗಳನ್ನು ವಿವೇಚಿಸಲಾಗಿದೆ. ಪ್ರಸ್ತುತ ಅಧ್ಯಾಯದಲ್ಲಿ ರಾಜಕೀಯ ಸೇವೆ ಸಲ್ಲಿಸಿದ ರಾಣಿಯರು, ಸಾಮಾಜಿಕ ಕ್ಷೇತ್ರದಲ್ಲಿ ರಾಣಿಯರ ಅಸ್ತಿತ್ವ, ಧಾರ್ಮಿಕ ರಂಗದಲ್ಲಿ ರಾಣಿಯರ ಪಾಲು ಮತ್ತು ಸಾಹಿತ್ಯ ರಂಗದಲ್ಲಿ ರಾಣಿಯರ ಸೇವೆ ಎಂಬುದಾಗಿ ಉಪ ಶೀರ್ಷಿಕೆಗಳನ್ನು ಮಾಡಿಕೊಂಡು ಆಕೆ ರಾಜಕಾರಣದಲ್ಲಿ ಸ್ವತಂತ್ರವಾಗಿ ಆಡಳಿತ ನಿರ್ವಹಿಸಿದನ್ನು, ಹಾಗೂ ರಾಜನೊಂದಿಗೆ ಕೂಡಿಕೆ ಆಳ್ವಿಕೆ ನಡೆಸಿದ ಬಗ್ಗೆ ವಿವರಗಳನ್ನು ನೀಡಿ ವಿಶ್ಲೇಷಿಸಲಾಗಿದೆ. ರಾಣಿಯರ ಆಡಳಿತ ವರ್ಗ ಅವರ ಅಧೀನದಲ್ಲಿದ್ದ ಸಾಮಂತರು, ಮಂತ್ರಿಗಳು ಹೇಗೆ ಆಕೆಯ ಸಾರ್ವಭೌಮತ್ವವನ್ನು ಒಪ್ಪಿ ಹೇಗೆ, ಯಾವ ರೀತಿ ಆಡಳಿತ ನಡೆಸುತ್ತಿದ್ದರು ಎಂಬುದನ್ನು ತಿಳಿಸಲಾಗಿದೆ. ಜೊತೆಗೆ ರಾಣಿಯರು ಮತ್ತು ಮಂತ್ರಿಗಳ ನಡುವಿನ ಸಂಬಂಧ, ರಾಣಿಯರ ಯುದ್ಧ ನೀತಿಯನ್ನು ಸಹ ತಿಳಿಸಲಾಗಿದೆ.

ನಾಲ್ಕನೇ ಅಧ್ಯಾಯವು ಕಲೆ ಮತ್ತು ವಾಸ್ತುಶಿಲ್ಪ ಕ್ಷೇತ್ರಕ್ಕೆ ರಾಣಿಯರು ನೀಡಿದ ಕೊಡುಗೆಗಳನ್ನು ವಿವೇಚಿಸಲಾಗಿದೆ. ರಾಜಮನೆತನಗಳ ರಾಣಿಯರು ಹಲವಾರು ದೇವಾಲಯಗಳನ್ನು, ಬಸದಿಗಳನ್ನು ಸ್ಮಾರಕಗಳನ್ನು, ಚೈತ್ಯಾಲಯಗಳ ನಿರ್ಮಾಣಕ್ಕೆ ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಕಾರಣರಾಗಿದ್ದು ಕರ್ನಾಟಕದ ಸಾಂಸ್ಕೃತಿಕ ಇತಿಹಾಸಕ್ಕೆ ತಮ್ಮದೇ ಆದ ಕೊಡುಗೆಗಳನ್ನು ನೀಡಿದ ಬಗ್ಗೆ ಕದಂಬ ಸಾಮ್ರಾಜ್ಯದಿಂದ ವಿಜಯನಗರ ಸಾಮ್ರಜ್ಯದವರೆವಿಗೂ ವಿವರವಾಗಿ ಚರ್ಚಿಸಿ ವಿಶ್ಲೇಷಿಸಲಾಗಿದೆ.

ಕೊನೆಯದಾಗಿ ಐದನೇ ಅಧ್ಯಾಯವು ಸಮಾರೋಪವಾಗಿದ್ದು ಮೇಲಿನ ನಾಲ್ಕು ಅಧ್ಯಾಯಗಳ ಅಧ್ಯಯನದ ಸಾರವನ್ನು ಸಂಗ್ರಹಿತವಾಗಿ ಇಲ್ಲಿ ನೀಡಲಾಗಿದೆ. ಹಾಗೆಯೇ ಅಧ್ಯಯನದಿಂದ ಬರುವ ತೀರ್ಮಾನಗಳನ್ನು ಕ್ರೂಢೀಕರಿಸಲಾಗಿದೆ. ಕೊನೆಯಲ್ಲಿ ಪ್ರಸ್ತುತ ಸಂಶೋಧನಾ ಪ್ರಬಂಧಕ್ಕೆ ಪೂರಕವಾದಂತೆ ಪರಾಮರ್ಶನ ಗ್ರಂಥಗಳ ಪಟ್ಟಿಯನ್ನು, ಉಪಯುಕ್ತ ಅನುಬಂಧಗಳನ್ನು ದೇವಾಲಯಗಳ ಛಾಯಾ ಚಿತ್ರಗಳನ್ನು ನೀಡಲಾಗಿದೆ.

**ಅಧ್ಯಯನದಲ್ಲಿ ಅನುಸರಿಸುವ ಸಂಶೋಧನಾ ಕ್ರಮ.**

ಪ್ರಸ್ತುತ ಸಂಶೋಧನೆಯಲ್ಲಿ ಸಂಶೋಧನಾ ಮಾರ್ಗದ ತತ್ವಗಳನ್ನು ಅಳವಡಿಸಿಕೊಳ್ಳಲಾಗಿದೆ. ಸಂಶೋಧನಾ ಮಾರ್ಗದ ಸೂತ್ರಗಳ ಅನುಸಾರವಾಗಿ ವಿಷಯಗಳ ಸಂಗ್ರಹಣೆ, ಬಾಹ್ಯ ಮತ್ತು ಆಂತರಿಕ ವಿಮರ್ಶೆಯು ಸೂತ್ರಗಳು, ವಿಶ್ಲೇಷಣಾ ಕ್ರಮಗಳು, ಜೋಡಣಾ ವಿಧಾನ ಮತ್ತು ನಿರೂಪಣಾ ತತ್ವವನ್ನು ಸಂಶೋಧನೆಯಲ್ಲಿ ಅನುಸರಿಸಲಾಗಿದೆ. ಪ್ರಸ್ತುತ ಅಧ್ಯಯನವು ಮುಖ್ಯವಾಗಿ ಶಾಸನ ಸಾಮಗ್ರಿಗಳನ್ನು ಆಧರಿಸಿದೆ ಮತ್ತು ಕೆಲವು ಸಾಹಿತಿಕ ಕೃತಿಗಳು, ಸಾಂಧರ್ಬಿಕ ಗ್ರಂಥಗಳೊಂದಿಗೆ ಸಂಶೋಧನಾ ಕಾರ್ಯಕ್ಕೆ ಸಂಬಂಧಿಸಿದ ಸ್ಥಳಗಳ ಕ್ಷೇತ್ರಕಾರ್ಯವನ್ನು ಒಳಗೊಂಡಿದೆ. ಒಟ್ಟಿನಲ್ಲಿ ಯಾವುದೇ ಪೂರ್ವಗ್ರಹ ಪೀಡಿತನಾಗದೆ ಪ್ರಸ್ತುತ ಅಧ್ಯಯನವನ್ನು ಪರಿಶೀಲಿಸಲಾಗಿದೆ.

ರಾಣಿಯರು ಅಂದಿನ ರಾಜಕೀಯ, ಧಾರ್ಮಿಕ, ಸಾಮಾಜಿಕ ರಂಗಗಳಲ್ಲಿ ಪಾಲ್ಗೊಂಡಿದ್ದ ವಿಷಯಗಳನ್ನು ನಾವು ಇಂದು ಕಾಣಲು ಸಾಧ್ಯವಿಲ್ಲ. ಹಾಗಾಗಿ ಅವುಗಳನ್ನು ಆಧಾರಗಳಿಂದಲೇ ಅರಿಯಬೇಕು. ರಾಣಿಯರು ಧಾರ್ಮಿಕ ರಂಗದಲ್ಲಿ ಅವರು ಪಡೆದಿದ್ದ ಸ್ಥಾನಮಾನಗಳನ್ನು ಅವರು ನಿರ್ಮಿಸಿದ ಮತ್ತು ಅವರಿಗಾಗಿಯೇ ನಿರ್ಮಿಸಲ್ಪಟ್ಟಿದ್ದ ದೇವಾಲಯ, ಸ್ಮಾರಕಗಳನ್ನು, ಕಾಣುವುದರ ಮೂಲಕ ನೈಜತೆಯನ್ನು ಅರಿಯಬಹುದು. ಇದಕ್ಕಾಗಿ ಪ್ರಸ್ತುತ ಅಧ್ಯಯನದಲ್ಲಿ ಆಕರಗಳ ಅವಶ್ಯಕತೆಯಿದ್ದಷ್ಟೇ, ಕ್ಷೇತ್ರಕಾರ್ಯದ ಅಗತ್ಯ ಬಹುಮುಖ್ಯವಾಗಿದೆ. ರಾಣಿಯರು ನಿರ್ಮಿಸಿದ ದೇವಾಲಯಗಳನ್ನು ವೀಕ್ಷಿಸಿ ಅವರ ಸಾಂಸ್ಕೃತಿಕ ಕೊಡುಗೆಗಳನ್ನು ದಾಖಲಿಸಲು ಸಾಧ್ಯವಾಗುತ್ತದೆ ಹಾಗೂ ಪ್ರಯತ್ನಿಸಲಾಗಿದೆ.

**ಆಕರಗಳು ಮತ್ತು ಇದುವರೆವಿಗಿನ ಅಧ್ಯಯನದ ಸಮೀಕ್ಷೆ**

ಆಕರಗಳು ಚರಿತ್ರೆಯ ರಚನೆಗೆ ಅಡಿಗಲ್ಲು. ಆಧಾರಗಳಿಲ್ಲದೆ ಇತಿಹಾಸವಿಲ್ಲ. ಅಂತೆಯೇ ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಹೇಳುವುದಾದರೆ ದೊರಕುವ ಆಧಾರಗಳು ವೈವಿಧ್ಯಮಯವಾಗಿವೆ. ಪ್ರಾಚೀನ ಕರ್ನಾಟಕದ ರಾಣಿಯರ ಅಧ್ಯಯನಕ್ಕೆ ಸಂಬಂಧಿಸಿದಂತೆ, ಶಾಸನಗಳು, ಸಾಹಿತ್ಯ ಕೃತಿಗಳು, ಸ್ಮಾರಕಗಳು, ವಿದೇಶಿ ಪ್ರವಾಸಿಗರ ವರದಿಗಳು, ಮೂಲ ಆಕರಗಳಾಗಿವೆ. ಕರ್ನಾಟಕದ ರಾಣಿಯರ ಇತಿಹಾಸ ಪುನರ್‍ರಚನೆಗೆ ಶಾಸನಗಳು ಹೆಚ್ಚು ಉಪಯುಕ್ತವೂ, ಪ್ರಧಾನವೂ ಆಗಿವೆ. ಶಾಸನಗಳು ಅಂದಿನ ಸಮಕಾಲೀನ ಲಿಖಿತ ದಾಖಲೆಗಳು, ಸಮಕಾಲೀನ ಸಂಗತಿಗಳನ್ನು ಒಡಲಲ್ಲಿಟ್ಟುಕೊಂಡು ಆಯಾ ಕಾಲದ ಇಡಿ–ಬಿಡಿಯಾದ ಸಂಸ್ಕೃತಿಯನ್ನು ಪ್ರತಿನಿಧಿಸುವ ಕನ್ನಡಿಗಳು. ರಾಣಿಯರ ಬಗೆಗೆ ಲಭ್ಯವಿರುವ ಆಧಾರಗಳಲ್ಲಿ ಪ್ರಾಥಮಿಕ ಆಧಾರಗಳಾಗಿರುವ ಶಾಸನಾಧಾರಗಳೇ ಹೆಚ್ಚು. ಅವುಗಳು ನೀಡುವ ವಿಷಯಗಳು ಸಮಗ್ರವಾಗಿವೆ. ಉದಾಹರಣೆಗೆ ರಾಜ್ಯಾಡಳಿತದ ಸಂದರ್ಭಗಳಲ್ಲಿ ರಾಜರುಗಳಂತೆ ಅವರ ರಾಣಿಯರು ರಾಜಕೀಯ, ಸಾಮಾಜಿಕ ಮತ್ತು ಧಾರ್ಮಿಕ ರಂಗಗಳಲ್ಲಿ ಮಾಡಿದ ವಿವರಗಳನ್ನು ವಿವರವಾಗಿ ತಿಳಿಸುತ್ತವೆ. ಬೇರೆ ಎಲ್ಲಾ ದಾಖಲೆಗಳೊಡನೆ ಹೋಲಿಸಿದಾಗ ಈ ಶಾಸನಗಳ ಮಹತ್ವ ಹೆಚ್ಚಿನದೆಂದು ಹೇಳಬಹುದು. ಎಪಿಗ್ರಫಿಕಾ ಕರ್ನಾಟಿಕ ಸಂಪುಟಗಳು, ಎಪಿಗ್ರಫಿಯ ಇಂಡಿಕಾ ಸಂಪುಟಗಳು, ಸೌತ್ ಇಂಡಿಯಾ ಇನ್ಸ್‌ಕ್ರಿಪ್ಸನ್ಸ್, ಮೈಸೂರು ಆರ್ಕಿಯಾಲಜಿಕಲ್ ರಿಪೋರ್ಟ್ಸ್, ಕನ್ನಡ ವಿಶ್ವವಿದ್ಯಾಲಯದ ಶಾಸನ ಸಂಪುಟಗಳು, ಬಾಂಬೆ ಕರ್ನಾಟಕ ಇನ್ಸ್‌ಕ್ರಿಪ್ಸನ್ಸ್, ಇಂಡಿಯನ್–ಆಂಟಿಕ್ವೇರಿ ಮತ್ತು ಕರ್ನಾಟಕ ಇನ್ಸ್‌ಕ್ರಿಪ್ಸನ್ಸ್ ಶಾಸನಾದಾರದ ಆಕರಗಳಾಗಿವೆ. ಶಾಸನಗಳನ್ನು ಬಿಟ್ಟರೆ ಮತ್ತೊಂದು ಪ್ರಮುಖ ಆಧಾರವೆಂದರೆ, ಇತಿಹಾಸಕಾರರು ರಚಿಸಿರುವಂತಹ ಶಾಸನಗ್ರಂಥಗಳು ಮತ್ತು ಸಾಹಿತಿಕ ಕೃತಿಗಳು.

ರಾಣಿಯರ ಬಗ್ಗೆ ನಿಖರವಾದ ಅಧ್ಯಯನಗಳು ಎಲ್ಲಿಯೂ ಆಗಿಲ್ಲವೆನ್ನಬಹುದು. ಆದರೆ ವಿರಳವಾಗಿ ಅಲ್ಲಲ್ಲಿ ರಾಜಮನೆತನದ ಸ್ತ್ರೀಯರ ಬಗ್ಗೆ ಕೆಲವು ವಿದ್ವಾಂಸರು ಅಧ್ಯಯನ ನಡೆಸಿರುತ್ತಾರೆ. ಡಾ.ಎಂ. ಚಿದಾನಂದ ಮೂರ್ತಿಯವರು **"ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ"**[1] ಎಂಬ ತಮ್ಮ ಸಂಶೋಧನಾ ಮಹಾಪ್ರಬಂಧದಲ್ಲಿ ರಾಜಮನೆತನಗಳ ರಾಣಿಯರ ಮೇಲೆ ಪ್ರಾಸಂಗಿಕವಾಗಿ ಗಮನಹರಿಸಿದ್ದಾರೆ. ಇದು ರಾಣಿಯರ ಬಗೆಗೆ ಬೆಳಕು ಬೀರಬಹುದಾದ ಮೊಟ್ಟಮೊದಲ

[1] ಡಾ.ಎಂ. ಚಿದಾನಂದಮೂರ್ತಿ, **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ,** ಪ್ರಸಾರಂಗ, ಮೈಸೂರು ವಿ.ವಿ.1960.

ಗ್ರಂಥವಾಗಿದೆ. ಇವರು ಅಧ್ಯಾಯ–12ರಲ್ಲಿ ರಾಜರ ಆಡಳಿತದ ಜೊತೆಗೆ ರಾಣಿಯರ ಆಡಳಿತದ ವೈಖರಿಯ ಮೇಲೆ ತುಸು ವಿವರಿಸಿದ್ದಾರೆ. ಆದರೆ ಇದು ರಾಣಿಯರ ಮೇಲೆ ಸಂಪೂರ್ಣ ಅಧ್ಯಯನವಾಗಿಲ್ಲ.

ಡಾ.ಚೆನ್ನಕ್ಕ ಎಲಿಗಾರರವರು 'ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ'[2] ಎಂಬ ವಸ್ತು ವಿಷಯದ ಮೇಲೆ ಸಂಶೋಧನೆ ನಡೆಸಿದ್ದು, ಇದು ಕರ್ನಾಟಕದಲ್ಲಿನ ಪ್ರಾಚೀನ ಸ್ತ್ರೀಯರ ಮೇಲೆ ಬೆಳಕು ಚೆಲ್ಲುತ್ತದೆ. ಈ ಗ್ರಂಥವೂ ಸಹ ರಾಜಮನೆತನಗಳಲ್ಲಿನ ರಾಣಿಯರ ಬಗ್ಗೆ ಆಗ ಲಭ್ಯವಿದ್ದ ಆಕರಗಳ ಮೇಲೆ ರಚಿಸಿದ್ದು, ಪರಿಪೂರ್ಣವಾಗಿಲ್ಲ. ಹಾಗೆಯೇ 'ಕರ್ನಾಟಕದ ರಾಣಿಯರು'.[3] ಎಂಬ ಪುಸ್ತಕವನ್ನು ಇವರೇ ರಚಿಸಿದ್ದು ಇದು ಸಹ ಅಪರಿಪೂರ್ಣವಾಗಿದೆ.

ಎಲಿಗಾರವರ 'ಕರ್ನಾಟಕದ ಶಾಸನೋಕ್ತ ಮಹಿಳೆ–ಸಮೀಕ್ಷೆ ಸಂಸ್ಕೃತಿ'[4] ಎಂಬ ಗ್ರಂಥಮಾಲಿಕೆ ರಾಣಿಯರ ಬಗೆಗೆ ವಿವರಣೆ ನೀಡುತ್ತದೆ. ಆದರೆ ಈ ಗ್ರಂಥ ಮಾಲಿಕೆಯ ಮೇಲೆ ಕನ್ನಡ ಸಾಹಿತ್ಯದ ಪ್ರಭಾವ ಹೆಚ್ಚಿರುವಂತೆ ರಚನೆಗೊಂಡಿದ್ದು ಐತಿಹಾಸಿಕತೆಯಿಂದ ದೂರ ಉಳಿದಿದೆ. ಡಾ.ಪಿ.ಬಿ. ದೇಸಾಯಿ ಪಾಂಡುರಂಗರಾಯರು, "ಮಿಂಚಿದ ಮಹಿಳೆಯರು"[5] ಎಂಬ ಪುಸ್ತಕದಲ್ಲಿ ಕೆಲವು ರಾಣಿಯರ ವಿವರಗಳನ್ನು ನೀಡಿದ್ದಾರೆ.

ಶ್ರೀಮತಿ ವೈ.ಕೆ. ಸಂಧ್ಯಾಶರ್ಮರವರು 'ನೃತ್ಯ ಸರಸ್ವತಿ ಶಾಂತಲೆ'[6] ಎಂಬ ಪುಸ್ತಕವನ್ನು ಬರೆದಿದ್ದಾರೆ. ಈ ಕೃತಿಯಲ್ಲಿ ಶಾಂತಲೆಯ ವರ್ಣನೆಗಳನ್ನು ಆಧರಿಸಿ ಅವಳ ವ್ಯಕ್ತಿತ್ವ, ಸೌಂದರ್ಯ, ಸಂದರ್ಭ, ಸನ್ನಿವೇಶಗಳನ್ನು ತಿಳಿಸಿದ್ದಾರೆ. ಹಾಗೆಯೇ ಡಾ. ರಾಬರ್ಟ್‌ಸೀವೆಲ್. ಬಿ. ಸೂರ್ಯನಾರಾಯಣರಾವ್, ಬರ್ಟೈನ್‌ಸ್ಟೈನ್, ಎ.ಎಚ್.ಲಾಂಗ್‌ಹರ್ಸ್ಟ್, ಸಿ.ಟಿ.ಎಂ.ಕೊಟ್ರಯ್ಯ, ಡಾ.ಎಸ್.ರಾಜಶೇಖರ, ಡಾ.ಎಸ್.ಶೆಟ್ಟಾರ್, ಪಿ.ರಾಮಶರ್ಮ, ಎ.ವಿ ವೆಂಕಟರತ್ನಂ, ವಸುಂದರಾ ಫಿಲಿಯೋಜಾ, ಡಾ. ಸೂರ್ಯನಾಥ, ಯು.ಕಾಮತ್ ಮೊದಲಾದ ವಿದ್ವಾಂಸರು, ಸಾಹಿತಿಗಳು

---

[2] ಡಾ.ಚೆನ್ನಕ್ಕ ಎಲಿಗಾರ, **ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ,** ಪ್ರಸಾರಂಗ, ಕರ್ನಾಟಕ ವಿ.ವಿ ಧಾರವಾಡ1990.

[3] ಡಾ. ಚೆನ್ನಕ್ಕ ಎಲಿಗಾರ, **ಕರ್ನಾಟಕದ ರಾಣಿಯರು,** ಚನ್ನಗಂಗ ಪ್ರಕಾಶನ, ಧಾರವಾಡ. 1987.

[4] ಡಾ. ಚೆನ್ನಕ್ಕ ಎಲಿಗಾರ, **ಕರ್ನಾಟಕ ಶಾಸನೋಕ್ತ ಮಹಿಳೆ–ಸಮೀಕ್ಷೆ– ಸಂಸ್ಕೃತಿ, ಕರ್ನಾಟಕ ಇತಿಹಾಸ ಸಂಶೋಧನಾ ಮಂಡಲ, ಧಾರವಾಡ**. 2007–08.

[5] ಡಾ.ಪಿ.ಸಿ. ದೇಸಾಯಿ ಪಾಂಡುರಂಗರಾಯರು, **ಕನ್ನಡನಾಡಿನ ಮಿಂಚಿದ ಮಹಿಳೆಯರು, ಕರ್ನಾಟಕ ಇತಿಹಾಸ ಸಂಶೋಧನಾ ಮಂಡಲ,** ಧಾರವಾಡ. 2007–08.

[6] ಶ್ರೀಮತಿ, ಸಂದ್ಯಾಶರ್ಮ, ವೈ.ಕೆ. **ನೃತ್ಯಸರಸ್ವತಿ, ಶಾಂತಲಾ,** ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು. 2004.

ವಿಜಯನಗರದ ಸಾಮ್ರಾಜ್ಯದ ಇತಿಹಾಸದ ಬಗೆಗೆ ಕೃತಿಗಳನ್ನು ರಚಿಸಿದ್ದಾರೆ. ಆದರೆ ಅವರ ಈ ಕೃತಿಗಳೂ ಸಹ ವಿಜಯನಗರದ ರಾಣಿಯರ ಬಗ್ಗೆ ಸಂಪೂರ್ಣ ಬೆಳಕು ಚೆಲ್ಲವುದಿಲ್ಲ.

ಡಾ. ಎನ್. ಸರಸ್ವತಿ ಅವರು 'ದಿ ಪೊಜಿಷನ್ ಆಫ್, ವುಮೆನ್ ಡ್ಯೂರಿಂಗ್ ವಿಜಯನಗರ ಫೀರಿಯರ್ಡ್'[7] ಮತ್ತು ವಿಜಯನಗರ ಕಾಲದ ಶಿಲ್ಪದಲ್ಲಿ ಸ್ತ್ರೀಯರು' ಎಂಬ ಕೃತಿಗಳಲ್ಲಿ ವಿಜಯನಗರದ ರಾಣಿಯರ ಇತಿಹಾಸದ ಬಗ್ಗೆ ಗಮನಹರಿಸಿರುತ್ತಾರೆ.

ಹೀಗೆ ರಾಣಿಯರ ಬಗ್ಗೆ ನಡೆದಿರುವ ಅಧ್ಯಯನಗಳ ಸಂಖ್ಯೆ ತೀರಾ ವಿರಳವೆಂದೇ ಹೇಳಬಹುದು. ಇಲ್ಲಿಯವರೆವಿಗೂ ಹೊರಬಂದಿರುವ ಕೃತಿ, ಸಾಹಿತ್ಯಗಳ ಜೊತೆಗೆ ಅತ್ತಿಮಬ್ಬೆ, ಸಾವಿಯಬ್ಬೆ, ಶಾಂತಲೆ, ಬರಮಣ್ಣ ನಾಯಕನ ಕೌಟುಂಬಿಕ ಜೀವನ, ಬಾದಾಮಿ ಚಾಲುಕ್ಯರ ಕಾಲದ ಸ್ತ್ರೀಯರ ಸ್ಥಾನಮಾನ, ರಾಷ್ಟ್ರಕೂಟರ ಕಾಲದ ಸ್ತ್ರೀಸಮಾಜ, ಯಲಹಂಕ ನಾಡಪ್ರಭುಗಳ ರಾಣಿಯರು, ಶಿಕ್ಷಣ ಕ್ಷೇತ್ರದಲ್ಲಿ ಪ್ರಾಚೀನ ಕರ್ನಾಟಕದ ಮಹಿಳೆಯರ ಸ್ಥಾನಮಾನ ಎಂಬ ಬಿಡಿ–ಬಿಡಿ ಲೇಖನಗಳು ಅಲ್ಲಲ್ಲಿ ಬೆಳಕು ಕಂಡಿವೆ.

ಒಟ್ಟಾರೆಯಾಗಿ ಹೇಳುವುದಾದರೆ ಕರ್ನಾಟಕವನ್ನಾಳಿದ ರಾಜಮನೆತನಗಳ ರಾಜ–ಮಹಾರಾಜರುಗಳ ಮೇಲೆ ಇತಿಹಾಸದ ಬೆಳಕು ಬಿದ್ದಂತೆ ಅವರ ಕಾರ್ಯಗಳಲ್ಲಿ ಸರಿ–ಸಮಾನ ಸ್ಥಾನ ಪಡೆದಿದ್ದ ರಾಣಿಯರ ಮೇಲೆ ಹೆಚ್ಚಿನ ಗ್ರಂಥಗಳು ರಚನೆಗೊಂಡಿಲ್ಲ. ಹಾಗಾಗಿ ಲಭ್ಯವಿರುವ ಆಧಾರಗಳನ್ನು, ಆಕರ ಸಾಮಗ್ರಿಗಳನ್ನು ಬಳಸಿಕೊಂಡು ಕ್ಷೇತ್ರಕಾರ್ಯದೊಂದಿಗೆ ಪ್ರಸ್ತುತವಾಗಿ **"**ಕರ್ನಾಟಕದ ರಾಣಿಯರು ಸಮಗ್ರ ಅಧ್ಯಯನ – ಕದಂಬ ಸಾಮ್ರಾಜ್ಯದಿಂದ ವಿಜಯನಗರ ಸಾಮ್ರಾಜ್ಯದವರೆಗೆ (ಕ್ರಿ.ಶ. 345 ರಿಂದ 1565)**"** ಎಂಬ ಶೀರ್ಷಿಕೆಯಡಿಯಲ್ಲಿ ಕದಂಬ ಸಾಮ್ರಾಜ್ಯದಿಂದ ವಿಜಯನಗರ ಸಾಮ್ರಾಜ್ಯದವರೆಗಿನ ಚೌಕಟ್ಟಿನಲ್ಲಿ ವಸ್ತುನಿಷ್ಠ ಅಧ್ಯಯನವನ್ನು ಕೈಗೊಳ್ಳಲಾಗಿದೆ.

[7] ಡಾ. ಸರಸ್ವತಿ.ಎನ್. **ದಿ ಪೊಜಿಷನ್ ಆಫ್ ವುಮೆನ್ ಡೂರಿಂಗ್, ವಿಜಯನಗರ ಪೀರಿಯರ್ಡ್,** ಸೌಂದರನ್ ಪ್ರಿಂಟರ್ಸ್, ಧಾರವಾಡ, (ಇಂಗ್ಲಿಷ್) 1992.

# ಅಧ್ಯಾಯ–2

## ಕರ್ನಾಟಕವನ್ನಾಳಿದ ವಿವಿಧ ರಾಜವಂಶಗಳ ರಾಣಿಯರ ಸಮೀಕ್ಷೆ

**ಕ**ರ್ನಾಟಕ ಧೀರ್ಘ, ಸಮೃದ್ಧ ಪರಂಪರೆಯನ್ನು ಹೊಂದಿರುವ ನಾಡು. ಹಳೇ ಶಿಲಾಯುಗ ನೂತನ ಶಿಲಾಯುಗ ಮತ್ತು ಬೃಹತ್‌ಶಿಲಾಯುಗದ ಸಂಸ್ಕೃತಿಗಳು ಇಲ್ಲಿ ಬೆಳೆದು ಅರಳಿದವು. ನಂದರು ಮತ್ತು ಮೌರ್ಯ ಸಾಮ್ರಾಟರುಗಳೊಂದಿಗೆ ನಿಕಟ ಬಾಂಧವ್ಯವನ್ನು ಹೊಂದಿದ್ದ ಈ ನಾಡು ಶಾತವಾಹನರ ಅಧಿಪತ್ಯಕ್ಕೆ ಒಳಪಟ್ಟಿತ್ತು. ಗಂಗ, ಕದಂಬರ ಆಳ್ವಿಕೆ ಹೆಚ್ಚು ಕಡಿಮೆ ಒಂದೇ ಕಾಲದಲ್ಲಿ ಆರಂಭವಾಯಿತು. ಕರ್ನಾಟಕದ ವೈಭವದ ಉಗಮ ಬಾದಾಮಿ ಚಾಲುಕ್ಯರ ಕಾಲದಲ್ಲಾಯಿತು. ಕರ್ನಾಟಕದ ಕಲಾಪರಂಪರೆಯು ರಾಷ್ಟ್ರಕೂಟರು, ಕಲ್ಯಾಣದ ಚಾಲುಕ್ಯರು, ದಕ್ಷಿಣದಲ್ಲಿ ಹೊಯ್ಸಳರ ಕಾಲದಲ್ಲಿ ಉನ್ನತವಾಗಿ ಬೆಳೆದು ವಿಜಯನಗರದ ಚಕ್ರವರ್ತಿಗಳ ಕಾಲಕ್ಕೆ ಮೇರು ಸದೃಶವಾಗಿ ಸಾಧನೆಯನ್ನು ಮಾಡಿತು. ಧಾರ್ಮಿಕ ಕ್ಷೇತ್ರದಲ್ಲಿ ಮಾದರಿ ಸಹಿಷ್ಣುತೆ ನೀತಿಯನ್ನು ಕರ್ನಾಟಕವು ಅನುಸರಿಸಿದಂತೆ, ಭಾರತದ ಇನ್ನಾವ ರಾಜ್ಯವೂ ಪಾಲಿಸಿದಂತೆ ಕಾಣುವುದಿಲ್ಲ.

ಕನ್ನಡ ಸಾಹಿತ್ಯದಲ್ಲಿ ಕ್ರಿ.ಶ. 850ರಲ್ಲಿ ರಚಿತಗೊಂಡು ಉಪಲಬ್ಧವಿರುವ ಅತ್ಯಂತ ಪ್ರಾಚೀನ ಕೃತಿಯಾದ 'ಕವಿರಾಜಮಾರ್ಗ' ತನ್ನ ಪ್ರಥಮ ಪರಿಚ್ಛೇದದಲ್ಲೇ "ಕಾವೇರಿಯಿಂದಮಾ ಗೋದಾವರಿ ವರ ಮಿರ್ದ ನಾಡಾದ ಕನ್ನಡದೊಳ್ ಭಾವಿಸಿದ ಜನಪದಂ ವಸು ಧಾವಲಯ ವಿಲೀನ ವಿಶದ ವಿಷಯವು ವಿಶೇಷಂ" ಎಂದು ಕನ್ನಡ ನಾಡಿನ ಎಲ್ಲೆಗಳನ್ನು ಸ್ಪಷ್ಟವಾಗಿ ತಿಳಿಸಿದೆ. ಇಂತಹ ವಿಶಿಷ್ಟ ಸ್ಥಾನವನ್ನು ಪಡೆದಿರುವ ಕರ್ನಾಟಕವನ್ನು ಕ್ರಿ.ಪೂ. ದಿಂದ ಕ್ರಿ.ಶ. 1565ರವರೆವಿಗೂ ವಿವಿಧ ರಾಜ ಮನೆತನಗಳು ಆಳ್ವಿಕೆನಡೆಸಿವೆ. ಅವುಗಳೆಂದರೆ.

1) ಶಾತವಾಹನರು – ಕ್ರಿ.ಪೂ 3ನೇ ಶತಮಾನದಿಂದ ಕ್ರಿ.ಶ 3ನೇ ಶತಮಾನದವರೆಗೆ
2) ಕದಂಬರು – ಕ್ರಿ.ಶ. 4ನೇ ಶತಮಾನದಿಂದ ಕ್ರಿ.ಶ.6ನೇ ಶತಮಾನದವರೆಗೆ
3) ಗಂಗರು – ಕ್ರಿ.ಶ. 350 ರಿಂದ ಕ್ರಿ.ಶ. 999ರವರೆಗೆ
4) ಬಾದಾಮಿ ಚಾಲುಕ್ಯರು – ಕ್ರಿ.ಶ.ಸುಮಾರು 500 ರಿಂದ ಕ್ರಿ.ಶ. 757ರವರೆಗೆ

5) ರಾಷ್ಟ್ರಕೂಟರು – ಕ್ರಿ.ಶ. 735 ರಿಂದ ಕ್ರಿ.ಶ. 973 ರವರೆಗೆ

6) ಕಲ್ಯಾಣಿ ಚಾಲುಕ್ಯರು – ಕ್ರಿ.ಶ. 973 ರಿಂದ ಕ್ರಿ.ಶ. 1153 ರವರೆಗೆ

7) ಹೊಯ್ಸಳರು – ಕ್ರಿ.ಶ. 1000 ರಿಂದ ಕ್ರಿ.ಶ. 1346 ರವರೆಗೆ

8) ವಿಜಯನಗರ ಸಾಮ್ರಾಜ್ಯ – ಕ್ರಿ.ಶ. 1336 ರಿಂದ ಕ್ರಿ.ಶ. 1565 ರವರೆಗೆ

ಈ ಮೇಲೆ ಉಲ್ಲೇಖಿಸಿರುವ ರಾಜಮನೆತನಗಳು ಉಲ್ಲೇಖಿತ ಕಾಲಮಾನದ ವರೆವಿಗೂ ಆಡಳಿತದಲ್ಲಿದ್ದು ಕರ್ನಾಟಕದ ಸಾಂಸ್ಕೃತಿಕತೆಗೆ ತಮ್ಮದೇ ಆದ ಕೊಡುಗೆಗಳನ್ನು ನೀಡಿದ್ದಾರೆ. ಜೊತೆಗೆ ತಮ್ಮ ಉಚ್ಛ್ರಾಯ ಕಾಲಮಾನದ ತರುವಾಯ ಮತ್ತೊಂದು ರಾಜ ಮನೆತನದ ಮಾಂಡಳೀಕರಾಗಿಯೂ ಸಹ ಆಡಳಿತ ನಡೆಸಿದ್ದಾರೆ. ಆಗಲೂ ಸಹ ಹಲವಾರು ಕ್ಷೇತ್ರಗಳಿಗೆ ಸ್ಮರಣೀಯ ಕೊಡುಗೆಗಳನ್ನು ಕನ್ನಡ ನಾಡಿಗೆ ನೀಡಿದ್ದಾರೆ. ಇವರ ಸಾಧನೆಗಳಲ್ಲಿ ಸ್ತ್ರೀಯರ ಪಾತ್ರ ಸ್ಮರಣೀಯವಾದರೂ ಇತಿಹಾಸದಲ್ಲಿ ಅವರು ಗೌಣವಾಗಿದ್ದಾರೆ. ಇದು ಇತಿಹಾಸ ಕ್ಷೇತ್ರಕ್ಕೆ ಮಾಡಿದ ಒಂದು ದ್ರೋಹವೆಂದೇ ಹೇಳಬಹುದು. ಆದ್ದರಿಂದ ಈ ಸಂಶೋಧನೆಯಲ್ಲಿ ಗೌಣವಾಗಿರುವ ರಾಣಿಯರ ಸಾಧನೆಗಳನ್ನು ಬೆಳಕಿಗೆ ತರುವ ಪ್ರಯತ್ನ ಮಾಡಲಾಗಿದೆ.

ಪ್ರಸ್ತುತ ಅಧ್ಯಯನವು ಕರ್ನಾಟಕವನ್ನಾಳಿದ ರಾಜಮನೆತನಗಳ ರಾಣಿಯರುಗಳಿಗೆ ಸಂಬಂಧಿಸಿದ್ದಾಗಿದೆ. ಆದುದ್ದರಿಂದಾಗಿ ಕರ್ನಾಟಕವನ್ನಾಳಿದ ಕ್ರಿ.ಶ. 345 ರಿಂದ 1565ರ ವರೆಗಿನ ರಾಜಮನೆತನಗಳ ಪರಿಚಯದೊಂದಿಗೆ ಆ ಮನೆತನಗಳ ರಾಣಿಯರ ಸಮೀಕ್ಷೆಯನ್ನು ಮಾಡಿ, ಅವರು ಆಯಾಯ ರಾಜಮನೆತನಳೊಂದಿಗೆ ಹೊಂದಿರುವ ಸಂಬಂಧಗಳನ್ನು ಸಮೀಕ್ಷೆ ಮಾಡಲಾಗಿದ್ದು, ಜೊತೆಗೆ ಅವರು ವಿಭಿನ್ನ ಕ್ಷೇತ್ರಗಳಲ್ಲಿ ಮಾಡಿರುವ ಕಾರ್ಯಗಳನ್ನು ಪ್ರತ್ಯೇಕ ಅಧ್ಯಾಯಗಳಲ್ಲಿ ವಿವರಣೆಗಳೊಂದಿಗೆ ಚರ್ಚಿಸಲಾಗಿದೆ.

**1) ಶಾತವಾಹನರು (ಕ್ರಿ.ಪೂ 3ನೇ ಶತಮಾನದಿಂದ ಕ್ರಿ.ಶ. 3ನೇ ಶತಮಾನದವರೆಗೆ)**

ಕರ್ನಾಟಕವನ್ನಾಳಿದ ಪ್ರಪ್ರಥಮ ಹಿರಿಯ ರಾಜಮನೆತನ. ನಮ್ಮ ಅಧ್ಯಯನದ ಪರಿಮಿತಿಯಿಂದ ಹೊರಗಿದ್ದರೂ ಸಹ ಇಲ್ಲಿ ವಿವರಿಸುವುದು ಸೂಕ್ತವೆನಿಸಿದ ಕಾರಣ ವಿವರಿಸಲಾಗಿದೆ. ಮೌರ್ಯರ ಪತನಾನಂತರ ಕ್ರಿ.ಪೂ 3ನೇ ಶತಮಾನದಿಂದ ಕ್ರಿ.ಶ 3ನೇ ಶತಮಾನದವರೆವಿಗೆ ಶಾತವಾಹನರು ಆಳ್ವಿಕೆ ನಡೆಸಿದರು.

ಶಾತವಾಹನರ ವಂಶದ ಮೊದಲ ದೊರೆ ಸಿಮುಖ. ಶಾತವಾಹನರಲ್ಲೇ ಪ್ರಖ್ಯಾತನಾದ ಗೌತಮಿಪುತ್ರ ಶಾತಕರ್ಣಿಯ ಕಾಲದಲ್ಲಿ ಕರ್ನಾಟಕವು ಶಾತವಾಹನರ ಕಾಲದಲ್ಲಿ ವಶವಾಯಿತು. ಶಾತವಾಹನರ ಮನೆತನದಲ್ಲಿ ಕೆಲವಾರು ಜನ ರಾಣಿಯರು ಸಂದರ್ಭಕ್ಕೆ ಅನುಸಾರವಾಗಿ ಆಳ್ವಿಕೆ ನಡೆಸಿ ತಮ್ಮ ಶ್ರೇಷ್ಠತೆ ಮತ್ತು ಧೈರ್ಯ ಪರಾಕ್ರಮಗಳನ್ನು ಮೆರೆದಿದ್ದಾರೆ. ಇವರ ಕಾಲದ ರಾಜರುಗಳು ತಮ್ಮ ಹೆಸರಿನ ಪ್ರಾರಂಭದಲ್ಲಿ ರಾಜಮಾತೆಯರ ಹೆಸರನ್ನು ಸಂಭೋದನೆಯೊಂದಿಗೆ ಹೊಂದಿದ್ದರು ಇದು ಮಹಿಳೆಯರ ಸ್ಥಾನಮಾನವನ್ನು ತಿಳಿಯಪಡಿಸುತ್ತದೆ.

ಒಂದನೇ ಶಾತಕರ್ಣಿಯ ರಾಣಿ ನಾಗನೀಕಳು ಹೊರಡಿಸಿರುವ ನಾನಘಟ್ ಗುಹಾಂತರ ದೇವಾಲಯದ ಶಾಸನ ಆಕೆಯ ಮಹತ್ವವನ್ನು ವಿವರಿಸಬಲ್ಲದಾಗಿದೆ.[1] ಗೌತಮಿ ಪುತ್ರ ಶಾತಕರ್ಣಿಯ ತಾಯಿಯಾದ ಗೌತಮಿ ಬಾಳಶ್ರೀ ನಾಸಿಕ್ ಗುಹಾಂತರ ಶಾಸನವನ್ನು ಕೆತ್ತಿಸಿದ್ದಾಳೆ. ಇದು ತನ್ನ ಪುತ್ರ ರಾಜ್ಯಭಾರ ಮಾಡುತ್ತಿದ್ದಂತಹ ಸಂದರ್ಭದಲ್ಲಿ ಇವಳು 'ರಾಜ ಮಾತೆ'ಯಾಗಿದ್ದಳು ಎಂದು ತಿಳಿಯಪಡಿಸುತ್ತದೆ. ಬಹುಶಃ ಗೌತಮಿ ಪುತ್ರ ಶಾತಕರ್ಣಿ ಅಪ್ರಾಪ್ತನಾಗಿದ್ದಾಗ ಆಕೆ ರಾಜಮಾತೆಯಾಗಿ ಆಡಳಿತ ನೋಡಿಕೊಳ್ಳುತ್ತಿದ್ದಳು ಎಂಬುದು ಗಮನಾರ್ಹವಾದ ವಿಷಯವಾಗಿದೆ.[2] ದಕ್ಷಿಣಾಪಥದ ಬಹುಭಾಗವನ್ನಾಳಿದ ವಾಸಿಷ್ಠಪುತ್ರ ಪುಳುಮಾವಿಯ ಮಗ ಶಿವಸಿರಿ ಪುಳುಮಾವಿಯ ರಾಣಿಯಾದ ಮಹಾದೇವಿಯ ಛಾಯಾಶಿಲೆ (ಸ್ಮಾರಕ ಶಿಲೆ)ಯ ಸ್ಥಾಪನೆಯನ್ನು ಈ ಶಾಸನ ದಾಖಲಿಸಿದೆ.[3]

---

[1] ಆರ್.ಸಿ. ಮಜುಂದಾರ್, ಪ್ರ.ಸಂ. **ಸಾಮ್ರಾಜ್ಯ ಏಕತಾಯುಗ,** ಭಾಗ–1, ಪುಟ–283, ಭಾರತೀಯ ವಿದ್ಯಾಭವನ, ಬೆಂಗಳೂರು–1998.

[2] ಅದೇ,

[3] ಅದೇ,

ಶಾತವಾಹನರ ಮತ್ತೊಂದು ಸಾಮಂತ ರಾಜಮನೆತನವಾದ ಚುಟುಗಳಲ್ಲಿ ವಿಣ್ಹುಕಡ ಚುಟುಕುಲಾನಂದ ಶಾತಕರ್ಣಿಯ ಮಗಳು ಶಿವಸ್ಕಂದ ನಾಗಶ್ರೀಯು 'ಬನವಾಸಿ'ಯಲ್ಲಿ ನಾಗರ ಪ್ರತಿಮೆಯನ್ನು ಸ್ಥಾಪಿಸಿದ ಬಗ್ಗೆ ಶಾಸನ ತಿಳಿಸಿದೆ.[4]

**2) ಕದಂಬ ಸಾಮ್ರಾಜ್ಯ (ಕ್ರಿ.ಪೂ 3ನೇ ಶತಮಾನದಿಂದ ಕ್ರಿ.ಶ 3ನೇ ಶತಮಾನದವರೆಗೆ)**

ಶಾತವಾಹನರ ನಂತರ ಕರ್ನಾಟಕದ ಉತ್ತರ ಭಾಗಗಳನ್ನು ಆಳಿದ ಕದಂಬ ವಂಶವು ಅಚ್ಚ ಕನ್ನಡದ ಸಾಮ್ರಾಜ್ಯ. ಕ್ರಿ.ಶ. 4ನೇ ಶತಮಾನದಿಂದ ಕ್ರಿ.ಶ. 6ನೇ ಶತಮಾನದ ವರೆವಿಗೆ ಕರ್ನಾಟಕವನ್ನಾಳಿದ ಕದಂಬರ ಬಗ್ಗೆ ಹಲವಾರು ಶಾಸನಗಳು ದೊರೆತಿವೆ. ಕದಂಬ ಮನೆತನದ ಸ್ಥಾಪಕನಾದ ಮಯೂರವರ್ಮನು ಈ ಮನೆತನದ ಮೊದಲ ದೊರೆ. ಈ ಮನೆತನದಲ್ಲಿ ಕಕುಸ್ಥವರ್ಮನ ಮಗಳಾಗಿದ್ದ ಅಜಿತ ಭಟ್ಟಾರಿಕೆ, ಪ್ರಮುಖಳು ಇವಳನ್ನು ಗುಪ್ತರ ಕುಮಾರಗುಪ್ತನ ಮಗನಾದ ಸ್ಕಂದಗುಪ್ತನಿಗೆ ವಿವಾಹ ಮಾಡಿಕೊಡಲಾಗಿತ್ತು.[5] ವಾಕಟಾಕರ ರಾಜ ನರೇಂದ್ರ ಸೇನನು ಕುಂತಳರಾಜನ ಮಗಳಾದ ಅಜಿತ ಭಟ್ಟಾರಿಕೆಯನ್ನು ವಿವಾಹವಾದನೆಂದೂ, ಈ ಕುಂತಳ ರಾಜನು ಕಾಕುಸ್ಥವರ್ಮನೇ ಎಂದೂ ಅಭಿಪ್ರಾಯ ಪಡಲಾಗಿದೆ. ತಾಳಗುಂದದ ಶಾಸನದ ಪ್ರಕಾರ ಕಾಕುಸ್ಥವರ್ಮನ ಮತ್ತೋರ್ವ ಮಗಳಾದ ಲಕ್ಷ್ಮೀದೇವಿಯನ್ನು ಭಟಾರಿಕುಲಕ್ಕೆ ಸೇರಿದ ಕದಂಬರ ಮಾಂಡಳೀಕರಾಗಿದ್ದ **'ಪಶುಪತಿಗೆ'** ವಿವಾಹ ಮಾಡಿದ ವಿಷಯವನ್ನು ಕನ್ನಡದ ಮೊದಲ ಶಾಸನವೆನಿಸಿದ ಹಲ್ಮಿಡಿ ಶಾಸನ ತಿಳಿಯಪಡಿಸುತ್ತದೆ.[6]

ಕದಂಬರ ಕಾಲದ ಮೃಗೇಶವರ್ಮನ ರಾಣಿ ಪ್ರಭಾವತಿ ದೇವಿ ಕೇಕೆಯ ಪಲ್ಲವರ ವಂಶಕ್ಕೆ ಸೇರಿದವಳಾಗಿದ್ದಳು.[7] ಈಕೆಯ ಮಗನೇ ರವಿಮರ್ಮ. ಈ ವಂಶದ ರಾಜಕುಮಾರಿಯೊಬ್ಬಳು ಕದಂಬರ ಕೃಷ್ಣವರ್ಮ ನನ್ನ ವಿವಾಹವಾಗಿದ್ದಳು. ಆದರೆ ಆಕೆಯ ಹೆಸರು ಲಭ್ಯವಿಲ್ಲ.[8]

---

[4] ಎ.ಎಂ ಅಣ್ಣಿಗೇರಿ, ಡಾ.ಆರ್. ಶೇಷಶಾಸ್ತ್ರಿ, **ಶಾಸನ ಸಂಗ್ರಹ,** ಪು–124, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು. 2007,

[5] ಡಾ. ಸೂರ್ಯನಾಥ. ಯು. ಕಾಮತ್ (ಪ್ರ.ಸಂ) **ಕರ್ನಾಟಕ ರಾಜ್ಯ ಗ್ಯಾಸೆಟಿಯರ್** (ಭಾಗ–1), ಪು–167, ಕರ್ನಾಟಕ ರಾಜ್ಯ ಸರ್ಕಾರದ ಪ್ರಕಟಣೆ. 1984,

[6] ಎಂ.ಎ.ಆರ್ 1936 ಸಂ. 16 ಪುಟ–72 & 73

[7] ಅದೇ,

[8] ಡಾ. ಅರವಿಂದ ಮಾಲಗಿತ್ತಿ (ಪ್ರ.ಸಂ) **ಕನ್ನಡ ವಿಷಯ ವಿಶ್ವಕೋಶ,** ಕರ್ನಾಟಕ ಪು–628, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ. 2005.

**3) ಗಂಗ ಸಾಮ್ರಾಜ್ಯ (ಕ್ರಿ.ಶ. 350 ರಿಂದ ಕ್ರಿ.ಶ. 999ರವರೆಗೆ)**

ಇವರು ನಾಲ್ಕನೆಯ ಶತಮಾನದ ಮಧ್ಯಭಾಗದಿಂದ ಹತ್ತನೆಯ ಶತಮಾನದ ಕೊನೆಯವರೆಗೆ ಆಳಿದರು. ಕದಂಬರು ಆಳುತ್ತಿದ್ದ ಕಾಲದಲ್ಲೇ ಕರ್ನಾಟಕದ ದಕ್ಷಿಣ ಭಾಗವನ್ನು ಬಹುದೀರ್ಘಕಾಲ ಸಮರ್ಥವಾಗಿ ಆಳಿದವರು ಗಂಗರು. ಮೊದಲಿಗೆ ಕುವಲಾಲಪುರ (ಈಗಿನ ಕೋಲಾರ) ವನ್ನು ರಾಜಧಾನಿಯನ್ನಾಗಿ ಹೊಂದಿದ್ದ ಗಂಗರು ಪ್ರಬಲರಾಗಿ ಆಳ್ವಿಕೆ ನಡೆಸುತ್ತಿದ್ದ ಸಂದರ್ಭದಲ್ಲಿ ತಮ್ಮ ರಾಜಧಾನಿಯನ್ನು ತಲಕಾಡಿಗೆ ಬದಲಿಸಿಕೊಂಡರು. ಆದ್ದರಿಂದಲೇ ಇವರನ್ನು ತಲಕಾಡಿನ ಗಂಗರು ಎಂದು ಸಂಬೋಧಿಸಲಾಗಿದೆ. ಸ್ವಲ್ಪಕಾಲ ಬೆಂಗಳೂರು ಜಿಲ್ಲೆಯ ನೆಲಮಂಗಲ ತಾಲ್ಲೂಕಿನ ಮಣ್ಣೆ ಹಾಗೂ ಚನ್ನಪಟ್ಟಣ ತಾಲ್ಲೂಕಿನ ಮಾಕುಂದ ಗಂಗರ ರಾಜನೆಲೆವೀಡುಗಳಾಗಿದ್ದವು. ಈ ಮನೆತನದ ಸ್ಥಾಪಕ ಕೊಂಗಣಿ ವರ್ಮ.

ಈ ಮನೆತನದಲ್ಲಿ ಜೇಷ್ಠಾದೇವಿ, ವಿಜಯ ಮಹಾದೇವಿ, ಕಂಚಿಯಬ್ಬೆ, ಜಾಯಬ್ಬೆ, ಚಂದ್ರಲಬ್ಬೆ, ರೇವಕನಿಮ್ಮಡಿ, ಕಲ್ಲಬ್ಬರಸಿ ಮತ್ತು ಪದ್ದಬ್ಬರಸಿಯರು ಎಂಬ ರಾಣಿಯರು ಪ್ರಮುಖರು.

ಜೇಷ್ಠಾದೇವಿಯು ಪುನ್ನಾಟದ ಇಮ್ಮಡಿ ಸ್ಕಂದ ವರ್ಮನಮಗಳು. ಇವಳನ್ನು ತಡಂಗಾಲ ಮಾದವ ಅಂದರೆ ಮೂರನೇ ಮಾಧವನ ಮಗನಾದ ಅವನೀತನು ಕ್ರಿ.ಶ. 469ರಲ್ಲಿ ವಿವಾಹವಾಗಿದ್ದನು.[9] ಇಲ್ಲಿ ತಡಂಗಾಲ ಮಾದವ ಕದಂಬ ಕೃಷ್ಣವರ್ಮನ ತಂಗಿಯನ್ನು ವಿವಾಹವಾಗಿದ್ದನು. ಇವರ ಮಗನೇ ಅವನೀತ. ಅವನೀತನ ತರುವಾಯ ದುರ್ವಿನೀತನು ಅಧಿಕಾರಕ್ಕೆ ಬಂದನು. ಇವನ ನಂತರ ಇವನ ಮಗ ಮುಷ್ಕರನು ಗಂಗರ ಅರಸನಾದನು. ಇವನು ಸಿಂಧುರಾಜನ ಮಗಳನ್ನು ಮಧುವೆಯಾಗಿದ್ದನು ಎಂಬುದಷ್ಟೇ ತಿಳಿದು ಬಂದಿದೆ. ಆದರೆ ಆಕೆಯ ಹೆಸರು ತಿಳಿದುಬಂದಿಲ್ಲ.[10] ವಿನ್ನೇತಿ ನಿಮ್ಮಡಿ ಪೃಥ್ವೀಕೊಂಗುಣಿ ಮುತ್ತರಸ ಎಂಬ ಹೆಸರನ್ನು ಹೊಂದಿದ್ದ ಶ್ರೀಪುರುಷನ ರಾಣಿ. ಇವಳು 'ವೆಳ್ಳೂರನ್ನು ಆಳುತ್ತಿದ್ದಳು.[11] ಚಾಲುಕ್ಯ ವಂಶದ ವಿಜಯ ಮಹಾದೇವಿಯನ್ನು ಮಧುವೆಯಾಗಿದ್ದಂತೆಯೂ, ಇವರ ಮಗನೇ ವಿಜಯಾದಿತ್ಯ ಎಂಬ

---

[9] ಡಾ.ಎಚ್. ಎಸ್. ಗೋಪಾಲರಾವ್, (ಪ್ರ.ಸಂ) **ಗಂಗ ಶಿಲ್ಪಕಲೆ,** ಪುಟ–13, ಕರ್ನಾಟಕದ ಶಿಲ್ಪಕಲಾ ಅಕಾಡೆಮಿ, ಬೆಂಗಳೂರು. 2008.

[10] ಡಾ. ಸೂರ್ಯನಾಥ ಯು ಕಾಮತ್ (ಪ್ರ.ಸಂ) **ಕರ್ನಾಟಕ ರಾಜ್ಯ ಗ್ಯಾಸೆಟಿಯರ್** (ಭಾಗ–1), ಪು–171, ಕರ್ನಾಟಕ ರಾಜ್ಯ ಸರ್ಕಾರದ ಪ್ರಕಟಣೆ. 1984.

[11] ಡಾ.ಎಚ್.ಎಸ್. ಗೋಪಾಲರಾವ್ (ಪ್ರ.ಸಂ), **ಗಂಗಶಿಲ್ಪಕಲೆ,** ಪುಟ–46, ಕರ್ನಾಟಕದ ಶಿಲ್ಪಕಲಾ ಅಕಾಡೆಮಿ ಬೆಂಗಳೂರು, 2008.

ಉಲ್ಲೇಖಗಳು ಇವೆ. ಈಕೆ ಚಾಲುಕ್ಯ ವಿಜಯಾದಿತ್ಯನ ಮಗಳಿರಬಹುದು,[12] ಎಂಬ ಭಿನ್ನಾಭಿಪ್ರಾಯಗಳು ಇವೆ.

ಜಾಯಬ್ಬೆ, ಗಂಗರ ಒಂದನೇ ರಾಚಮಲ್ಲನ ರಾಜಕುಮಾರಿಯಾಗಿದ್ದು, ರಾಷ್ಟ್ರಕೂಟರಿಂದ ಗಂಗವಾಡಿಯನ್ನು ಪುನಃಗಳಿಸಿ ಸ್ವತಂತ್ರನಾಗುವ ಪ್ರಯತ್ನವನ್ನು ಪಡುತ್ತಿದ್ದನು. ತನ್ನ ಈ ಹೋರಾಟಕ್ಕೆ ನೊಳಂಬರ ಸಹಾಯವನ್ನು ಅಪೇಕ್ಷಿಸಿ ತನ್ನ ಮಗಳಾದ 'ಜಾಯಬ್ಬೆ'ಯನ್ನು ನೊಳಂಬರ ಪೊಳಲ್ಚೋರನಿಗೆ ಕೊಟ್ಟು ವಿವಾಹ ಮಾಡಿದನು.[13] ತದನಂತರದಲ್ಲಿ ಗಂಗರ ಎರೆಗಂಗನೊಡನೆ ರಾಷ್ಟ್ರಕೂಟರ ಅಮೋಘವರ್ಷ ನೃಪತುಂಗನು ಸಂಬಂಧ ಬೆಳೆಸಿ ತನ್ನಮಗಳಾದ ಚಂದ್ರಲಬ್ಬೆಯನ್ನು ಎರಗಂಗನ ಮಗ ಬೂತುಗನಿಗೆ ಕೊಟ್ಟುವಿವಾಹ ಮಾಡಿದ. ಈ ವೈವಾಹಿಕ ಸಂಬಂಧ ಗಂಗರ ಮತ್ತು ರಾಷ್ಟ್ರಕೂಟರ ನಡುವಿನ ವೈರತ್ವವನ್ನು ಅಂತ್ಯ ಮಾಡಿ ಆ ಎರಡು ರಾಜಮನೆತನಗಳ ನಡುವೆ ಸಂಬಂಧಗಳು ಸೌಹಾರ್ದಯುತವಾಗಿರಲು ಸಹಕಾರಿಯಾಯಿತು. ಇವನ ತರುವಾಯ ಎರೆಯಪ್ಪನು ಅಧಿಕಾರಕ್ಕೆ ಬಂದನು. ಇವನಿಗೆ ಚಾಲುಕ್ಯರ ಅರಸ ನಿಜಗಲಿ ರಾಜನ ಮಗಳಾದ ಜಾಕಾಬ್ಬೆಯನ್ನು ಕೊಟ್ಟು ವಿವಾಹ ಮಾಡಲಾಯಿತು. ಇದರಿಂದ ಗಂಗರ ಚಾಲುಕ್ಯರ ಸಂಬಂಧಗಳು ಸೌಹಾರ್ದಯುತವಾಗಲು ಸಾಧ್ಯವಾಯಿತು. ಇಮ್ಮಡಿ ಬೂತುಗನು ರಾಷ್ಟ್ರಕೂಟ ಅಮೋಘವರ್ಷ ಬದ್ದೆಗನ ಮಗಳಾದ ರೇವಕ ನಿಮ್ಮಡಿಯನ್ನು ವಿವಾಹವಾಗಿದ್ದನು. ಇಮ್ಮಡಿ ಬೂತುಗನು ರಾಷ್ಟ್ರಕೂಟರ 3ನೇ ಕೃಷ್ಣನಿಗೆ ವಿಧೇಯಕನಾಗಿದ್ದು, ರೇವಕನಿಮ್ಮಡಿಯ ಜೊತೆಗೆ ಕಲ್ಲಬ್ಬರಸಿ, ಪದ್ದಬ್ಬರಸಿ, ಎಂಬ ರಾಣಿಯರು ಇದ್ದರೆಂದು ಶಿವಮೊಗ್ಗ, ರೋಣ, ಗದಗ, ರಾಯಚೂರು ಮುಂತಾದ ಕಡೆ ದೊರೆತಿರುವ ಬೂತುಗನ ಶಾಸನಗಳು ತಿಳಿಯಪಡಿಸುತ್ತವೆ.[14]

---

12 ಅದೇ.

13 ಡಾ.ಎಚ್.ಎಸ್. ಗೋಪಾಲರಾವ್, (ಪ್ರ.ಮುದ್ರಣ) **ನಮ್ಮನಾಡು ಕರ್ನಾಟಕ,** ಪು–47, ನವಕರ್ನಾಟಕ ಪಬ್ಲಿಕೇಷನ್, ಬೆಂಗಳೂರು. 2007.

14 ಡಾ.ಎಚ್.ಎಸ್.ಗೋಪಾಲರಾವ್, (ಪ್ರ.ಸಂ) **ಗಂಗಶಿಲ್ಪಕಲೆ,** ಪುಟ–24, ಕರ್ನಾಟಕದ ಶಿಲ್ಪಕಲಾ ಅಕಾಡೆಮಿ, ಬೆಂಗಳೂರು. 2008.

**4) ಬಾದಾಮಿ ಚಾಲುಕ್ಯರು (ಕ್ರಿ.ಶ. ಸುಮಾರು 500 ರಿಂದ ಕ್ರಿ.ಶ. 757ರವರೆಗೆ)**

ಕರ್ನಾಟಕವನ್ನು ಎರಡು ಚಾಲುಕ್ಯ ಮನೆತನಗಳು ಆಳಿವೆ. ಬಾದಾಮಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳಿದವರು ಬಾದಾಮಿ ಚಾಲುಕ್ಯರು ಅಥವಾ ಪಶ್ಚಿಮದ ಚಾಲುಕ್ಯರು. ನಂತರ ಕೆಲವು ಕಾಲ ಮರೆಯಾಗಿದ್ದು, ರಾಷ್ಟ್ರಕೂಟರ ಅವನತಿಯ ನಂತರ ಮತ್ತೆ ಕಲ್ಯಾಣವನ್ನು ರಾಜಧಾನಿಯನ್ನಾಗಿ ಮಾಡಿಕೊಂಡ ಕಲ್ಯಾಣ ಅಥವಾ ಪೂರ್ವ ಚಾಲುಕ್ಯರು ಆಳ್ವಿಕೆ ನಡೆಸಿದರು. ಬಾದಾಮಿ ಚಾಲುಕ್ಯರ ಮೂಲ ಪುರುಷ ಜಯಸಿಂಹ. ಇವನ ಮಗ ರಣರಾಗ. ಇವರಿಬ್ಬರು ಕದಂಬರ ಸಾಮಂತರು ಅಥವಾ ಅಧಿಕಾರಿಗಳೋ ಆಗಿದ್ದರು. ಒಂದನೇ ಪುಲಕೇಶಿಯೇ ಬಾದಾಮಿ ಚಾಲುಕ್ಯರ ಅಧಿಕೃತ ಮೊದಲ ದೊರೆ ಎಂಬುದು ಶಾಸನಾಧಾರಗಳಿಂದ ಸ್ಪಷ್ಟ.[15] ಬಾದಾಮಿಯಲ್ಲಿರುವ ಒಂದನೇ ಪುಲಿಕೇಶಿಯ ಕ್ರಿ.ಶ 543 ಬಂಡೆಗಲ್ಲು ಶಾಸನವು ಕರ್ನಾಟಕದ ಇತಿಹಾಸದಲ್ಲಿ ಮಾತ್ರವಲ್ಲದೆ ಭಾರತೀಯ ಇತಿಹಾಸದಲ್ಲಿಯೂ ಶಕವರ್ಷದ ಕಾಲದ ಉಲ್ಲೇಖದ ಕಾರಣದಿಂದ ಮಹತ್ವ ಪಡೆದಿದೆ.

ಈ ಮನೆತನದಲ್ಲಿ ರಾಣಿ ದುರ್ಲಭಾದೇವಿ, ಕದಂಬ ಮಹಾದೇವಿ, ವಿಜಯಭಟ್ಟಾರಿಕೆ, ವಿನಯವತಿ, ಕುಂಕುಮ ಮಹಾದೇವಿ, ಲೋಕಮಹಾದೇವಿ ತ್ರೈಲೋಕ್ಯ ಮಹಾದೇವಿ, ವಿಜಯಾದಿತ್ಯನ ರಾಣಿಯರಾದ ವಿನಾಪೋಟಿ, ಲಚ್ಚಲಾದೇವಿಯರು ಪ್ರಮುಖರು.

ರಾಣಿ ದುರ್ಲಭಾದೇವಿ ಬಾದಾಮಿ ಚಾಲುಕ್ಯರ ಒಂದನೇ ಪುಲಕೇಶಿಯ ರಾಣಿಯಾಗಿದ್ದಳು. ಇವಳು ಬಪ್ಪುರ ಮನೆತನದವಳಾಗಿದ್ದಳು.[16] ಇವರ ಮಕ್ಕಳೇ ಎರಡನೆಯ ಕೀರ್ತಿವರ್ಮ ಮತ್ತು ಮೂರನೆಯ ಮಗನೇ ಮಂಗಲೀಸ. (ಮಂಗಳೇಶ) ದುರ್ಲಭಾ ದೇವಿಯನ್ನು ಮಹಾಕೂಟ ಶಾಸನವು ಸ್ವಗುರುಪತ್ನಿ, ಎಂದು ತಿಳಿಸಿದೆ. ಆದರೆ ಈಕೆ ಮಂಗಳೇಶನ ತಾಯಿ ಎಂಬುದು ಶಾಸನದಿಂದ ಸ್ಪಷ್ಟವಾಗಿದೆ.

ಮೊದಲನೆಯ ಪುಲಿಕೇಶಿಯ ದ್ವಿತೀಯ ಪುತ್ರ ಕೀರ್ತಿವರ್ಮನು ಸೇಂದ್ರಕ ವಂಶದ ದೊರೆ ಶ್ರೀ ವಲ್ಲಭ ಸೇನಾನಂದನ ಸಹೋದರಿಯನ್ನು ವಿವಾಹವಾದನು.[17] ಇಮ್ಮಡಿ ಪುಲಿಕೇಶಿ

[15] ಇ.ಐ. XXVII ಶಾ.ಸಂ.2

[16] ಡಾ.ಎ. ಮುರಿಗೆಪ್ಪ, (ಪ್ರ.ಸಂ), **ಬಾದಾಮಿ ಚಾಲುಕ್ಯರು,** ಪು–271, ಪ್ರಸಾರಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.2009.

[17] ಐ.ಎ.IX. ಪ–124,

ವಿಷ್ಣುವರ್ಧನ, ಧಾರಾಶ್ರಯ, ಜಯಸಿಂಹ ಮತ್ತು ಬುದ್ಧರಸರು ಇವರ ಮಕ್ಕಳು ಇವರೆಲ್ಲರೂ ಚಾಲುಕ್ಯ ಸಾಮ್ರಾಜ್ಯದ ನಿರ್ಮಾಣದ ಮಹಾನ್‌ಕಾರ್ಯದಲ್ಲಿ ಮಹತ್ತರ ಪಾತ್ರವನ್ನು ವಹಿಸಿದ್ದರು.

ಅಗ್ರಮಹಾದೇವಿಯನ್ನು ಇಮ್ಮಡಿ ಪುಲಿಕೇಶಿ ತನ್ನ ರಾಣಿಯರನ್ನಾಗಿ ಸ್ವೀಕರಿಸಿದ್ದನು. ಈಕೆ ಸಾಮಂತ ಕದಂಬರ ವರಪುತ್ರಿ.[18] ಹಾಗೆಯೇ ಒಂದನೆಯ ವಿಕ್ರಮಾದಿತ್ಯನು ಗಂಗರ ದುರ್ವಿನೀತನ ಮಗಳಾದ ಗಂಗ ಮಹಾದೇವಿಯನ್ನು ವಿವಾಹವಾಗಿದ್ದನು.[19] ಇವನ ಸಹೋದರನಾದ ವಿನಯಾದಿತ್ಯ ವಿನಯವತಿಯನ್ನು ವಿವಾಹವಾಗಿದ್ದನು. ಇವರ ಮಗಳೇ ಕುಂಕುಮ ಮಹಾದೇವಿ. ಇವಳನ್ನು ಅಳುಪ ವಂಶದ ದೊರೆ ಚಿತ್ರವಾಹನನಿಗೆ ವಿವಾಹಮಾಡಿಕೊಡಲಾಗಿತ್ತು. ಈಕೆಯೇ ಲಕ್ಷ್ಮೇಶ್ವರದಲ್ಲಿ ಆನೆಸಜ್ಜೆ ಬಸದಿಯನ್ನು ಕಟ್ಟಿಸಿರುವುದು.[20]

ಒಂದನೇ ವಿಕ್ರಮಾದಿತ್ಯನ ಸಹೋದರ ಚಂದ್ರಾದಿತ್ಯನ ರಾಣಿ ವಿಜಯ ಮಹಾದೇವಿ ಈ ಮನೆತನದಲ್ಲಿ ಬಹಳ ಪ್ರಮುಖಳು. ಇವಳು 'ಕ್‌ಮುದಿ ಮಹೋತ್ಸವ' ಎಂಬ ಸಂಸ್ಕೃತ ನಾಟಕವನ್ನು ಬರೆದಿರುವಳು.[21] ಇವಳೇ ಇಮ್ಮಡಿ ಪುಲಿಕೇಶಿಯ ಸೊಸೆ. ವೀನಾಪೋಟಿ ಎಂಬುವಳು ಚಂದ್ರಾದಿತ್ಯನ ಪ್ರಾಣವಲ್ಲಭೆಯಾಗಿದ್ದವಳು.[22] ಚಾಲುಕ್ಯರ ಕೊನೆಯ ಅರಸರಲ್ಲಿ ಪ್ರಸಿದ್ಧನಾದವನು ಇಮ್ಮಡಿ ವಿಕ್ರಮಾದಿತ್ಯ. ಇವನ ರಾಣಿಯರೇ ಲೋಕಮಹಾದೇವಿ ಮತ್ತು ತ್ರೈಲೋಕ್ಯಮಹಾದೇವಿಯರು[23] ಇವರು ಹೈಹಯ ವಂಶದ ರಾಜಕುಮಾರಿಯರು. ಇವರಿಬ್ಬರು ಸಹ ಸ್ಪರ್ಧಾ ಮನೋಭಾವದಿಂದ ಧಾರ್ಮಿಕ ಕೈಂಕರ್ಯ ಮತ್ತು ಕಲಾಸೇವೆಯನ್ನು ಕೈಗೊಂಡ ಮಹಾನ್ ಸ್ತ್ರೀರತ್ನಗಳು. ತಮ್ಮ ಅಧಿಕಾರದ ಅವಧಿಯಲ್ಲಿ ಅಪಾರ ಕೊಡುಗೆಗಳನ್ನು ನೀಡಿರುವರು.

### 5) ರಾಷ್ಟ್ರಕೂಟರು (ಕ್ರಿ.ಶ. 735 ರಿಂದ 973 ರವರೆಗೆ)

'ಲಟ್ಟಲೂರು ಪುರಾದೀಶ್ವರರು' ಎಂದು ಕರೆಯಲ್ಪಡುವ ರಾಷ್ಟ್ರಕೂಟರ ಮೂಲ ಸ್ಥಾನ ಉಸ್ಮಾನ್‌ಬಾದ್ ಜಿಲ್ಲೆಯ ಲಾತೂರು. ರಾಷ್ಟ್ರಕೂಟರು ಅಚ್ಚ ಕನ್ನಡಿಗರು. ಇವರ ಎಲ್ಲಾ ಶಾಸನಗಳೂ

---

[18] ಎ.ಇ. X ಪುಟ. 4

[19] ಎ.ಇ. X ಪುಟ.100

[20] ಡಾ. ಎ.ಮುರಿಗೆಪ್ಪ (ಪ್ರ.ಸಂ) **ಬಾದಾಮಿ ಚಾಲುಕ್ಯರು,** ಪು–271, ಪ್ರಸಾರಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ. 2009.

[21] ಅದೇ.

[22] ಐ.ಎ.VII. ಪುಟ–103

[23] ಐ.ಎ.X. ಪುಟ–167.

ಕನ್ನಡದಲ್ಲಿಯೇ ಇವೆ. ಮಧ್ಯಪ್ರದೇಶದ ಜಬ್ಬಲ್ ಪುರದ ಬಳಿ ಜುರಾದಲ್ಲಿ ದೊರೆತಿರುವ ಮುಮ್ಮಡಿ ಕೃಷ್ಣನ ಪ್ರಶಸ್ತಿ ಶಾಸನವೂ ಕನ್ನಡದಲ್ಲಿಯೇ ಇದೆ.[24] ಕನ್ನಡ ಸಾಹಿತ್ಯಕ್ಕೆ ಪ್ರೋತ್ಸಾಹ ನೀಡಿದ ರಾಷ್ಟ್ರಕೂಟರು ಕಲೆಗೂ ಮಹತ್ವ ನೀಡಿದರು. ರಾಷ್ಟ್ರಕೂಟರು ಗುಲ್ಬರ್ಗಾ ಜಿಲ್ಲೆಯ ಮಾಳಖೇಡವನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡಿದ್ದರಿಂದ ಅವರನ್ನು ಮಾಳಖೇಡದ ರಾಷ್ಟ್ರಕೂಟರು ಎನ್ನುವರು.

ಇಷ್ಟು ಕೀರ್ತಿ ಪ್ರಭಾವಶಾಲಿಯಾದ ರಾಷ್ಟ್ರಕೂಟ ಸಾಮ್ರಾಜ್ಯದಲ್ಲಿ ಕಂಡುಬರುವ ಪ್ರಮುಖ ರಾಣಿಯರುಗಳೆಂದರೆ, ಶೀಲಭಟ್ಟಾರಿಕೆ, ಬಾಗಿಯವ್ವೆ, ಗಾಮುಂಡಬ್ಬೆ, ಚಂದ್ರೋಬಲಬ್ಬೆ ರೇವಕನಿಮ್ಮಡಿ, ಗೋವಿಂದಬ್ಬೆ, ಚಂಡಿಯಬ್ಬೆ, ಕಂಚಿಯಬ್ಬೆ, ಭುಜಬ್ಬರಸಿ, ಪದುಮಬ್ಬರಸಿ, ಪರಬ್ಬರಸಿ, ಅಂಕಬ್ಬರಸಿ, ಚಾಗಿಯಬ್ಬೆಯರು, ಸಾಮಂತ ನೊಳಂಬ ಮನೆತನದ ಬಿಜಯಮಹಾದೇವಿ, ಪರಮಮಹಾದೇವಿ, ಮಾರಕಬ್ಬೆ, ದೊಮ್ಮಬ್ಬೆಯರು, ಗಾವಣಬ್ಬೆ, ದೀವಳಬ್ಬೆ, ಜಾಕಿಯವ್ವೆಯರು ಪ್ರಮುಖರು.

ರಾಷ್ಟ್ರಕೂಟರ ಚಕ್ರವರ್ತಿ ಧ್ರುವನ ರಾಣಿಯಾಗಿದ್ದ ವೆಂಗಿಯ ಚಾಲುಕ್ಯ ನಾಲ್ಕನೇ ವಿಷ್ಣುವರ್ಧನನ ಮಗಳಾದ ಶೀಲಾಭಟ್ಟಾರಿಕೆ ಶಾಸನದಲ್ಲಿ ಪರಮೇಶ್ವರಿ, ಪರಮಭಟ್ಟಾರಿಕೆ, ಶೀಲಮಹಾದೇವಿ ಎಂದೇ ಹೆಸರಾಗಿದ್ದಳು.[25] ಇವಳು ಧ್ರುವನ ಮೆಚ್ಚಿನ ರಾಣಿಯಾಗಿದ್ದಳು. ಇವನ ತರುವಾಯ ಮೂರನೇ ಗೋವಿಂದ ಅಧಿಕಾರಕ್ಕೆ ಬಂದನು. ಮಹಾರಾಣಿ ಬಾಗಿಯವ್ವೆ ನಾಲ್ವಡಿ ಗೋವಿಂದನ ಮಡದಿಯಾಗಿದ್ದಳು.ಇವಳು ಸಹ ವೆಂಗಿಚಾಲುಕ್ಯ ಮನೆತನದ ರಾಜಕುಮಾರಿಯಾಗಿದ್ದಳು.[26] ಬಹುಶಃ ವೆಂಗಿಚಾಲುಕ್ಯ ಮನೆತನ ರಾಷ್ಟ್ರಕೂಟರ ಕಾಲದಲ್ಲಿ ಪ್ರಮುಖ ಪ್ರತಿಸ್ಪರ್ಧಿ ಮನೆತನವಾದ್ದರಿಂದಲೇ ವೆಂಗಿಯ ರಾಜಕುವರಿಯರನ್ನು ರಾಷ್ಟ್ರಕೂಟರು ವಿವಾಹವಾಗವುದರೊಂದಿಗೆ ತಮ್ಮ ರಾಜ್ಯದ ಪ್ರತಿಷ್ಠೆಯನ್ನು ಹೆಚ್ಚಿಸಿಕೊಂಡಿದ್ದರು. ರಾಷ್ಟ್ರಕೂಟರ ಮುಮ್ಮಡಿ ಗೋವಿಂದನ ರಾಣಿಯೇ ಗಾಮುಂಡಬ್ಬೆ, ಇವಳೇ ರಾಷ್ಟ್ರಕೂಟರ ಪ್ರಖ್ಯಾತ ಅರಸ ಅಮೋಘ ವರ್ಷ ನೃಪತುಂಗನ ತಾಯಿ.[27] ರಾಷ್ಟ್ರಕೂಟರ ರಾಜಕುಮಾರಿಯರಾದ ಶರ್ವ ಅಥವಾ ಅಮೋಘವರ್ಷನ ಮಗಳಾದ ಚಂದ್ರೋಲಬ್ಬೆಯನ್ನು ಮತ್ತು ಮುಮ್ಮಡಿ ಅಮೋಘವರ್ಷನ ಮಗಳು

---

[24] ಎ.ಇ. XIX. ಪುಟ–289–290.

[25] ಎಂ.ಇ. ಜೆತ್ವಾಯಿ ತಾಮ್ರಪಟ ಶಾಸನಗಳು.

[26] ಎಂ.ಇ. ಸಂಪುಟ XXXV, **ಅಂದೂರ ತಾಮ್ರಪಟಗಳು,** ಶಾ.ಸಂ–32, ಪು256.

[27] ಡಾ.ಎಚ್.ಎಸ್. ಗೋಪಾಲರಾವ್, **ಕನಕಸಿರಿ,** ಪುಟ–510, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು, 1999.

ರೇವಕನಿಮ್ಮಡಿಯನ್ನು ತಲಕಾಡಿನ ಗಂಗಮನೆತನದ ರಾಜಕುಮಾರರಾದ ಮೊದಲನೆ ಬೂತುಗ ಹಾಗೂ ಎರಡನೆ ಬೂತುಗ ಇವರಿಗೆ ವಿವಾಹಮಾಡಲಾಯಿತು.[28]

ಗೋವಿಂದಬ್ಬೆಯು ಅಮೋಘವರ್ಷನ ಮಗನಾದ ಇಂದ್ರನ ರಾಣಿಯಾಗಿದ್ದಳು.[29] ಚಂಡಿಯಬ್ಬೆಯು ಕನ್ನರನ ರಾಣಿಯಾಗಿದ್ದಳು.[30] ಕೋಲಾರ ಜಿಲ್ಲೆಯ ಅಗಳಿ ಪ್ರಾಂತ್ಯವನ್ನು ಆಳುತ್ತಿದ್ದ ದುಗ್ಗಮಾರನ ಪತ್ನಿ ಕಂಚಿಯಬ್ಬೆ ಪ್ರಮುಖಳು.[31] ಇಮ್ಮಡಿಬೂತುಗ ಗಂಗರ ಅರಸನ ರಾಣಿಯಾಗಿದ್ದವಳು ರಾಣಿ ಪದಮಬ್ಬರಸಿ.[32] ರಾಣಿ ಪೂರ್ವಚಾಲುಕ್ಯ ರಾಜಕುಮಾರಿಯಾದ ಅಂಕಬ್ಬರಸಿ ಇಮ್ಮಡಿ ಮಾರಸಿಂಹನ ರಾಣಿಯಾಗಿದ್ದಳು.[33] ಪರಬ್ಬರಸಿ ನೀತಿಮಾರ್ಗ ಪೆರ್ಮಾಡಿಯ ರಾಣಿಯಾಗಿದ್ದಳು.[34]

ರಾಷ್ಟ್ರಕೂಟರ ಮತ್ತೊಂದು ಸಾಮಂತ ಮನೆತನವಾದ ನೊಳಂಬ ವಂಶ ಪ್ರಮುಖವಾಗಿದ್ದು, ಈ ವಂಶದಲ್ಲಿ ರಾಣಿಯರಾದ ಬಿಜಯಮಹಾದೇವಿ, ಪರಮಮಹಾದೇವಿ ಮಾರಕ್ಕಬ್ಬೆ ಮತ್ತು ದೊಮ್ಮಬ್ಬೆಯರು ನೊಳಂಬ ದೊರೆಯಾದ ಮಹೇಂದ್ರನ ರಾಣಿಯರಾಗಿದ್ದರು.[35] ಮದಕರಿ ಕಲ್ಲನ್ನಾಳುತ್ತಿದ್ದ ರಾಣಿ ಗವಣಬ್ಬೆಯು ನೊಳಂಬ ರಾಜ ಬಾಧಿರಾಜನ ರಾಣಿಯಾಗಿದ್ದಳು.[36] ದೀವಳಬ್ಬರಸಿಯು ಕದಂಬ ಮನೆತನದ ರಾಜಕುವರಿಯಾಗಿದ್ದಳು. ಈಕೆ ನೊಳಂಬ ರಾಜನನ್ನು ವಿವಾಹವಾಗಿದ್ದಳು.[37]

---

[28] ಡಾ.ಬಿ.ಎಸ್. ಶ್ಯಾಮಲಾ ರತ್ನಕುಮಾರಿ, ಅಪ್ರಕಟಿತಿ ಪಿಎಚ್.ಡಿ ಪ್ರಬಂಧ **ರಾಷ್ಟ್ರಕೂಟ ರಾಜ್ಯ,** ಪುಟಗಳು–108–190.

[29] ಎಸ್.ಐ.ಐ, Xviii, ಶಾ.ಸಂ. 14, ದೇವಗೇರಿ, ಶಾಸನಪುಟ–8.

[30] ಎಸ್.ಐ.ಐ. IX. ಶಾ.ಸಂ. 62, ಹಾಳಹರವಿ ಶಾಸನ.

[31] ಎ.ಕ. X. ಮುಬಾಗಿಲು, ಶಾಸನ. ಪು–97.

[32] ಎ.ಇಂ. iV. ಶಾ.ಸಂ. 182, ನರೇಗಲ್ ಶಾಸನ 1926–27.

[33] ಎ.ಇಂ. XXXIV ಭಾಗ–2 ಹುಲಗೂರು. ಶಾ.ಸಂ–12, ಪು–59.

[34] ಅದೇ.

[35] ಎ.ಕ. XII, ಸಿರಾ. ಶಾ.ಸಂ. 24.

[36] ಎ.ಕ. Xi ಚಳ್ಳಕೆರೆ ಶಾ.ಸಂ. 34.

[37] ಡಾ.ಎಚ್.ಎಸ್. ಗೋಪಾಲ್‌ರಾವ್ **ಕನಕಸಿರಿ,** ಪು–512. ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು. 1999.

**6) ಕಲ್ಯಾಣಿ ಚಾಲುಕ್ಯರು (ಕ್ರಿ.ಶ. 973 ರಿಂದ 1153ರವರೆಗೆ)**

ರಾಷ್ಟ್ರಕೂಟರಿಂದ ಪರಾಜಿತರಾಗಿದ್ದ ಬಾದಾಮಿಯ ಚಾಲುಕ್ಯ ವಂಶದವರೇ ಮತ್ತೆ ರಾಷ್ಟ್ರಕೂಟರನ್ನು ಸೋಲಿಸಿ ಕಲ್ಯಾಣವನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡು ಆಳಿದುದ್ದರಿಂದ ಇವರನ್ನು ಕಲ್ಯಾಣಿ ಚಾಲುಕ್ಯರು ಎಂಬ ಹೆಸರಿನಿಂದ ಕರೆಯಲಾಗಿದೆ. ರಾಷ್ಟ್ರಕೂಟರ ದೌರ್ಬಲ್ಯವನ್ನು ಬಳಸಿಕೊಂಡ ಇಮ್ಮಡಿ ತೈಲಪ ಕ್ರಿ.ಶ. 973ರಲ್ಲಿ ರಾಷ್ಟ್ರಕೂಟರ ಇಮ್ಮಡಿ ಕರ್ಕನನ್ನು ಸೋಲಿಸಿ ಅಧಿಕಾರವನ್ನು ಸ್ಥಾಪಿಸಿದನು.

ಈ ಮನೆತನದ ಪ್ರಮುಖ ರಾಣಿಯರುಗಳೆಂದರೆ, ಬೋಂಥಾದೇವಿ, ಸುಗ್ಗಲದೇವಿ, ದೇವಲದೇವಿ, ಲಕ್ಷ್ಮೀದೇವಿ, ಸೋಮಲದೇವಿ, ಅವ್ವಲದೇವಿ, ಅಕ್ಕಾದೇವಿ, ಬಾಚಲದೇವಿ, ಚಂದಲಕಬ್ಬೆ, ಕೇತಲದೇವಿ, ಲೀಲಾದೇವಿ, ಲಚ್ಚಲಾದೇವಿ ಮೈಳಲಾದೇವಿ, ಹೊಯ್ಸಳದೇವಿ ಕಂಚಲದೇವಿ, ಕೇತಲದೇವಿ, ಪದ್ಮಲದೇವಿ, ಸಾವಲದೇವಿ, ಭಾಗಲಮಹಾದೇವಿ, ಮಲಯವತಿದೇವಿ ಚಿಕಲದೇವಿ, ಎಕ್ಕಲದೇವಿ, ಬರ್ಮಲದೇವಿ, ಸಿರಿಯಾದೇವಿಯರನ್ನು ಒಳಗೊಂಡಂತೆ ಇನ್ನು ಹಲವಾರು ರಾಣಿಯರು ಇದ್ದಾರೆ.

ಬೊಂಥಾದೇವಿ ಕಲಚೂರಿ ಲಕ್ಷ್ಮಣ ರಾಜನ ಮಗಳು. ಇವಳನ್ನು ನಾಲ್ಕನೇ ವಿಕ್ರಮಾದಿತ್ಯ ಮದುವೆಯಾಗಿದ್ದನು. ಇವರ ಮಗನೇ ಇಮ್ಮಡಿ ತೈಲಪ. ರಾಣಿಸುಗ್ಗಲಾದೇವಿ ದೇವಲಾದೇವಿ, ಮತ್ತು ಲಕ್ಷ್ಮೀ ದೇವಿಯರು ಇಮ್ಮಡಿ ಜಯಸಿಂಹನ ರಾಣಿಯರು ಸುಗ್ಗಲಾದೇವಿ ಜಯಸಿಂಹನ ಪಟ್ಟದ ರಾಣಿಯಾಗಿದ್ದಳು. ಸೋಮಲಾದೇವಿ ಮತ್ತು ಅವ್ವಲಾದೇವಿಯರು ಇವನ ಹೆಣ್ಣುಮಕ್ಕಳು. ಇವರಲ್ಲಿ ಅವ್ವಲಾ–ದೇವಿಯನ್ನು ಸೇವುಣರ ರಾಜ ಭಿಲ್ಲಮನಿಗೆ ಮಧುವೆ ಮಾಡಿಕೊಡಲಾಗಿತ್ತು. ಇವನ ಸೋದರಿಯೇ ಅಕ್ಕಾದೇವಿ, ಈಕೆಯೇ 'ವೈರಿನೃಪ ಬೈರವಿ' ಎಂದು ಖ್ಯಾತಿಯಾಗಿದ್ದವಳು.[38] ಬಂಕಾಪುರದ ಕದಂಬ ಮಯೂರವರ್ಮನ ರಾಣಿಯಾಗಿದ್ದಳು.[39] ಸ್ಥಾನಬಲ ಮತ್ತು ಸ್ವಕಾರ್ಯ ಬಲಗಳಿಂದ ಪ್ರಾಮುಖ್ಯತೆಯಿಂದ ಬೆಳಗಿದ್ದವಳು ಜಯಸಿಂಹನ ಮತ್ತೋರ್ವ ಮಡದಿಯಾಗಿದ್ದವಳು ಸುಗ್ಗಲದೇವಿ, ಇವನ ನಂತರ ಅಧಿಕಾರಕ್ಕೆ ಬಂದ ಇವನ ಹಿರಿಯ ಮಗ ಒಂದನೇ ಸೋಮೇಶ್ವರನು ಪ್ರಮುಖನಾಗಿದ್ದನು. ಇವನು ತನ್ನ ಆಳ್ವಿಕೆಯ ಬಹುಕಾಲವನ್ನು ಚೋಳರೊಂದಿಗೆ ಹೋರಾಡುತ್ತಾ

---

38 ಐ.ಎ. XVII, ಪು–270–75, ಬೇಲೂರು, ತಾ. ಬಾದಾಮಿ, ಕ್ರಿ.ಶ. 1022.

39 ಎ.ಇ. XV, ಶಾ.ಸಂ. 6 ಸೂಡಿತಾ ರೋಣ, ಕ್ರಿ.ಶ. 1010.

ಕಳೆದನು. ಒಂದನೇ ಸೋಮೇಶ್ವರನಿಗೆ ಬಾಚಲದೇವಿ, ಚಂದಲಕಬ್ಬೆ, ಕೇತಲದೇವಿ, ಲೀಲಾದೇವಿ, ಲಚ್ಚಲಾದೇವಿ, ಮೈಳಲದೇವಿ, ಹೊಯ್ಸಳದೇವಿ ಮತ್ತು ಚಾಮಲದೇವಿಯರು ಎಂಬ ಎಂಟು ಜನ ರಾಣಿಯರಿದ್ದರು ಇವನ ಆಡಳಿತದ ತರುವಾಯ ಅಧಿಕಾರಕ್ಕೆ ಬಂದಂತಹ ಇಮ್ಮಡಿ ಸೋಮೇಶ್ವರ, ಆರನೇ ವಿಕ್ರಮಾದಿತ್ಯ ಮತ್ತು 4ನೇ ಜಯಸಿಂಹರು ಒಂದನೇ ಸೋಮೇಶ್ವರ ಮತ್ತು ಬಾಚಲದೇವಿಯರಲ್ಲಿ ಜನಿಸಿದ ಮಕ್ಕಳು. ಒಂದನೇ ಸೋಮೇಶ್ವರನ ಮಗಳಾದ ಸುಗ್ಗಲೆಯನ್ನು ಮಹಾಮಂಡಲೇಶ್ವರ ಸಿಂಗಣದೇವನಿಗೆ ಕೊಟ್ಟು ವಿವಾಹ ಮಾಡಿಕೊಡಲಾಗಿತ್ತು. ಇವನ ನಂತರ ಅಧಿಕಾರಕ್ಕೆ ಬಂದ ಇಮ್ಮಡಿ ಸೋಮೇಶ್ವರನಿಗೆ ಕಂಚಲದೇವಿ ಮತ್ತು ಮೈಳಲದೇವಿಯರು ಎಂಬ ರಾಣಿಯರಿದ್ದರು.

ಕಲ್ಯಾಣದ ಚಾಲುಕ್ಯರ ಸುಪ್ರಸಿದ್ಧ ದೊರೆ ಆರನೇ ವಿಕ್ರಮಾದಿತ್ಯ ಅಥವಾ ವಿಕ್ರಮಾಂಕ ಇವನಿಗೆ ಹನ್ನೆರಡು ಜನ ರಾಣಿಯರಿದ್ದರು. ಅವರಲ್ಲಿ ಚಂದಲಾದೇವಿ ಇವನ ಪ್ರಮುಖ ರಾಣಿಯಾಗಿದ್ದಳು. ಇವಳು ನೃತ್ಯವಿದ್ಯಾಧರಿ, ಅಭಿನವ ಸರಸ್ವತಿ ಎಂಬ ಬಿರುದು ಪಡೆದಿದ್ದಳು.[40] ಇವನ ಮತ್ತೊಬ್ಬ ಹೆಂಡತಿಯಾದ 'ಸಾವಳದೇವಿಯು' ದರಿಕಾಡು ನಾಡಿನ ಒಡೆಯನು, ಮಂಗಳ ವಾಡದ ಮಹಾಮಂಡಳೇಶ್ವರನೂ, ಆದ ಜೋಗಮ್ರರಸುವಿನ ಪತ್ನಿ ತಾರಾದೇವಿಯರ ಮಗಳಾಗಿದ್ದಳು.[41] ಇವನಿಗೆ ಲಕ್ಷ್ಮೀದೇವಿ ಎಂಬ ಮತ್ತೋರ್ವ ಮಡದಿ ಇದ್ದು ಇವಳಿಗೆ 'ಪಿರಿಯರಸಿ' ಎಂಬ ಬಿರುದಿತ್ತು.[42] ಜಕ್ಕಲಾದೇವಿಯು ಕದಂಬ ಮನೆತನದ ಟಕ್ಕನೆಂಬುವನ ಮಗಳಾಗಿದ್ದಳು, ಮಲ್ಲೆಯಮದೇವಿಯರು ಕರಾಡದ ಶಿಲಾಹಾರ ಮನೆತನದ ಮಾರಸಿಂಹನೆಂಬುವನ ಅರಸುಮಗಳಾದ ಚಂದಲಾದೇವಿ ಮತ್ತು ಚಂದ್ರಲೇಖೆ, ಶಾನಭೋವ, ರಾಯಣ ಮತ್ತು ಓಲಜಿಕಬ್ಬೆ ಇವರ ಮಕ್ಕಳಾದ ಮಾಳಲಾದೇವಿ, (ಮಾಲಿಕೆ) ಎಂಗಲದೇವಿಯರು ಇವನ ರಾಣಿಯರುಗಳಾಗಿದ್ದರು.[43] ಹಾಗೆಯೇ ಈ ಮನೆತನದ ಆರನೇ ವಿಕ್ರಮಾದಿತ್ಯನ ಪ್ರಸಿದ್ಧ ರಾಣಿಯರಲ್ಲಿ ಪ್ರಮುಖಳಾದ ಶಿಲಾಹಾರಮನೆತನದ ಚಿತ್ರಲೇಖೆ ಅಥವಾ ಚಂದಲದೇವಿ ಇವಳನ್ನು ಶಾಸನಗಳು 'ಅಭಿನವ ಸರಸ್ವತಿ' 'ನೃತ್ಯ ವಿಧ್ಯಾಧರಿ'

---

[40] ಡಾ. ಎಂ. ಚಿದಾನಂದ ಮೂರ್ತಿ, **ಕರ್ನಾಟಕ ಸಂಸ್ಕೃತಿ,** ಪು–25, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು. 2005.

[41] ರಾಮಚಂದ್ರ ಹನುಮಂತ ದೇಶಪಾಂಡೆ ಮತ್ತು ಶ್ರೀಪಾದ ರಾಮಚಂದ್ರ ದೇಶಪಾಂಡೆ, **ಕರ್ನಾಟಕ ಸಾಮ್ರಾಜ್ಯ** (ಸಂ–2) ಪು–297, ಬೆಂಗಳೂರು ಸಿಟಿ ಬೆಂಗಳೂರು ಪ್ರೆಸ್, ಮೈಸೂರು ರೋಡ್. 1929.

[42] ಅದೇ

[43] ಅದೇ, ಪು–298.

ಎಂದು ತಿಳಿಸಿವೆ. ಇವನ ತರುವಾಯ ಮಗ ಮೂರನೇ ಸೋಮೇಶ್ವರ ಅಧಿಕಾರಕ್ಕೆ ಬಂದನು. ಇವನ ರಾಣಿಯರೆಂದರೆ, ಎಕ್ಕಲದೇವಿ, ಬರ್ಮಲದೇವಿಯರು.[44]

**7) ಹೊಯ್ಸಳ ಸಾಮ್ರಾಜ್ಯ (ಕ್ರಿ.ಶ. 1000 ದಿಂದ 1346ರವರೆಗೆ)**

ಗಂಗರು ದುರ್ಬಲರಾಗುತ್ತಿದ್ದ ಸಮಯದಲ್ಲೇ ಕಾಣಿಸಿಕೊಂಡಿದ್ದು ಹೊಯ್ಸಳ ಸಾಮ್ರಾಜ್ಯ. ಹೊಯ್ಸಳರು ಆರಂಭದಲ್ಲಿ ಕಲ್ಯಾಣ ಚಾಲುಕ್ಯರ ಸಾಮಂತರಾಗಿದ್ದರೂ ಸ್ವತಂತ್ರರಾಗಿ ಆಡಳಿತ ನಡೆಸಿದ್ದರಿಂದ ಇವರಿಗೆ ಇತಿಹಾಸದಲ್ಲಿ ವಿಶೇಷ ಸ್ಥಾನ ಲಭಿಸಿದೆ. ಚೋಳರನ್ನು ಎದುರಿಸುತ್ತಾ ಅವರು ಗಂಗವಾಡಿಯನ್ನು ಆಕ್ರಮಿಸುವುದನ್ನು ತಡೆಯಲು ಪ್ರಯತ್ನಿಸಿದ ನೃಪಕಾಮನೇ, ಈ ಮನೆತನದ ಸ್ಥಾಪಕ. ಇವರು ದ್ವಾರಸಮುದ್ರವನ್ನು ತಮ್ಮ ರಾಜಧಾನಿಯನ್ನಾಗಿಸಿಕೊಂಡು ಆಡಳಿತ ನಡೆಸಿದರು.

ಈ ಮನೆತನದ ರಾಣಿಯರುಗಳೆಂದರೆ, ಏಚಲದೇವಿ, ಶಾಂತಲೆ, ಲಕ್ಷ್ಮೀದೇವಿ, ಬೊಮ್ಮಲದೇವಿ, ಚೋಳಮಹಾದೇವಿ, ಸೋಮಲದೇವಿ, ಪದ್ಮಲಾದೇವಿ, ಉಮಾದೇವಿ, ಚಿಕ್ಕತಾಯಿ, ಬುಕ್ಕತಾಯಿ ಮುಂತಾದವರು ಏಚಲದೇವಿ ಎಂಬ ಹೆಸರಿನ ಮೂರು ಜನ ರಾಣಿಯರು ಹೊಯ್ಸಳ ವಂಶದಲ್ಲಿದ್ದಾರೆ. ಎರೆಯಂಗನ ಪತ್ನಿಯೂ, ವಿಷ್ಣುವರ್ಧನನ ತಾಯಿಯೂ, ಆದವಳು ಒಬ್ಬಳು. ಒಂದನೆಯ ನರಸಿಂಹನ ಪಟ್ಟಮಹಿಷಿ ಎರಡನೆಯ ಬಲ್ಲಾಳನ ತಾಯಿ ಆದವಳು ಮತ್ತೊಬ್ಬಳು. ಹೊಯ್ಸಳ ರಾಜಕುಮಾರ ಉದಯಾದಿತ್ಯನ ಮಗಳು ಒಬ್ಬಳು. ಎರೆಯಂಗನ ಪತ್ನಿ ಏಚಲದೇವಿಯನ್ನು ಚೆಲ್ಲಿಂಗೆರೆವಟ್ಟು ಶೀಲಗುಣದಿಂ ಎಂದೂ, ನರಸಿಂಹನ ರಾಣಿ ಏಚಲದೇವಿಯನ್ನು ಮೃದುಪದೆ, ಸುದತಿ ಎಂದೂ ಬಣ್ಣಿಸಲಾಗಿದೆ. ಕೆಲವು ಕಡೆ ಏಚಲದೇವಿಗೆ ಸಂವಾದಿಯಾಗಿ ಏಚಲ, ಏಚಲೆ ಮತ್ತು ಏಚಲಾದೇವಿ ಎಂಬ ರೂಪಗಳು ದೊರೆಯುತ್ತವೆ.[45]

ಹೊಯ್ಸಳ ಸಾಮ್ರಾಟ ವಿಷ್ಣುವರ್ಧನನ ಪಟ್ಟದ ಮಹಿಷಿ ಶಾಂತಲೆ ವಿಷ್ಣುವರ್ಧನನ ರಾಣಿಯರಲ್ಲೆಲ್ಲಾ ಸುಪ್ರಸಿದ್ದಳು. ಇವಳು ಬಳ್ಳಿಗಾವೆಯ ಮಾರಸಿಂಗಯ್ಯ ಮತ್ತು ತಾಯಿ ಮಾಚಿಕಬ್ಬೆಯರ ಏಕೈಕ ಪುತ್ರಿ.[46] ಇದನ್ನು ಶ್ರವಣಬೆಳಗೊಳದ ಶಾಸನಗಳೆಲ್ಲವೂ ತಿಳಿಯಪಡಿಸುತ್ತವೆ.

---

[44] ಅದೇ, ಪು–299–300.

[45] ಅರವಿಂದ ಮಾಲಗಿತ್ತಿ, (ಪ್ರಸಂ) **ಕರ್ನಾಟಕ ವಿಷಯ ವಿಶ್ವಕೋಶ, ಪು–169,** ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿಶ್ವವಿದ್ಯಾಲಯ. 2005.

[46] ಎ.ಕ. ii, ಶ್ರವಣಬೆಳಗೊಳದ ಶಾಸನಗಳು.

ಬಮ್ಮಲಾದೇವಿ ಎಂಬ ರಾಣಿಯೋರ್ವಳು ವಿಷ್ಣುವರ್ಧನನ ರಾಣಿಯಾಗಿದ್ದಳು.[47] ಹಾಗೆಯೇ ವಿಷ್ಣುವರ್ಧನನಿಗೆ ಲಕ್ಷ್ಮಿದೇವಿ ಎಂಬ ರಾಣಿ ಇದ್ದಳು. ಇವಳೇ ನರಸಿಂಹನ ತಾಯಿ. ಈ ನರಸಿಂಹನಿಗೆ ರಾಜಲೆ, ಚಿಕ್ಕಶಾಂತಲೆ, ಲಕ್ಷ್ಮೀದೇವಿ ಎಂಬ ರಾಣಿಯರಿದ್ದರು. ಇದು ಆನುಯಲ್ ರಿಪೋರ್ಟ್ಸ್ ಸೌತ್‌ಇಂಡಿಯನ್ ಎಫಿಗ್ರಫಿಯಲ್ಲಿ ದಾಖಲಾಗಿದೆ. ಹೊಯ್ಸಳರಲ್ಲಿ ಪ್ರಖ್ಯಾತನಾದ ಮತ್ತೋರ್ವರಾಜ ಎರಡನೇ ವೀರಬಲ್ಲಾಳ ಇವನು ಚೋಳರ ಮನೆತನಕ್ಕೆ ಸೇರಿದ ಚೋಳಮಹದೇವಿಯನ್ನು ವಿವಾಹವಾಗಿದ್ದನು.[48] ಇವನು ತನ್ನ ಮಗಳಾದ ಸೋಮಲದೇವಿಯನ್ನು ಚೋಳರ ದೊರೆಯಾದ ಮುಮ್ಮಡಿ ಕುಲೋತ್ತುಂಗನಿಗೆ ತನ್ನ ಹೊಯ್ಸಳ ರಾಜಕುಮಾರಿಯನ್ನು ಮಧುವೆಮಾಡಿಕೊಟ್ಟಿದ್ದನು.[49] ಇದರಿಂದ ಹೊಯ್ಸಳ ಮತ್ತು ಚೋಳರ ನಡುವಿನ ಸುಮಧುರ ಬಾಂಧವ್ಯ ಸಾಧ್ಯವಾಯಿತು. ಇಮ್ಮಡಿವೀರ ಬಲ್ಲಾಳನಿಗೆ ಉಮಾದೇವಿ ಎಂಬ ರಾಣಿ ಇದ್ದಳು.[50]

ಹೊಯ್ಸಳರು ಕಲ್ಯಾಣದ ಚಾಲುಕ್ಯರೊಡನೆ ಸಾಮಂತ ಸಖ್ಯಸಂಬಂಧವನ್ನು ಬೆಳೆಸಿಕೊಂಡಿದ್ದರು. ಚಾಲುಕ್ಯರ ಚಕ್ರವರ್ತಿ ಒಂದನೆಯ ಸೋಮೇಶ್ವರನ ಹಿರಿಯ ರಾಣಿಯ ಹೆಸರು ಹೊಯ್ಸಳದೇವಿ ಹೊನ್ನಾಳಿಯ ಗೌಡನೊಬ್ಬನಿಂದ ಸ್ಥಾಪಿತವಾದ ಮಲ್ಲಿಕೇಶ್ವರನ ತೀರ್ಥಕ್ಕೋಸ್ಕರ ತುಂಗಾನದಿಯ ದಂಡೆಯ ಮೇಲೆ ಉಂಬಳಿ ಬಿಡುವ ಸಂಗತಿಯನ್ನುಳ್ಳ ಕ್ರಿ.ಶ. 1055ರ ಶಾಸನವೊಂದರಲ್ಲಿ ಈಕೆಯ ಹೆಸರು ಉಲ್ಲೇಖಗೊಂಡಿದೆ. ಚಿಕ್ಕತಾಯಿ, ಬುಕ್ಕಾಯಿತಾಯಿಯರು ಸಹ ಒಂದನೇ ಸೋಮೇಶ್ವರನ ರಾಣಿಯರಾಗಿದ್ದರು.[51]

### 8) ವಿಜಯನಗರದ ಸಾಮ್ರಾಜ್ಯ (ಕ್ರಿ.ಶ. 1336 ರಿಂದ ಕ್ರಿ.ಶ. 1565ರವರೆಗೆ)

ವಿಜಯನಗರ ಸಾಮ್ರಜ್ಯವನ್ನು ಕ್ರಿ.ಶ. 1336ರಲ್ಲಿ ಹರಿಹರ ಮತ್ತು ಬುಕ್ಕರು ಸ್ಥಾಪಿಸಿದರು. ಕ್ರಿ.ಶ. ಹದಿಮೂರನೆಯ ಶತಮಾನದಲ್ಲಿ ಭಾರತವು ಮುಸಲ್ಮಾನರ ಆಕ್ರಮಣದಿಂದ ತತ್ತರಿಸಿತ್ತು. ಉತ್ತರ ಭಾರತವನ್ನು ಮಾತ್ರವಲ್ಲದೆ ದಕ್ಷಿಣ ಭಾರತದ ಕಡೆಗೂ ಪ್ರವೇಶಿಸಿದ ಮುಸ್ಲಿಮರು ಇಲ್ಲಿನ

---

47 ಎ.ಕ. V, ಅರಸೀಕೆರೆ, ಶಾ.ಸಂ. 32, ಮತ್ತು ಹಾರನಹಳ್ಳಿ, ಶಾ.ಸಂ 124, ಕ್ರಮವಾಗಿ, ಕ್ರಿ.ಶ. 1057, 1060.

48 ಎ.ಕ. V, ಚನ್ನರಾಯಪಟ್ಟಣ, ಶಾ.ಸಂ 205, ಕ್ರಿ.ಶ. 1200.

49 ಡಾ. ಸೂರ್ಯನಾಥ್.ಯು. ಕಾಮತ್, **ಕರ್ನಾಟಕದ ಗೆಸಿಟಿಯಾರ್,** ಭಾಗ–1, ಪು–213, ಕರ್ನಾಟಕ ರಾಜ್ಯ ಸರ್ಕಾರ, ಬೆಂಗಳೂರು. 1984.

50 ಎ.ಕ. V, ಅರಸೀಕೆರೆ, ಶಾ.ಸಂ. 85, ಅರಸಿಕೆರೆ, ಕ್ರಿ.ಶ. 1190.

51 ಎ.ಆರ್.ಎಸ್.ಐ.ಇ –-29, ಪುಟ–46. 1928

ಐಶ್ವರ್ಯವನ್ನು ಲೂಟಿಮಾಡಿದರು. ಪರಸ್ಪರ ಹೋರಾಡುತ್ತಿದ್ದ ದಕ್ಷಿಣದ ಅರಸರ ದೌರ್ಬಲ್ಯವನ್ನು ಬಳಸಿಕೊಂಡು ಆಳ್ವಿಕೆಯನ್ನು ನಡೆಸಿದರು. ತಮ್ಮನ್ನು ವಿರೋಧಿಸಿದವರನ್ನು ಅಮಾನುಷವಾಗಿ ಕೊಂದರು. ಬಲತ್ಕಾರವಾಗಿ ತಮ್ಮ ಮತಕ್ಕೆ ಸೇರಿಸಿಕೊಂಡರು. ಆಗ ಜನತೆಯ ಹಂಬಲಿಕೆಗೆ ಅನುಗುಣವಾಗಿ ರೂಪಿತವಾದ ವಿಜಯನಗರ ಸಾಮ್ರಾಜ್ಯವು ಕ್ರಿ.ಶ. 1336 ರಿಂದ 1565ರವರೆಗೆ ಸುಮಾರು 230 ವರ್ಷಗಳ ಕಾಲ ದಕ್ಷಿಣ ಭಾರತದಲ್ಲಿ ವಿಶೇಷ ಮಹತ್ವಪಡೆಯಿತು. ಈ ಸಾಮ್ರಾಜ್ಯವು ಒಟ್ಟು ನಾಲ್ಕು ಮನೆತನಗಳ ಮೂಲಕ ಆಳ್ವಿಕೆ ನಡೆಸಿತು. ಅವುಗಳೆಂದರೆ.

1) ಸಂಗಮ ಮೆನತನ – ಕ್ರಿ.ಶ. 1336 ರಿಂದ 1485 ರವರೆಗೆ
2) ಸಾಳುವ ಮನೆತನ – ಕ್ರಿ.ಶ. 1485 ರಿಂದ 1503 ರವರೆಗೆ
3) ತುಳುವ ಮನೆತನ – ಕ್ರಿ.ಶ. 1503 ರಿಂದ 1565 ರವರೆಗೆ
4) ಅರವೀಡು ಮನೆತನ. – ಕ್ರಿ.ಶ 1570 ರಿಂದ 1646 ರವರೆಗೆ.

ಈ ಮನೆತನಗಳಲ್ಲಿ ಕಾಣಸಿಗುವ ರಾಣಿಯರುಗಳೆಂದರೆ,

**1) ಸಂಗಮ ಮನೆತನ : (ಕ್ರಿ.ಶ. 1336 ರಿಂದ 1485ರವರೆಗೆ)**

ವಿಜಯನಗರ ಸಾಮ್ರಾಜ್ಯದಲ್ಲಿ ಆಳ್ವಿಕೆ ನಡೆಸಿದ ಮೊಟ್ಟಮೊದಲ ವಂಶವಾಗಿದೆ. ಇಲ್ಲಿ ಒಟ್ಟು ಒಂಭತ್ತು ಅರಸರು ಕ್ರಿ.ಶ. 1336 ರಿಂದ 1485ರವರೆಗೆ ಒಟ್ಟು 151 ವರ್ಷಗಳ ಕಾಲ ಆಳ್ವಿಕೆ ನಡೆಸಿದ್ದಾರೆ. ಈ ವಂಶ ಸಂಗಮರ ಕಾಲದಿಂದ ಆರಂಭಗೊಂಡು ವಿರುಪಾಕ್ಷ ರಾಯನ ಕಾಲದಲ್ಲಿ (1456–85) ಈ ಸಂತತಿ ಕೊನೆಗೊಂಡಿತು. ಈ ಮನೆತನದಲ್ಲಿ ಇಮ್ಮಡಿ ದೇವರಾಯನು ಪ್ರಮುಖ ಅರಸನಾಗಿದ್ದು, ಕಲೆಗೆ ಹೆಚ್ಚು ಪ್ರಾಮುಖ್ಯತೆಯನ್ನು ನೀಡಿದ್ದನು. ಈ ವಂಶದ ಚಕ್ರವರ್ತಿಗಳು ತಮ್ಮದೇ ಆದ ಕೊಡುಗೆಗಳನ್ನು ನೀಡಿದ್ದಾರೆ. ಅವರಂತೆಯೇ ಇವರುಗಳೊಂದಿಗೆ ಸಾಮ್ರಾಜ್ಯದಲ್ಲಿದ್ದುಕೊಂಡು, ಅವರುಗಳ ಏಳು–ಬೀಳುಗಳು, ದಿಗ್ವಿಜಯ, ದಂಡಯಾತ್ರೆ, ಧಾರ್ಮಿಕ ಮೊದಲಾದ ಕಾರ್ಯಕ್ರಮಗಳಲ್ಲಿ ರಾಣಿಯರು ಪಾಲ್ಗೊಳ್ಳುತ್ತಿದ್ದರು.

ಕಾಮಾಂಬಿಕೆ, ಹೊನ್ನಮ್ಮ, ದೇವಾಯಿ, ಚೊಮ್ಮದೇವಿ, ಗಂಗಾದೇವಿ, ರಾಮಾದೇವಿ, ಮುಲ್ಲಾದೇವಿ, ಬುಕ್ಕವ್ವೆ, ಬುಕ್ಕಾಂಬ, ಅಂಣಲಾದೇವಿ, ಭೀಮಾದೇವಿ, ಸಿಂಹಳದೇವಿ ಕಮಲಾದೇವಿ ಕಾಮಾಂಬಿಕೆ, ಈ ವಂಶದ ರಾಣಿಯರು. ಕಾಮಾಂಬಿಕೆ ಸಂಗಮನ ರಾಣಿ ಹಾಗೂ ಈ ವಂಶದ

ಪ್ರಥಮರಾಣಿ, ಇವಳಿಗೆ ಗೌರಾಂಬಿಕೆ, ದೇಮಾಂಬಿಕೆ ಎಂಬ ಹೆಸರುಗಳಿದ್ದವು.[52] ಸಂಗಮನಿಗೆ ಶಾರದ, ಮೀನಾಂಬಿಕೆ, ಗೌರಾಂಬಿಕೆ, ಕಾಮಾಕ್ಷಿ ಎಂಬ ರಾಣಿಯರಿದ್ದರು.[53] ಈ ಕಾಮಾಂಬಿಕೆ ಕಂಪಿಲ ರಾಯನ ಮಗಳೆಂದು ಪ್ರೊ. ಒಡೆಯರ್ ಬಿ. ಹೆಗ್ಗಡೆಯವರು ತಮ್ಮ ಹಕ್ಕಬುಕ್ಕ ಪುಸ್ತಕದಲ್ಲಿ ವ್ಯಕ್ತಪಡಿಸುತ್ತಾ ಅಭಿಪ್ರಾಯಿಸಿದ್ದಾರೆ.[54] ಹೊನ್ನಮ್ಮ ಬುಕ್ಕನ ನೆಚ್ಚಿನ ಮತ್ತು ಪ್ರಮುಖ ರಾಣಿಯಾಗಿದ್ದಳು. ಇವನ ಮಗನೇ ಎರಡನೇ ಹರಿಹರ. ಇವಳಿಗೆ ಹೊನ್ನಾಯಿ ಗೌರಾಂಬಿಕೆ ಎಂಬ ಹೆಸರಿದ್ದವು.[55] ಚಿತ್ರದುರ್ಗದ ಕೋಟೆಯಲ್ಲಿ ದೊರೆತ ಒಂದನೇ ಬುಕ್ಕರಾಯನ ಮಗ ವೀರಕಂಪಣರಾಯನ ಹೊಸಕಲ್ಬರಹದಲ್ಲಿಯೂ ದೇವಾಯಿಯ ಹೆಸರು ಉಲ್ಲೇಖಗೊಂಡಿದೆ.[56] ಚೊಮ್ಮದೇವಿಯು ಬುಕ್ಕನ ರಾಣಿಯಾಗಿದ್ದಳು. ಈಕೆ ಪೆನುಗೊಂಡೆ ರಾಜ್ಯದ ಬುಕ್ಕರಾಯನ ಮಗಳು. ಇವಳಿಗೆ ಪದುಮಲದೇವಿ ಎಂತಲೂ ಹೆಸರಿದ್ದು ಇವಳನ್ನು ಕೆಲವೊಂದು ಶಾಸನಗಳು ಇವಳನ್ನು ಪದುಮಲ ದೇವಿಯೆಂದೇ ಕರೆದಿವೆ. ಹಿರಿಯ ರಾಣಿ ದೇವಾಯಿ. ಈಕೆಯ ಕುರಿತು ಸಿಗುವ ಆಧಾರವೆಂದರೆ ಗಂಗಾದೇವಿ ರಚಿಸಿದ 'ಮಧುರ ವಿಜಯಂ' ಗ್ರಂಥದಲ್ಲಿ ಇದರಲ್ಲಿ ದೇವಾಯಿ ಮತ್ತು ಬುಕ್ಕನು ನನ್ನ ಅತ್ತೆ, ಮಾವನೆಂದು ಹೇಳಿ ವೀರಕಂಪಣ್ಣನು ತನ್ನ ಪತಿಯೆಂದು ತಿಳಿಸಿದರುವುದರಿಂದ ದೇವಾಯಿಯ ಮಗನೇ ಕಂಪಣ್ಣನೆಂದು ತಿಳಿಯಬಹುದು.[57]

ಸಂಗಮರ ವಂಶದಲ್ಲಿ ಹೆಚ್ಚು ಪ್ರಮುಖವಾದ ಹೆಸರು ಎಂದರೆ ಗಂಗಾದೇವಿಯದು. ಈಕೆ ವೀರಕಂಪಣ್ಣನ ರಾಣಿ "ದೇವಾಯಿ ಮತ್ತು ಬುಕ್ಕನ ಸೊಸೆ.[58] ವಿಜಯನಗರದ ಸಾಮ್ರಾಜ್ಯವನ್ನರಿಯಲು ಇರುವ ಆಧಾರಗಳಲ್ಲಿ ಒಂದಾದ 'ಮಧುರ ವಿಜಯ' ಕೃತಿಯ ಕರ್ತೃ. ಕಂಪಣ್ಣನ ಮತ್ತೋಬ್ಬ ರಾಣಿ ರಮಾದೇವಿ.[59] ಮುಲ್ಲಾದೇವಿ ಎಂಬುವಳು ಎರಡನೇ ಹರಿಹರನ ರಾಣಿ. ಈಕೆಗೆ ಮುಲ್ಲಾಂಬಿಕೆ ಎಂಬ ಹೆಸರಿತ್ತು. ಎರಡನೇ ಹರಿಹರನ ಮತ್ತೋಬ್ಬ ಪ್ರಮುಖ ರಾಣಿ

---

[52] ವಸುಂಧರಾ ಫಿಲಿಯೋಜಾ, **ಅಳಿದುಳಿದ ಹಂಪೆ,** ಪು–18, ಪ್ರೇಮಸಾಹಿತ್ಯ ಪ್ರಕಾಶನ, ಬೆಂಗಳೂರು. 1991.

[53] ಪ್ರೊ. ರಾಘವೇಂದ್ರ ರಾವ್, **ವಿಜಯನಗರ,** ಎಚ್. ವೆಂಕಟರಾಮಯ್ಯ ಅಂಡ್ ಸನ್ಸ್, ಬೆಂಗಳೂರು. 1948.

[54] ಪ್ರೊ. ಒಡೆಯರ್, ಬಿ. ಹೆಗಡೆ, **ಹಕ್ಕಬುಕ್ಕ,** ಪುಟ–32, ತನುಮನ ಪ್ರಕಾಶನ, ಮೈಸೂರು, 2003.

[55] ಸೂರ್ಯ ನಾರಾಯಣ ರಾವ್, (ಅನು) **ಮರೆಯಲಾಗರದ ಮಹಾಸಾಮ್ರಾಜ್ಯ ವಿಜಯನಗರ,** ಪು–208, ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.2000.

[56] ಲಕ್ಷ್ಮಣ್ ತೆಲಗಾವಿ, **ಶಾಸನ ಅಧ್ಯಯನ,** ಪು–22–23.

[57] ಕೆ. ಕುಶಾಲಪ್ಪಗೌಡ, (ಅನು) **ಮಧುರ ವಿಜಯ,** ಪು–7–14, ಜಯಗೌರಿ ಪ್ರಕಾಶನ, ಅಂಚೆಪೆರಾಜಿ ಸುಳ್ಯ. 1989.

[58] ಕೆ. ಕುಶಾಲಪ್ಪಗೌಡ, (ಅನು) **ಮಧುರ ವಿಜಯ,** ಪು–7–14, ಜಯಗೌರಿ ಪ್ರಕಾಶನ, ಅಂಚೆಪೆರಾಜಿ ಸುಳ್ಯ. 1989.

[59] ವಸುಂಧರಾ ಫಿಲಿಯೋಜಾ, **ವಿಜಯನಗರ ಸಾಮ್ರಾಜ್ಯ ಸ್ಥಾಪನೆ,** ಪು–33, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು. 1980.

ಬುಕ್ಕವ್ವೆ. ಕ್ರಿ.ಶ. 1397ರ ಶಾಸನದಲ್ಲಿ ಈಕೆಯ ಉಲ್ಲೇಖವಿದೆ.[60] ಸಂಗಮ ವಂಶದ ಒಂದನೇ ದೇವರಾಯನ ಪ್ರಮುಖ ರಾಣಿಯರೆಂದರೆ, ಅಂಣಲಾದೇವಿ ಮತ್ತು ಭೀಮಾದೇವಿಯರು. ಭೀಮಾದೇವಿ ಶ್ರವಣಬೆಳಗೊಳದ ಪಂಡಿತಾಚಾರ್ಯರ ಶಿಷ್ಯೆಯಾಗಿದ್ದಳು. ಮಂಗಾಯಿ ಬಸ್ತಿಯಲ್ಲಿ 'ಶಾಂತಿ ತೀರ್ಥಂಕರರ ಬಿಂಬದ ಮೇಲೆ ಶ್ರೀ ಮತ್ತಂಚಿತಾಚಾರ್ಯ ಗುಡಿ ದೇವರಾಯ ಮಹಾರಾಯರ ರಾಣಿ ಭಿಮಾದೇವಿ ಮಾಡಿದ್ದ ಶಾಸ್ತ್ರಿನಾಥ ಸ್ವಾಮಿ ಶ್ರೀ......' ಎಂಬ ಶಾಸನವಿದೆ. ಎರಡನೇ ದೇವರಾಯನಿಗೆ ಇಬ್ಬರು ಪತ್ನಿಯರಿದ್ದರು ಒಬ್ಬಳು ರಾಣಿ ಸಿಂಹಳದೇವಿ[61] ಮತ್ತು. ರಾಣಿ ಕಮಲಾದೇವಿ,[62] ರಾಣಿ ಸಿಂಹಳ ದೇವಿಯ ಮಗನೇ ವಿರುಪಾಕ್ಷ.

**2) ಸಾಳುವ ಮನೆತನ : (ಕ್ರಿ.ಶ. 1485 ರಿಂದ 1503ರವರೆಗೆ)**

ಇದು ವಿಜಯನಗರವನ್ನಾಳಿದ ಎರಡನೇ ಮನೆತನ. ಪ್ರಾಚೀನ ಮತ್ತು ಪ್ರತಿಷ್ಠಿತ ಮನೆತನ. ಈ ಮನೆತನದ ರಾಣಿಯರುಗಳೆಂದರೆ ಹರಿಮಾ ಮತ್ತು ಶ್ರೀರಂಗಾಂಬಾದೇವಿಯರು. ಹರಿಮಾ, ತಿಮ್ಮರಾಯನ ರಾಣಿ. ಈಕೆಗೆ ಹರಿಮಾ, ಹರಿಣಾ ಇತ್ಯಾದಿ ಹೆಸರುಗಳಿದ್ದವು. ಈಕೆ ಸಂಗಮ ವಂಶದವಳು. ಎರಡನೇ ದೇವರಾಯನ ಸಹೋದರಿ. ಇದಕ್ಕೆ ಆಧಾರವಾಗಿ ಕ್ರಿ.ಶ. 1431ರ ಶಾಸನವೊಂದರಲ್ಲಿ ಎರಡನೇ ದೇವರಾಯನಿಗೆ ಅಕ್ಕ ಇದ್ದಳೆಂದು ಚಂದ್ರವಂಶದ ಸಾಳುವ ತಿಪ್ಪರಾಜನೊಂದಿಗೆ ಆಕೆಯ ವಿವಾಹವು ನಡೆಯುತ್ತೆಂದು ತಿಳಿದುಬರುತ್ತದೆ.[63] ಶ್ರೀರಂಗಾಂಭಾದೇವಿ ಸಾಳುವ ನರಸಿಂಹನ ರಾಣಿ.[64] ಈಕೆಯು ತನ್ನ ಕಾಲಾವಧಿಯಲ್ಲಿ ಸಾಮಾಜಿಕ, ಧಾರ್ಮಿಕ ಕಾರ್ಯಗಳನ್ನು ನಿರ್ವಹಿಸಿದ್ದಾಳೆ.

---

[60] ದೇವರ ಕೊಂಡರೆಡ್ಡಿ, **ಹಂಪಿಶಾಸನಗಳು,** ಸಂಪುಟ–3, ಪು–15, ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.2000.

[61] ಎಂ.ವಿ. ಪದ್ಮ, **ವಿಜಯನಗರ ಅಧ್ಯಯನ,** ಸಂ–1.

[62] ಎನ್. ಸರಸ್ವತಿ, **ದಿ ಪೊಜಿಷನ್ ಆಫ್ ವುಮನ್ ಡ್ಯೂರಿಂಗ್, ವಿಜಯನಗರ, ಪಿರಿಯಡ್ಸ್,** ಪು–105, ಸೌದರ್ನ್ ಪ್ರಿಂಟರ್ಸ್ ಮೈಸೂರು. 1992.

[63] ಸೂರ್ಯನಾರಾಯಣರಾವ್,(ಅನು) **ಮರೆಯಲಾಗದ ಮಹಾಸಾಮ್ರಾಜ್ಯ ವಿಜಯನಗರ,** ಪು–301, ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. 2000.

[64] ಡಾ.ಎ.ವಿ ವೆಂಕಟರತ್ನಂ, **ವಿಜಯನಗರ ಸಾಮ್ರಾಜ್ಯದಲ್ಲಿ ಸ್ಥಳೀಯ ಸರ್ಕಾರ,** ಪು–107,

**3) ತುಳುವ ಮನೆತನ : (ಕ್ರಿ.ಶ. 1503 ರಿಂದ 1565ರವರೆಗೆ)**

ವಿಜಯನಗರವನ್ನಾಳಿದ ನಾಲ್ಕು ಮನೆತನಗಳಲ್ಲಿ ತುಳುವ ಮನೆತನ ಅತ್ಯಂತ ಪ್ರಖ್ಯಾತಿಗಳಿಸಿದ ಮನೆತನವಾಗಿದೆ. ಕರ್ನಾಟಕದ ಚರಿತ್ರೆಯಲ್ಲಿ ತುಳುವ ವಂಶ ಪ್ರಸಿದ್ಧಿಯನ್ನು ಪಡೆದಿದೆ. ಶ್ರೀಕೃಷ್ಣದೇವರಾಯ ಈ ಮನೆತನದ ಪ್ರಖ್ಯಾತ ದೊರೆಯಾಗಿದ್ದನು.

ಈ ಮನೆತನದ ರಾಣಿಯರುಗಳೆಂದರೆ.

ಬುಕ್ಕಾಂಬೆ, ತಿಪ್ಪಾಂಬೆ, ನಾಗಲಾದೇವಿ, ಓಬಾಂಬೆ, ತಿರುಮಲಾದೇವಿ, ಚಿನ್ನಾದೇವಿ, ಜಗನ್ಮೋಹಿನಿ, ವೇಂಗಳಾಂಬೆ, ವರದರಾಜಮ್ಮ, ಓದುವ ತಿರುಮಲಾಂಬ ಹೀಗೆ ಒಟ್ಟು ಹನ್ನೊಂದು ಜನ ರಾಣಿಯರು ಕಂಡುಬರುತ್ತಾರೆ.

ಬುಕ್ಕಾಂಬೆ ತುಳುವ ವಂಶದ ಪ್ರಸಿದ್ಧರಾಣಿ. ಈಕೆ ತಿಮ್ಮಾಭೂಪತಿ ಮತ್ತು ದೇವಕಿ ಅವರ ಪುತ್ರನಾದ ಈಶ್ವರನಾಯಕನ ಮಡದಿ.[65] ಕ್ರಿ.ಶ. 1510ರಲ್ಲಿ ಕೃಷ್ಣದೇವರಾಯನ ಪಟ್ಟಾಭಿಷೇಕದ ನೆನಪಿಗಾಗಿ ಹೊರಡಿಸಿದ ಈ ಶಾಸನದಲ್ಲಿ ಬುಕ್ಕಮ್ಮಳ ಮತ್ತು ಈಶ್ವರ ನಾಯಕನ ವಿವರಗಳಿವೆ.[66] ತಿರುಮಲಾಂಬೆಯ 'ವರದಾಂಬಿಕಾ ಪರಿಣಯದಲ್ಲಿ ತುಳುವ ಮನೆತನದ ಪೂರ್ವ ಇತಿಹಾಸದೊಂದಿಗೆ ಬುಕ್ಕಮ್ಮ ಮತ್ತು ಈಶ್ವರ ನಾಯಕನ ವಿವರಗಳು ಉಲ್ಲೇಖಗೊಂಡಿವೆ.[67]

ತಿಪ್ಪಾಂಬೆ ತುಳುವ ಅರಸ ನರಸನಾಯಕನ ಮೂವರು ರಾಣಿಯರಲ್ಲಿ ಇವಳು ಹಿರಿಯ ರಾಣಿ. ಕ್ರಿ.ಶ.1500ರಲ್ಲಿ ಹೊರಡಿಸಿದ ವಿರುಪಾಕ್ಷ ದೇವಾಲಯದಲ್ಲಿರುವ ಕೂಟ ಶಾಸನದಲ್ಲಿ ತಿಪ್ಪಾಂಬೆ ನರಸನಾಯಕನ ಮೊದಲನೆಯ ರಾಣಿ ಎಂದು ಹೇಳಿದೆ.[68] ಹಾಗೆಯೇ ಶ್ರೀ ಕಂಚಿ ಕಾಮಕೋಟಿ ಶಂಕರಚಾರ್ಯರ ಬಳಿ ಇರುವ ತಾಮ್ರ ಶಾಸನದಲ್ಲಿನ ಸಂಸ್ಕೃತ ಪದ್ಯದಲ್ಲೂ ಸಹ ದಶರಥನ ಪತ್ನಿಯರಾದ ಕೌಸಲ್ಯೆ ಮತ್ತು ಸುಮಿತ್ರೆಯಂತೆಯೂ ತಿಪ್ಪಾಂಬೆ ಮತ್ತು ನಾಗಲಾಂಬೆಯರೆಂಬ ಇಬ್ಬರು ಪತ್ನಿಯರಿದ್ದರೆಂದು ಅವರಿಗೆ, ರಾಮ, ಲಕ್ಷ್ಮಣರಂತಹ ಭುಜಬಲ ರಾಮ ಮತ್ತು

---

[65] (ಈಶ್ವರ ನಾಯಕರು, ಸಾಳ್ವ ನರಸಿಂಹನಿಗೆ ಸೇನಾಪತಿಯಾಗಿದ್ದು ಆತನ ಭಂಟನಾಗಿದ್ದನು.)
ಎಂ.ವಿ. ಕೃಷ್ಣರಾವ್, ಎಂ. ಕೇಶವಭಟ್ಟ, **ಕರ್ನಾಟಕದ ಇತಿಹಾಸ ದರ್ಶನ,** ಪು– ಇತಿಹಾಸ ಸಾಹಿತ್ಯ ಅಕಾಡೆಮಿ, ಬೆಂಗಳೂರು). 1970.

[66] ದೇವರಕೊಂಡಾರೆಡ್ಡಿ, **ಹಂಪಿ ಶಾಸನಗಳು,** ಸಂ–3, ಪು–34, ಪ್ರಸಾರಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.2000.

[67] ಸರೋಜಿನಿಮಹಿಷಿ, **ಕರ್ನಾಟಕದ ಕವಿಯಿತ್ರಿಯರು,** ಪು–449–450, ಸಹಕಾರಿ ಸಾಹಿತ್ಯಸಂಘ, ಧಾರವಾಡ. 1965.

[68] ದೇವರ ಕೊಂಡಾರೆಡ್ಡಿ, **ಹಂಪಿ ಶಾಸನಗಳು,** ಪು–13, ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.2000.

ಕೃಷ್ಣದೇವರಾಯರೆಂಬ ಪುತ್ರರಿದ್ದರೆಂಬ ಉಲ್ಲೇಖವಿದೆ.[69] ಈ ವಾಕ್ಯವನ್ನು ಪುಷ್ಟಿ ನೀಡುವುದಕ್ಕೆ ಕ್ರಿ.ಶ 1531ರಲ್ಲಿ ಅಚ್ಯುತರಾಯ ಹೊರಡಿಸಿದ ಶಾಸನದಲ್ಲಿಯೂ ಇದೇ ಅಭಿಪ್ರಾಯ ವ್ಯಕ್ತಪಡಿಸಲಾಗಿದೆ.[70]

ನಾಗಲಾದೇವಿ, ನರಸನಾಯಕನ ರಾಣಿ. ಕರ್ನಾಟಕದ ಇತಿಹಾಸದಲ್ಲಿ ಮಹಾನ್ ಚಕ್ರವರ್ತಿ ಶ್ರೀಕೃಷ್ಣದೇವರಾಯನ ತಾಯಿ ನರಸನಾಯಕನ ದ್ವಿತೀಯರಾಣಿ.[71] ಓಬಾಂಬೆ ನರಸನಾಯಕನ ತೃತೀಯ ರಾಣಿ. ಕ್ರಿ.ಶ 1530ರ ಕಾಲದ ಶಾಸನದಲ್ಲಿ ಓಬಾಂಬಿಕಾ ಮತ್ತು ನರಸನಾಯಕನ ಬಗ್ಗೆ ವಿವರಗಳಿವೆ.[72]

ಈ ತಿರುಮಲಾದೇವಿಯ ತವರೂರು ಶ್ರೀರಂಗಪಟ್ಟಣವಾಗಿತ್ತು ಎಂಬುದು ಒಂದು ಅಭಿಪ್ರಾಯವಾದರೆ, ಮತ್ತೊಂದು ಅಭಿಪ್ರಾಯದ ಪ್ರಕಾರ. ಈ ತಿರುಮಲಾದೇವಿಯು ಗಂಗರಾಜನ ಪುತ್ರಿ ಎಂಬ ಅಭಿಪ್ರಾಯವಿದೆ. ಉಮ್ಮತ್ತೂರಿನ ಮಹಾಸ್ವಾಭಿಮಾನಿಯಾದ ಗಂಗರಾಜ ಪೂರ್ವದಿಂದಲೂ ವಿಜಯನಗರದ ಅರಸನೊಂದಿಗೆ ರಾಜಕೀಯ ಸಂಘರ್ಷಗಳನ್ನು ನಡೆಸುತ್ತಲೇ ಬಂದಿದ್ದನು. ಇದರಿಂದಾಗಿ ರಾಯನ ಕಾಲದಲ್ಲಿ ಸಾಮ್ರಾಜ್ಯಶಾಹಿ ದಾಸ್ಯವನ್ನು ನಡೆಸುತ್ತಲೇ ಬಂದಿದ್ದನು. ಇದರಿಂದಾಗಿ ರಾಯನ ಕಾಲದಲ್ಲಿ ಸಾಮ್ರಾಜ್ಯಶಾಹಿ ದಾಸ್ಯತ್ವವನ್ನು ಹೋಗಲಾಡಿಸಲು ವೈವಾಹಿಕ ಸಂಬಂಧವನ್ನು ಏರ್ಪಡಿಸಲಾಯಿತು. ಬಹುಶಃ ಈ ವಿವಾಹ ರಾಜಕಾರಣದ ತಂತ್ರವಿರಬಹುದು.[73] ಇವರ ಮಗನೇ ಅಚ್ಯುತರಾಯನೆಂದೂ ಸಹ ತಿಳಿಸುತ್ತದೆ. ಈಕೆಯ ಕುರಿತು ಹೆಚ್ಚಿನ ಆಧಾರಗಳು ಸಿಗುವುದಿಲ್ಲ. ಕೆಲವು ಸಾಹಿತ್ಯ ಕೃತಿಗಳಲ್ಲಿ ಈಕೆಯನ್ನು ನಿರ್ಲಕ್ಷಿಸಿರುವುದು ತಿಳಿದು ಬರುತ್ತದೆ. ಸಿಗುವ ನಿದರ್ಶನವೆಂಬಂತೆ, ಕು.ವೀರಭದ್ರಪ್ಪನವರ ಶ್ರೀಕೃಷ್ಣದೇವರಾಯನ ಕೃತಿಯಲ್ಲಿ ಸಿಗುವ ಮಾಹಿತಿ ಎಂದರೆ ಶ್ರೀ ಕಂಚಿಕಾಮಕೋಟಿ ಶಂಕರಾಚಾರ್ಯರ ಬಳಿ ಇರುವ ತಾಮ್ರಶಾಸನವೊಂದರಲ್ಲಿ ಉದ್ಧೃತವಾಗಿರುವ ಸಂಸ್ಕೃತ ಪದ್ಯ.

---

[69] ಕು. ವೀರಭದ್ರಪ್ಪ, **ಶ್ರೀ ಕೃಷ್ಣದೇವರಾಯ,** ಪು–14, ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.2001.

[70] S.I.I. ಸಂ–9, ಭಾಗ–3, ಪು–552.

[71] ಡಾ. ದೇವರಕೊಂಡಾ ರೆಡ್ಡಿ, **ಹಂಪಿ ಶಾಸನಗಳು,** ಸಂ–3, ಪು–34, ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.2000.

[72] ದೇವರ ಕೊಂಡಾರೆಡ್ಡಿ, **ಹಂಪಿ ಶಾಸನಗಳು,** ಸಂ–3, ಪು–34, ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.2000.

[73] ಜೆ.ಎಸ್. ದೀಕ್ಷಿತ್, **ಶ್ರೀಕೃಷ್ಣದೇವರಾಯನ ಜೀವನ ಮತ್ತು ಸಾಧನೆ,** ಪು–33, ಪ್ರಾಚ್ಯವಸ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು, 1997.

"ತಿಪ್ಪಾಂಬೆ, ನಾಗಲಾದೇವೋ ಕೌಸಲ್ಯಾ ಸುಮಿತ್ರಯೋ:
ದೇವ್ಯೋರಿವ ನೃಸಿ ಹೇಂದ್ರಸ್ತಿಸ್ಮಾತ್ಯಂಕ್ತಿ ರಥಾದಿವ
ವೀಕ್ ವಿನಯಿನಾ ರಾಮಲಕ್ಷ್ಮಣಾ ವಿವನಂದನೆ
ಜಾತ ವೀರ ನೃಸಿಂಗೇನ್ದ್ರಃ ಕೃಷ್ಣರಾಯ ಮಹೇಪತಿ"

ಎಂದು ಉಲ್ಲೇಖಿಸಿ ಈಕೆಯನ್ನು ಮತ್ತು ಮಗ ಅಚ್ಯುತರಾಯನನ್ನು ಪ್ರಸ್ತಾಪದಿಂದ ವಂಚಿಸಲಾಗಿದೆ.

ತುಳುವ ಅರಸ ನರಸನಾಯಕನ ರಾಣಿಯರಲ್ಲಿ ಹಿರಿಯರಾಣಿಯಾದ ಮತ್ತು ಮೊದಲ ರಾಣಿಯಾದ ತಿಪ್ಪಾಂಬೆಯನ್ನು ಮತ್ತು ಅವನ ಮತ್ತೊಬ್ಬ ರಾಣಿಯಾದ ನಾಗಲಾದೇವಿಯನ್ನು ರಾಮಾಯಣದಲ್ಲಿನ ಕೌಸಲ್ಯೆ ಮತ್ತು ಸುಮಿತ್ರೆಯರಿಗೆ ಹೋಲಿಸಿ, ಅವರ ಮಕ್ಕಳಾದ ರಾಮ ಮತ್ತು ಕೃಷ್ಣದೇವರಾಯರನ್ನು ರಾಮ ಲಕ್ಷ್ಮಣನಿಗೆ ಹೋಲಿಸಲಾಗಿದೆ. ಆದರೆ ಇಲ್ಲಿ ನರಸನಾಯಕನ ತೃತೀಯರಾಣಿಯಾದ ಓಬಾಂಬೆಯನ್ನ ಮತ್ತು ಅವಳ ಮಗನಾದ ಅಚ್ಯುತರಾಯನನ್ನು ಈ ಸಂಸ್ಕೃತ ಪದ್ಯದಲ್ಲಿ ಉಲ್ಲೇಖಿಸದೇ ಹೋಗಿರುವುದು ಅನುಮಾನಗಳಿಗೆ ಎಡೆಮಾಡಿಕೊಟ್ಟು ತಿರುಮಲಾದೇವಿ ಶ್ರೀಕೃಷ್ಣದೇವರಾಯನ ಪ್ರಸಿದ್ಧರಾಣಿ ಮತ್ತು ಪಟ್ಟದರಸಿಯರಾದ ತಿರುಮಲಾಂಬೆ ತಿರುಮಲಾಮ್ಮರೆಂಬ ಹೆಸರುಗಳಿವೆ. ಇವರು ರಾಜಕುಟುಂಬದ ಸ್ತ್ರೀಯರು ಎಂಬುದಾಗಿ ಶಾಸನಗಳು, ಮತ್ತು ಸಾಹಿತ್ಯ ಕೃತಿಗಳು ಸಮರ್ಥಿಸುತ್ತವೆ.[74] ತಿರುಮಲಾದೇವಿಯೇ ರಾಯನ ಹಿರಿಯ ರಾಣಿ. ರಾಯ ಪಟ್ಟಕ್ಕೆ ಬರುವ ಮೊದಲೇ ಇವರ ವಿವಾಹವಾಗಿತ್ತು. ಇದನ್ನು ಅಲ್ಲಸಾನಿಪೆದ್ದನ್ನ ತನ್ನ ಮನುಚರಿತೆ ಕಾವ್ಯದಲ್ಲಿ ಅನುಮೋದಿಸಿರುತ್ತಾನೆ. ಹಾಗೆಯೇ ಕ್ರಿ.ಶ. 1498ರಲ್ಲಿಯೇ ವಿವಾಹ ನಡೆದಿತ್ತೆಂದು ಶಾಸನದಿಂದ ತಿಳಿದು ಬರುತ್ತದೆ.[75] ತಾಡಪತ್ರಿಯ ಶಿಲಾಶಾಸನದಲ್ಲಿ ಚಿನ್ನಾದೇವಿ ಡೊಂಬರದವಳು ಮತ್ತು ರಾಯನ ರಾಣಿ ಎಂದು ತಿಳಿಸಿರುವುದರಿಂದ ಈಕೆ ಡೊಂಬರದೊಳೆಂಬ ಅಭಿಪ್ರಾಯ ಮೂಡುತ್ತದೆ.

ಚಿನ್ನಾದೇವಿ ತುಳುವ ವಂಶದ ಪ್ರಮುಖರಾಣಿ. ಶ್ರೀಕೃಷ್ಣದೇವರಾಯನ ಪಟ್ಟದರಸಿ. ಈಕೆ ಕೃಷ್ಣದೇವರಾಯನ ಪ್ರೀತಿಪಾತ್ರದ ಒಲುಮೆಯ ರಾಣಿಯಾಗಿದ್ದಳು. ನ್ಯೂನಿಜ್ ಪ್ರಕಾರ ಈಕೆ ಒಬ್ಬ ಆಸ್ಥಾನದ ವೇಶ್ಯೆ.[76] ಇವಳಿಗೆ ಆರಂಭದಲ್ಲಿ ಅನ್ನಪೂರ್ಣದೇವಿ ಎಂಬ ಹೆಸರಿತ್ತೆಂದು

---

[74] ಕು. ವೀರಭದ್ರಪ್ಪ, **ಶ್ರೀಕೃಷ್ಣದೇವರಾಯ,** ಪು–5, ಪ್ರಸಾರಂಗ, ಕ.ವಿ. ಹಂಪಿ.2001.
[75] ಬಿ.ಎ.. ವಿವೇಕ ರೈ, **ಪ್ರವಾಸಿ ಕಂಡ ವಿಜಯನಗರ,** ಪು–39, ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.2005.
[76] ಅದೇ ಪುಟ–63.

ಕೃಷ್ಣದೇವರಾಯನ 'ಅಮುಕ್ತ ಮೌಲ್ಯ'ದಲ್ಲೂ[77] ಮೋಹನಾಂಗಿಯ 'ಮಾರೀಚಿ ಪರಿಣಯ'ದಿಂದಲೂ ತಿಳಿದು ಬರುತ್ತದೆ. ರಾಯನೊಂದಿಗೆ ಈಕೆಯ ವಿವಾಹವು ಕ್ರಿ.ಶ. 1497ರಲ್ಲಿ ನಡೆದಿರುವ ಬಗ್ಗೆ ಒಮ್ಮತವಿದೆ.

ಜಗನ್ಮೋಹಿನಿ ಕೃಷ್ಣದೇವರಾಯನ ಮೂರನೇ ರಾಣಿ. ಈಕೆಯ ವಿವಾಹವೂ ರಾಜಕಾರಣದ ಫಲ. ಈಕೆ ಒರಿಸ್ಸಾದ ರಾಜಕುಮಾರಿ ಗಜಪತಿ ಪ್ರತಾಪರುದ್ರನ ಮಗಳು. ಈಕೆಗೆ ಲಕ್ಷ್ಮೀ, ಅನ್ನಪೂರ್ಣ, ಜಗನ್ಮೋಹಿನಿ, ತುಕ್ಕಾದೇವಿ ಎಂದು ಬೇರೆ ಬೇರೆ ಹೆಸರುಗಳಿದ್ದವು.[78] ಈಕೆಯ ಹೆಸರು 'ರಾಯವಾಕ ಪ್ರಕಾರ ಮೋಹಿನ್ನಿ ಎಂದೂ, ಕುಮಾರದೂರ್ಜಟಿಯ ಕೃಷ್ಣರಾಜ ವಿಜಯದ ಪ್ರಕಾರ 'ತುಖ್ಖಾರಮಣಿ' ನಾದಿಂಡ್ಗ, ಗೋಪ ಮಂತ್ರಿಯ ಪ್ರಭೋದ ಚಂದ್ರೋದಯ ವ್ಯಾಖ್ಯಾನದ ಪೀಠಿಕಾ ಭಾಗದಲ್ಲಿ ಈಕೆಯ ಹೆಸರು 'ಭದ್ರಾ' ಎಂದಿದೆ. ಕೃಷ್ಣನ ಮಗಳಾದ ಮೋಹನಾಂಗೀಯು ಈಕೆಯ ಹೆಸರು 'ಲಕ್ಷ್ಮೀ' ಎಂದು ಮಾರೀಚ ಪರಿಣಯದಲ್ಲಿ ಹೇಳಿದ್ದಾಳೆ. ಡೋಮಿಂಗೊ ಪಾಯೇಸ್‌ನು ಕೂಡ ಈಕೆಯ ಬಗ್ಗೆ ಮಾಹಿತಿ ನೀಡಿದ್ದಾರೆ.

ಓಧುವ ತಿರುಮಲಾಂಬೆ ಇವಳು ಅಚ್ಯುತರಾಯನ ರಾಜ ಮಹಿಷಿ ಮತ್ತು ಪ್ರೀತಿ ಪಾತ್ರಳಾದ ರಾಣಿಯಾಗಿದ್ದವಳು. ತಿರುಮಲಾಂಬೆ ಅಚ್ಯುತರಾಯನ ರಾಣಿಯೆಂದು ವರದಾಂಬಿಕ ಪರಿಣಯ ದಿಂದ ಸ್ಪಷ್ಟವಾಗುತ್ತದೆ.[79] ಇದಲ್ಲದೆ ಸಿವೇಲ್ ಅನುಮೋದಿಸಿರುವಂತೆ, ಕಾಂಚಿವರಮ್‌ನಲ್ಲಿನ ಶಾಸನವೊಂದು ಅಚ್ಯುತನಿಗೆ ವರದಾದೇವಿ ಎಂಬ ರಾಣಿಯಿದ್ದಳೆಂದು ಅವಳಿಗೆ ವೆಂಕಟನೆಂಬ ಮಗನಿದ್ದನೆಂದು ತಿಳಿಸಿದೆ.[80] ಪಟ್ಟದರಸಿಯಾಗಿ–ವರದಾದೇವಿ ಇದ್ದಳೆಂಬ ವಿಷಯವನ್ನು ಇವಳಿಂದಲೇ ರಚನೆಯಾಗಿರುವ ಸಾಹಿತ್ಯ ಕೃತಿಗಳಲ್ಲಿ ದೊರೆಯುತ್ತದೆ. ತನ್ನ ಸವತಿಯಾದರೂ ಸಹ ಯಾವುದೇ ಮಾತ್ಸರ್ಯವಿರದೆ ಅವಳ ಹೆಸರಿನಲ್ಲೇ 'ವರದಾಂಬಿಕಾ ಪರಿಣಯಂ' ನನ್ನ ರಚಿಸಿರುವುದನ್ನು ಕಾಣಬಹುದು.[81]

---

[77] ಕು. ವೀರಭದ್ರಪ್ಪ, **ಶ್ರೀ ಕೃಷ್ಣದೇವರಾಯ,** ಪು–22, 2001.

[78] ಜಿ.ಎಸ್. ದೀಕ್ಷಿತ್, **ಶ್ರೀಕೃಷ್ಣದೇವರಾಯನ ಜೀವನ ಮತ್ತು ಸಾಧನೆ,** ಪುಟ–114, ಪ್ರಾಚ್ಯವಸ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು. 1997.

[79] ಸಿಂದಗಿ ರಾಜಶೇಖರ, **ವಿಜಯನಗರದ ಅಧ್ಯಯನ,** ಸಂ1,319,

[80] ದೇವರ ಕೊಂಡಾರೆಡ್ಡಿ, **ಹಂಪಿ ಶಾಸನಗಳು,** ಸಂ–1, ಶಾ.ಸಂ–77.

[81] ಸದಾನಂದ ಕನವಳ್ಳಿ, **ಮರೆತುಹೋದ ಮಹಾಸಾಮ್ರಾಜ್ಯ,** ವಿಜಯನಗರ, ಪು.196, ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.1992.

**4) ಅರವೀಡು ಮನೆತನ : (ಕ್ರಿ.ಶ. 1570 ರಿಂದ 1646ರವರೆಗೆ)**

ವಿಜಯನಗರ ಸಾಮ್ರಾಜ್ಯದ ಕೊನೆಯ ವಂಶ. 115 ವರ್ಷಗಳಕಾಲ ಆಳ್ವಿಕೆ ನಡೆಸಿ 1680ರಲ್ಲಿ ಈ ಮನೆತನ ಸಂಪೂರ್ಣವಾಗಿ ಅಂತ್ಯವನ್ನು ಕಂಡಿತು. ಈ ಮನೆತನದ ಪ್ರಮುಖ ರಾಣಿಯರುಗಳೆಂದರೆ. ತಿರುಮಲಾಂಭ, ವೆಂಗಳಾಂಬೆ, ತಿಮ್ಮಾಜಿ ಮತ್ತು ಬಾಯಮ್ಮರು.

ತಿರುಮಲಾಂಭ ತುಳುವ ವಂಶದ ರಾಜಕುಮಾರಿ. ಶ್ರೀಕೃಷ್ಣದೇವರಾಯ ಮತ್ತು ತಿರುಮಲಾದೇವಿಯರ ಪುತ್ರಿ. ಇವಳನ್ನು ಅರವೀಡು ಮನೆತನದ ಅಳಿಯ ರಾಮರಾಯನಿಗೆ ವಿವಾಹ ಮಾಡಲಾಗಿತ್ತು. ಈಕೆಗೆ ಮೋಹನಾಂಗಿ ಎಂಬ ಮತ್ತೊಂದು ಹೆಸರಿತ್ತು. ಈಕೆ ರಚಿಸಿದ **'ಮಾರೀಚಿಪರಿಣಯಮ್'** ಕಾವ್ಯ ತುಳುವ ಮನೆತನದ ಮೇಲೆ ಮತ್ತು ತಂದೆ ಕೃಷ್ಣದೇವ ರಾಯನ ರಾಣಿಯರ ಮೇಲೆ ಬೆಳಕು ಚೆಲ್ಲುತ್ತದೆ. ಈಕೆಯ ಪತ್ನಿ ಅಳಿಯ ರಾಮರಾಯನು ಅರವೀಡು ವಂಶದ ಬುಕ್ಕರಾಯನ ಮರಿಮೊಮ್ಮಗನು, ಶ್ರೀರಂಗ ರಾಜುವಿನ ಪುತ್ರರು. [82]

ವೆಂಗಳಾಂಬೆ ತುಳುವ ವಂಶದ ರಾಜಪುತ್ರಿ. ಶ್ರೀಕೃಷ್ಣ ದೇವರಾಯನ ಮತ್ತು ಚಿನ್ನದೇವಿಯರ ಪುತ್ರಿ. ಈಕೆಯ ಪತಿ, ತಿರುಮಲರಾಯನು.[83] ಇವಳಿಗೆ ಮೋಹನಾಂಗಿ ಎಂಬ ಅಕ್ಕ ಇದ್ದು ಅವಳು ರಚಿಸಿದ 'ಮಾರೀಚ ಪರಿಣಯಮ್'ದಲ್ಲಿ ತನ್ನ ತಂಗಿ ವೆಂಗಳಾಂಬೆಯನ್ನು ಅನ್ನಪೂರ್ಣದೇವಿಯಲ್ಲೂ ತನ್ನ ತಂದೆ ಪಡೆದನೆಂದು ತಿಳಿಸಿದ್ದಾಳೆ. ಈ ಅನ್ನಪೂರ್ಣ ಚಿನ್ನಾದೇವಿ. ತಿಮ್ಮಾಜಿ ಶ್ರೀರಂಗರಾಯನ ರಾಣಿಯಾಗಿದ್ದಳು. ಇವರಿಗೆ ತಿರುಮಲನೆಂಬ ಮಗನಿದ್ದನು. ಈ ತಿರುಮಲರಾಯನೇ, ವೆಂಗಳಾಂಬೆಯ ಪತಿ. ತಿಮ್ಮಾಜಿ ತನ್ನ ಪತಿಯ ಮರಣದ ತರುವಾಯ ಆಡಳಿತವನ್ನು ವಹಿಸಿಕೊಂಡಿದ್ದಳು.[84]

---

[82] ಜಿ.ಎಸ್. ದೀಕ್ಷಿತ್, **ಶ್ರೀಕೃಷ್ಣದೇವರಾಯನ ಜೀವನ ಮತ್ತು ಸಾಧನೆ ಪು–109,** ಪ್ರಾಚ್ಯವಸ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು. 1997. (ಇವನಿಗೂ ತಿರುಮಲೆಗೂ 10–15 ವರ್ಷಗಳ ಅಂತರವಿರುವುದರಿಂದ (ಚಿಕ್ಕವಳು) ಮಧುವೆಯ ಬಗ್ಗೆ ಗೊಂದಲಗಳಿವೆ. ಏಕೆಂದರೆ, ಕ್ರಿ.ಶ. 1499ರಲ್ಲಿ ತಿರುಮಲಾಂಬೆ ಜನಿಸಿದಳೆಂದು ಒಂದು ಅಭಿಪ್ರಾಯವಾದರೆ ರಾಮರಾಯನು ಕ್ರಿ.ಶ. 1470ರಲ್ಲಿ ಜನಿಸಿದನು ಎಂದು ಹೇಳಲಾಗುತ್ತದೆ. ಈ ಅಂಶದಿಂದ ಇವರೀರ್ವರ ನಡುವೆ 29 ವರ್ಷಗಳ ವಯಸ್ಸಿನ ಅಂತರವಿತ್ತೆಂದು ಹೇಳಬಹುದು. ಬಹುಶಃ ರಾಜಕೀಯ ತಂತ್ರದ ವಿವಾಹವಾಗಿರಬಹುದು? ಎಂಬ ಅನುಮಾನಗಳು ಏಳುತ್ತವೆ. ಮತ್ತೊಂದು ಅಂಶದ ಪ್ರಕಾರ ಇವಳು ಹಿರಿಯ ಪತ್ನಿಯೇ? ದ್ವಿತೀಯ ಪತ್ನಿ ಎಂಬುದೇ ಸ್ಪಷ್ಟವಾಗಿಲ್ಲ. ಈಕೆಯ ಕುರಿತು ಸಿಕ್ಕಿರುವ ಮಾಹಿತಿಗಳು ಸತ್ಯ ಸಂಗತಿಗಳಿಂದ ದೂರವಿವೆ. ಈಕೆಯ ಬಗ್ಗೆ ಹೆಚ್ಚಿನ ಅಧ್ಯಯನದ ಅಗತ್ಯವಿದೆ.)

[83] ದೇವರಕೊಂಡಾರೆಡ್ಡಿ, **ಹಂಪಿಶಾಸನಗಳು,** ಸಂ.3, ಪು–183–184, ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. 2000.

[84] ದೇವರಕೊಂಡಾರೆಡ್ಡಿ, **ಕೊಪ್ಪಳ ಜಿಲ್ಲೆಯ ಶಾಸನ,** ಸಂ.2 ಪು–338. ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. 1999.

ಬಾಯಮ್ಮ ವೆಂಕಟಪತಿರಾಯನ ರಾಣಿ. ಇವನಿಗೆ ಆರು ಜನ ರಾಣಿಯರಿದ್ದರು. ಇವರಲ್ಲಿ ಅತ್ಯಂತ ಹೆಚ್ಚಿನ ಪ್ರೀತಿಪಾತ್ರಳಾದವಳು ಇವಳು. ಈಕೆಯನ್ನು ತ್ರಿವಿಕ್ರಮರು ಓಬಾಂಬೆ ಎಂದು ಕರೆದರೆ ಎಚ್.ಎಲ್. ನಾಗೇಗೌಡರು ಹಾಗೂ ರಾಬರ್ಟ್ ಸಿವೆಲ್‌ರವರು ಈಕೆಯನ್ನು ಬಾಯಮ್ಮನೆಂದೇ ಕರೆದಿದ್ದಾರೆ. ರಾಜನಿಗೆ ಮಕ್ಕಳಿಲ್ಲದ ಕಾರಣ ಬಾಯಮ್ಮ ಬ್ರಾಹ್ಮಣನೆಂದೇ ಕರೆದಿದ್ದಾರೆ. ರಾಜನಿಗೆ ಮಕ್ಕಳಿಲ್ಲದ ಕಾರಣ ಬಾಯಮ್ಮ ಬ್ರಾಹ್ಮಣ ಸ್ತ್ರೀಯೊರ್ವಳ ಮೂಲಕ ಮಗುವನ್ನು ಪಡೆದು ತಾನೇ ಅದಕ್ಕೆ ತಾಯಿಯೆಂದು ಸುದ್ದಿಯನ್ನು ಹರಡಿದಳು. ಕೊನೆಗೆ ಪತಿಯ ನಂತರ ತನ್ನ ಸಾಕುಮಗನನ್ನೇ 'ಸಿಂಹಾಸನದ ಉತ್ತರಾಧಿಕಾರಿಯೆಂದು ಘೋಷಿಸಿದಳು.

ಎಲ್ಲಾ ಅಂಶಗಳನ್ನು ಕೂಲಂಕುಷವಾಗಿ ಅಧ್ಯಯನ ನಡೆಸಿದರೆ ರಾಜಕೀಯ ಸಮಸ್ಯೆ ಎದ್ದುಕಾಣುತ್ತದೆ. ಅಧಿಕಾರದ ಗದ್ದುಗೆಗಾಗಿ ತಮ್ಮ–ತಮ್ಮಲ್ಲಿಯೇ ಪಿತೂರಿಗಳು ನಡೆಯುತ್ತಿದ್ದವು. ಇದು ರಾಣಿಯರ ಮೂಲಕ ಹೆಚ್ಚಾಗಿಯೇ ನಡೆಯುತ್ತಿತ್ತು. ತಮ್ಮ ಮಕ್ಕಳು ಅಧಿಕಾರ ರೂಢರಾಗಬೇಕೆಂಬುದು ಇದರ ಹಿಂದಿನ ಉದ್ದೇಶವಾಗಿತ್ತು. ತಮ್ಮ ಅವನತಿಗೆ ಪರೋಕ್ಷವಾಗಿ ರಾಣಿಯರು ಕಾರಣರಾದರು ಎಂದರೆ ತಪ್ಪಾಗಲಾರದು.

# ಅಧ್ಯಾಯ – 3

# ರಾಣಿಯರ ಸಾಂಸ್ಕೃತಿಕ ಕೊಡುಗೆಗಳು

**ಕ**ರ್ನಾಟಕವನ್ನಾಳಿದ ರಾಜಮನೆತನಗಳಲ್ಲಿನ ರಾಣಿಯರು ಸಮಾಜದಲ್ಲಿ ವಿಶೇಷವಾದ ಸ್ಥಾನಮಾನವನ್ನು ಪಡೆದಿದ್ದಾರೆ. ಇವರು ಸಾಮ್ರಾಜ್ಯಕ್ಕೆ ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಹಲವಾರು ಕೊಡುಗೆಗಳನ್ನು ನೀಡಿದ್ದಾರೆ. ಇವು ಸಾಮ್ರಾಜ್ಯದ ಉನ್ನತಿಗಾಗಿ, ಕುಟುಂಬ ವರ್ಗದವರಿಗಾಗಿ, ವೈಯಕ್ತಿಕವಾಗಿ, ಪ್ರಜೆಗಳಿಗಾಗಿ ಹೀಗೆ ಹಲವಾರು ವಿಚಾರವಾಗಿ ನೀಡಿದ್ದವುಗಳಾಗಿವೆ. ಇವರು ಇದರಲ್ಲಿ ಹೆಚ್ಚಾಗಿ ತಮ್ಮನ್ನು ತಾವೇ ತೊಡಗಿಸಿಕೊಂಡಿದ್ದರು. ಅವರು ನೀಡಿದ ಕೊಡುಗೆಗಳನ್ನು ಈ ಅಂಶಗಳ ಮೂಲಕ ಗುರುತಿಸಬಹುದು. ರಾಜಕೀಯ, ಸಾಮಾಜಿಕ, ಧಾರ್ಮಿಕ ಮತ್ತು ಸಾಹಿತ್ಯ ಹಾಗೂ ನೃತ್ಯಕಲಾ ಕ್ಷೇತ್ರಗಳಲ್ಲಿ ಇವರು ನೀಡಿದಂತಹ ಕೊಡುಗೆಗಳ ಕುರಿತು ಈ ಅಧ್ಯಯನದಲ್ಲಿ ವಿಶ್ಲೇಷಿಸಲಾಗಿದೆ. ರಾಣಿಯರು ಕೇವಲ ಪರದೇ ಹಿಂದೆ ಇರದೇ ತಮ್ಮ ಜೀವನವನ್ನು ವೈವಿಧ್ಯಮಯವಾಗಿ ರೂಪಿಸಿಕೊಂಡಿದ್ದು ಹಲವಾರು ಚಟುವಟಿಕೆಗಳಲ್ಲಿ ಆಸಕ್ತಿವಹಿಸಿ ಭಾಗವಹಿಸುತ್ತಿದ್ದರು. ಸಕಲ ಕಲೆಗಳಲ್ಲಿ ಪರಿಣಿತರಾಗಿ ಅರಸರೊಂದಿಗೆ ಮತ್ತು ನೇರವಾಗಿ ಹಲವಾರು ಚಟುವಟಿಕೆಗಳಲ್ಲಿ ಪಾಲ್ಗೊಳ್ಳುತ್ತಿದ್ದರು ಎಂಬುದನ್ನು ಈ ಮುಂದಿನ ಅಂಶಗಳಿಂದ ಗುರುತಿಸಲಾಗಿದೆ.

### 3.1 ರಾಣಿಯರ ರಾಜಕೀಯ ಸೇವೆ.

ಆಧುನಿಕ ಕಾಲದಲ್ಲಿ ಒಂದೇ ನಾಣ್ಯದ ಎರಡು ಮುಖಗಳಂತಿರುವ ಸ್ತ್ರೀ ಪುರುಷರೀರ್ವರು ಸಹ ರಾಜಕಾರಣದಲ್ಲಿ ತೊಡಗಿರುವುದು ಸಾಮಾನ್ಯ ವಿಷಯ. ಆದರೂ ಇಂದು ಮಹಿಳೆ ರಾಜಕಾರಣದಂತಹ ಕ್ಷೇತ್ರದಲ್ಲಿ ಕಾಣಸಿಗುವುದು ವಿರಳ. ಸಾಕಷ್ಟು ಶಾಸನ ಕಾನೂನು ಸಂವಿಧಾನಗಳ ಮೂಲಕ ಇಂದು ಮಹಿಳೆ ಪ್ರಾತಿನಿಧ್ಯಂತಹ ಸೌಲಭ್ಯಗಳನ್ನು ಹೊಂದಿದ ಕಾರಣದಿಂದ ರಾಜಕೀಯ ರಂಗದಲ್ಲಿ ಹಾಗೂ ಇನ್ನುಳಿದ ಇತರ ರಂಗಗಳಲ್ಲಿ ತಾನು ಪುರುಷರಷ್ಟೇ ಸರಿಸಮಾನಳೆಂದು ಭಾಗವಹಿಸುತ್ತಿದ್ದಾರೆ. ಭಾರತದಂತಹ ದೇಶದಲ್ಲಿ ಇಂದಿಗೂ ಸಹ ಪುರುಷರಿಗೆ ಮಹಿಳೆಯರು ಅಧೀನರೆಂಬ ಮಾತು ಇನ್ನೂ ಹಾಗೆಯೇ ಉಳಿದಿದೆ. ಇದು ಆಧುನಿಕ ಯುಗದ ವಿಷಯವಾದರೆ, ಪ್ರಾಚೀನ ಕಾಲದಲ್ಲಿ ಮಹಿಳೆಯರ ಸ್ಥಿತಿಗತಿಗಳ ಬಗ್ಗೆ ಊಹಿಸುವುದು ತುಸು ಕಷ್ಟವೇ ಸರಿ. ಆದರೂ

ಸಹ ಪ್ರಾಚೀನ ಕಾಲದಲ್ಲಿ ಮಹಿಳೆ ಪುರುಷರ ಸಮನಾಗಿ ಹೊರಹೊಮ್ಮದಿದ್ದರೂ ಸಹ ಉನ್ನತವರ್ಗಕ್ಕೆ ಸೇರಿದಂತಹ ಅರಮನೆಯ ಭಾಗವಾಗಿದ್ದ ಮಹಿಳೆಯರು ತಮ್ಮ ಸ್ವಂತ ಬಲದಿಂದ, ಕಾರ್ಯಬಲದಿಂದ ಇತಿಹಾಸದಲ್ಲಿ ಬೆಲೆಯುಳ್ಳ ಘಟಕಗಳಾಗಿ ರೂಪಿತಗೊಂಡಿದ್ದಾರೆ. ಇಂದಿನ ಪ್ರಜಾಪ್ರಭುತ್ವದ ಮಾದರಿಯಲ್ಲಿ ಮಹಿಳೆಯರು ಯಾವ ರೀತಿ ರಾಜಕೀಯದಲ್ಲಿ ಪಾಲ್ಗೊಳ್ಳುತ್ತಿದ್ದಾರೋ ಹಾಗೆಯೇ ಅಂದಿನ ಮಹಿಳೆಯರು ರಾಜಕೀಯದಲ್ಲಿ ಪಾಲ್ಗೊಳ್ಳುತ್ತಿದ್ದರು. ವಂಶಪಾರಂಪರ್ಯವಾಗಿ ಅಧಿಕಾರ ಪಡೆಯುತ್ತಿದ್ದರು.

ರಾಣಿಯರು ರಾಜಕೀಯದಲ್ಲಿ ಪಾಲ್ಗೊಳ್ಳುತ್ತಿದ್ದರು ಎಂಬುದಕ್ಕೆ ಸಾಹಿತ್ಯ ಶಾಸನ, ವಿದೇಶಿಯರ ಬರವಣಿಗೆಗಳು ಮಾಹಿತಿಯನ್ನು ಒದಗಿಸುತ್ತವೆ. ಪ್ರಾಚೀನ ರಾಜಮನೆತನಗಳ ಕಾಲದ ರಾಜಕೀಯ ವಲಯ ಶಿಷ್ಠ ಪರಿಪಾಲನ, ದುಷ್ಟಮರ್ದನದಂಡ, ಉಭಯ ಜವಾಬ್ದಾರಿಯ ಕಾರ್ಯವಲಯವಾಗಿದ್ದು ಪ್ರಜೆಗಳ ಹಿತದಲ್ಲಿ ವೈರಿಗಳ ಜೊತೆಗೂಡಿ ನಡೆಸುವಂತಹ ಲಾಭ ನಷ್ಟದ ವ್ಯಾಪಾರವಾಗಿದೆ. ಇದು ದೇಹ ಸಾಮರ್ಥ್ಯ ಶೀಲ ಸಂರಕ್ಷಣೆಯ ದೃಷ್ಟಿಯಿಂದ ಸ್ತ್ರೀ, ಈ ರಂಗದಲ್ಲಿ ಉಳಿಯಲಾರದಂತಹ ಕ್ಷೇತ್ರವಾಗಿದ್ದರೂ ಪ್ರಾಚೀನ ಕನ್ನಡದ ರಾಣಿಯರು ಆಡಳಿತ ಎಂಬುವ ಪದನಾಮದಿಂದ ದೂರ ಉಳಿದಂತೆ ಕಂಡುಬಂದರೂ ಸಾಕಷ್ಟು ಸಂಖ್ಯೆಯ ರಾಣಿಯರು ರಾಜಕೀಯರಂಗವನ್ನು ಪ್ರವೇಶಿಸಿದ್ದಾರೆ.[1]

ಬೂತುಗನ ಅರಸಿ ಸರಮಬ್ಬೆ, ಶ್ರೀಮಚ್ಚಾಳುಕ್ಯಪೆರ್ಮಾಡಿದೇವರ ಮಗಳು ಪಂಪಾದೇವಿ, ಅಕ್ಕಾದೇವಿ, ಚಾಲುಕ್ಯ ಎರಡನೇ ವಿಕ್ರಮಾದಿತ್ಯನ ಮಡದಿ ಲೋಕಮಹಾದೇವಿ, ತ್ರೈಲೋಕ್ಯ ಮಹಾದೇವಿ, ರಾಷ್ಟ್ರಕೂಟರ ದೃವನರಾಣಿ ಶೀಲಮಹಾದೇವಿ, ಚಾಲುಕ್ಯ ಸೋಮೇಶ್ವರನ ರಾಣಿ ಲೀಲಾದೇವಿ, ಚಂದ್ರಿಕಾದೇವಿ, ಆರನೇ ವಿಕ್ರಮಾದಿತ್ಯನ ರಾಣಿಯರಾದ ಮಾಳಲಾದೇವಿ, ಸಾವಲಾದೇವಿ, ಸುಗ್ಗಲಾದೇವಿ, ಹೊಯ್ಸಳ ವಿಷ್ಣುವರ್ಧನ ರಾಣಿ ರಾಜಲೆ, ಚಿಕ್ಕಶಾಂತಲೆ, ವೀರಬಲ್ಲಾಳನ ರಾನಿ ಅಭಿನವಕೇತಲಾದೇವಿ, ಬಮ್ಮಲಾದೇವಿ, ಲಚ್ಚಲಾದೇವಿ, ನಾಲ್ವಡಿ ಗೋವಿಂದನ ರಾಣಿ ಬಾಗಿಯವ್ವೆ, ಮುಮ್ಮಡಿ ಗೋವಿಂದನ ರಾಣಿ ಗಾಮುಂಡಬ್ಬೆ, ಅಮೋಘವರ್ಷನ ಮಗಳು ಚಂದ್ರಲಬ್ಬೆ, ರೇವಕನಿಮ್ಮಡಿ, ಇಂದ್ರನ ರಾಣಿ ಗೋವಿಂದಬ್ಬೆ, ಇಮ್ಮಡಿ ಬೂತುಗನ ರಾಣಿ ಪದುಮಬ್ಬರಸಿ, ಕಂಪಣ್ಣನ ಎರಡನೇ ರಾಣಿ ರಮಾದೇವಿ, ರಾಮಚಂದ್ರನರಾಣಿ ಬುಕ್ಕಾಂಬ,

[1] ಡಾ. ಎಂ.ಎ. ಸಿಂಗಮ್ಮಾಳ್, **ರಾಜಕಾರಣದಲ್ಲಿ ಮಹಿಳೆ,** ಪುಟ–1, ಬೆಂಗಳೂರು, ಕನ್ನಡ ಸಾಹಿತ್ಯ ಪರಿಷತ್, 1975.

ಸಾಲ್ವಮನೆತನದ ತಿಮ್ಮರಾಜನ ರಾಣಿ ಹರಿಮಾ, ಈಶ್ವರ ನಾಯಕನ ರಾಣಿ ಬುಕ್ಕಾಂಬೆ, ನಾಗಲಾದೇವಿ, ಶ್ರೀಕೃಷ್ಣ ದೇವರಾಯನ ರಾಣಿಯರಾದ ಚಿನ್ನಾದೇವಿ, ತಿರುಮಲಾದೇವಿ ಮತ್ತು ಜಗನ್ಮೋಹಿನಿಯರು.

ಕರ್ನಾಟಕದ ರಾಣಿಯರು, ಪಾಣಿನಿ ಹೇಳಿರುವಂತೆ 'ಅಸೂರ್ಯಂ ಪಶ್ಯೆ'* ಯರಾಗಿರಲಿಲ್ಲ. ರಾಜ್ಯದ ಕೌಟುಂಬಿಕ, ಸಾಮಾಜಿಕ ಮತ್ತು ಧಾರ್ಮಿಕ ಜೀವನಗಳಲ್ಲಿ ಯಶಸ್ವೀಯುತವಾದ ಪಾತ್ರವನ್ನು ನಿರ್ವಹಿಸಿರುವುದು ಮಾತ್ರವಲ್ಲ, ರಾಜಕೀಯ ರಂಗದಲ್ಲೂ ಸಹ ಪ್ರಧಾನವಾದ ಪಾತ್ರವನ್ನು ವಹಿಸಿದ್ದಾರೆಂದು ಶಾಸನಾಧಾರಗಳಿಂದ ತಿಳಿದು ಬರುತ್ತದೆ. ರಾಜರು ತಮ್ಮ ರಾಣಿಯರನ್ನು ರಾಜ್ಯದ ಬೇರೆ–ಬೇರೆ ಪ್ರದೇಶಗಳಲ್ಲಿ ಆಳ್ವಿಕೆ ನಡೆಸಲು ನೇಮಿಸುತ್ತಿದ್ದರು. ಆ ಮೂಲಕ ರಾಜ್ಯದ ಸಾಮ್ರಾಜ್ಯದ ಯಶಸ್ವೀಯುತ ಆಡಳಿತಕ್ಕೆ ಕಾರಣವಾಗುತ್ತಿದ್ದರು.

'ಸ್ವಸ್ತ್ಯನವರತ ಪರಮಕಲ್ಯಾಣಾಭ್ಯುದಯ ಸಹಸ್ರಫಳಬೋಗಭಾಗಿನಿ ದ್ವಿತೀಯ ಲಕ್ಷ್ಮೀ ಸಮಾನೆ ಸಕಳಗುಣಗುಣಾಮಾನೆ ಅಭಿನವರುಗು ಮಿಣೀದೇವಿ ಪರಹಿತ ಸತ್ಯಭಾವೆ ವಿವೈಕೈಕ ಬ್ರಹಸ್ಪತಿ ಪ್ರತ್ಯುತ್ಪನ್ನವಾಚಸ್ಪತಿ ಮುನಿಜನವಿನೇಯ ಜನವಿನೀತೆ ಚತುಸ್ಸಮಯ ಸಮುದ್ದರಣೆ ಬೃತಗುಣಶೀಳ ಚಾರಿತ್ರಾಂತಃಕ್ಕರಣೆ ಲೋಕೈಕವಿಖ್ಯಾತೆ ಪತಿಬ್ರತಾ ಪ್ರಭಾವ ಪ್ರಸಿದ್ದಸೀತೆ, ಸಕಳ ವಂದಿಜನ ಚಿಂತಾಮಣಿ ಸಮ್ಯುಕ್ತ ಚೂಡಾಮಣಿ ಪುಣ್ಯೋವಾರ್ಜ್ಜನಕರಣಕಾರಣಿ ಮನೋರಾಜವಿಜವಿಜೇಯ ಪತಾಕೆ ನಿಜುಕುಳಾಭ್ಯುದಯ ಧೀಪಿಕೆ ಗೀತವಾದ್ಯ ನೃತ್ಯ ಸೂತ್ರಧಾರೆ ಮಹಾರಾಭಯ ಬೈಶಜ್ಯಶಾಸ್ತ್ರದಾನ ವಿನೋದೆ ಭವ್ಯಜನವಚ್ಚಳೆ"[2] ಎಂಬ ಬಿರುದುಗಳ ಸರಮಾಲೆ ರಾಣಿಯರ ಅರ್ಹತೆಗಳಾಗಿದ್ದವು.

ಕೇವಲ ರಾಣಿಯರು "ಇಷ್ಟ ವಿಷಯ ಕಾಮಬೋಗಂಗಳಂ ಅನುಭವಿಸುತ್ತಮಿರೆ" ಎಂಬ ಮಾತಿಗೂ, 'ಸುಖ ಸಂಕಥಾ ವಿನೋದದಿಂ ರಾಜ್ಯಂಗೆ ಯುತ್ತಮಿರೆ' ಎಂಬ ಮಾತಿಗೂ ರಾಣಿಯರು ಅರ್ಹತೆಯನ್ನು ಪಡೆದು ಕೊಂಡವರಾಗಿದ್ದರೂ ಕೂಡ ತಮ್ಮದೇ ಆದೆ ಅಧಮ್ಯ ಚಾಪನ್ನು ಮೂಡಿಸಿದ್ದಾರೆ. ರಾಣಿಯರು ಶಾಸನಾಧಿಗಳಲ್ಲಿ ಚಕ್ರೇಶ್ವರಿ, ಮಹಾಮಂಡಳೇಶ್ವರಿ, ಸಾಮಂತ ಸೀಮಂತಿನಿ, ದಂಡನಾಯಕಿತಿ, ನಾಳ್ಗಾವುಂಡಿ, ಗಾವುಂಡಿಯರೆಂದು ಉಲ್ಲೇಖಿತರಾಗಿದ್ದಾರೆ.

---

* ಅಸೂರ್ಯಂ ಪಶ್ಯೆ ಎಂದರೆ ಅಧೈರ್ಯವಂತರಾಗಿರಲಿಲ್ಲ, ಅಶಕ್ತರಾಗಿರಲಿಲ್ಲ ಎಂದರ್ಥ.

[2] ಎ.ಕ. ii, ಶ್ರವಣ ಬೆಳಗೊಳ, ಶಾಸನ, ಸಂ.132, 143, ಕ್ರಿ.ಶ. 1123,

ರಾಣಿಯರು ಉನ್ನತವರ್ಗದವರಾಗಿರುತ್ತಿದ್ದರಿಂದ ಅವರುಗಳು ರಾಜಕೀಯ ರಂಗ ಪ್ರವೇಶಿಸಬೇಕೆಂಬ ಅಭಿಲಾಷೆಯಿಂದ ವಿದ್ಯೆಯನ್ನು ಪಡೆಯದೆ, ಬದಲಾಗಿ ಬಹುವಾಗಿ ಅಕ್ಷರ ಜ್ಞಾನ ಮತ್ತು ಪ್ರಪಂಚ ಜ್ಞಾನವನ್ನು ಹೊಂದುವುದಕ್ಕಾಗಿಯೇ ಎಂಬುದನ್ನು ತಿಳಿಯಬಹುದು. ರಾಜಕೀಯ ತರಬೇತಿಯನ್ನು ಕಡ್ಡಾಯವಾಗಿ ಪಡೆಯದೆ ಹೋದರೂ ಪ್ರಭುತ್ವ ಮನೋಭಾವ ಮತ್ತು ಅನಿವಾರ್ಯ ಸಂದರ್ಭಗಳ ಕಾರಣಗಳಿಂದಾಗಿ ಆಡಳಿತಕ್ಕೆ ಅಸ್ತು ಎಂದಿರುವುದೇ ಹೆಚ್ಚು.

**ರಾಜನೊಂದಿಗೆ ಕೂಡಿಕೆ ಆಡಳಿತ**

ಪ್ರಾಚೀನ ಕರ್ನಾಟಕದಲ್ಲಿ ರಾಣಿಯರು ತಮ್ಮ ಪ್ರಭುವರ್ಗದೊಡನೆ ಕೂಡ ಆಳ್ವಿಕೆಯಲ್ಲಿದ್ದುದ್ದನ್ನು ಶಾಸನಗಳಿಂದ ಅರಿಯಬಹುದಾಗಿದೆ. ಸಾಮಾನ್ಯವಾಗಿ ರಾಜನೊಂದಿಗೆ ಆಡಳಿತದಲ್ಲಿ ಪಾಲ್ಗೊಳ್ಳುತ್ತಿದ್ದವರು ಆತನ ಪಟ್ಟದರಸಿಯರೇ ಎಂಬುದರಲ್ಲಿ ಸಂಶಯವಿಲ್ಲ. ರಾಣಿಯರು ರಾಜನ ಜೊತೆಯಲ್ಲಿಯೇ ಇದ್ದು, ಇಲ್ಲದೆಯೂ ಕೂಡ ಸ್ವತಂತ್ರ್ಯ ಸ್ವರೂಪದ ಆಡಳಿತವನ್ನು ಮಾಡುತ್ತಿದ್ದರು.

ಪ್ರಭುತ್ವ ಮನೋಭಾವ ಮತ್ತು ಅನಿವಾರ್ಯ ಪ್ರಸಂಗಗಳ ಕಾರಣವಾಗಿ ಕೆಲವು ರಾಣಿಯರು ನೇರವಾಗಿ ಆಡಳಿತದಲ್ಲಿ ಭಾಗವಹಿಸಿದರೆ, ಬಹುಸಂಖ್ಯಾತ ರಾಣಿಯರು ರಾಜನೊಂದಿಗೆ ಸುಖಸಂಕಾಥಾ ವಿನೋಧದಿಂದ ಇದ್ದರು. ಆಡಳಿತ ಭಾಗವಹಿಸುತ್ತಿದ್ದರು. ಕೆಲವು ರಾಣಿಯರು ಕಾರ್ಯೇಷುಮಂತ್ರಿಗಳಾಗಿ, ಚತುರ ಆಡಳಿತ ನಿರೂಪಕರಾಗಿ ತಮ್ಮ ಪತಿಯರ ಸುವ್ಯವಸ್ಥಿತ ರಾಜ್ಯ ನಿರ್ವಹಣೆಯಲ್ಲಿ ಬೆಂಗಾವಲಾಗಿ ನಿಂತಿರುವರು. ಉದಾಹರಣೆಗೆ ಕದಂಬರ ಹರಿಕೇಸರಿಯ ರಾಣಿ ಲಚ್ಚಲಾದೇವಿ. ಇವಳನ್ನು

> "ಭೂವನಿತಾವರಂ ಹರಿಗನಾನೃಪಧೀರನುರಸ್ಥಳಕೆ ಲಕ್ಷ್ಮೀವಧೂ
> ಪೀನ ಬಾಹುಯುಗಳಕೆ ಜಯಾಂಗನೆ ತನ್ಮುಖಕ್ಕೆ ವಾಕುಶ್ರೀ
> ವಧುವಾಗಿ ರಂಜಿಸಿ ಮಹೋನ್ನತಿಯಂ ಪಡೆದುದ್ಘಕ್ತೀರ್ತಿಕಳಾ
> ವತಿಯೆಂದು ಬಣ್ಣಿಪುದು ಲಚ್ಚಲದೇವಿಯನೀಂ ಜಗಜ್ಜನಂ॥"

ಎಂದು ಶಾಸನ ವರ್ಣಿಸಿದೆ.[3] ಇದರರ್ಥ ರಾಣಿ ಲಚ್ಚಲಾದೇವಿ ರಾಜನಿಗೆ ಆಡಳಿತದಲ್ಲಿ ನಿರ್ವಹಣೆಯಲ್ಲಿ ಬೆನ್ನೆಲುಬಾಗಿದ್ದು ಕಲಾಭೂಷಿತೆಯಾಗಿ ಜಗತ್ತಿಗೆ ಮಾದರಿಯಂತಿದ್ದಳೆಂಬುದಾಗಿದೆ.

ಹೀಗೆ ಕದಂಬ ಮನೆತನದ ರಾಣಿಯರೂ ಪತಿಯೊಂದಿಗೆ ಧರ್ಮ ಅರ್ಥ ಕಾಮ ಮೋಕ್ಷಗಳಂತಹ ಚತುರ್ವಿಧ ಪುರುಷಾರ್ಥಗಳಲ್ಲಿ ಸಮಭಾಗಿಗಳಾಗಿ ಸತಿಯ ರಾಜ್ಯಾಡಳಿತದಲ್ಲಿ ಸಕ್ರಿಯ ಪಾಲುದಾರಳಾಗಿ ರಾಜ್ಯದ ಯಶಸ್ಸಿಗೆ ಶ್ರಮಿಸುತ್ತಿದ್ದರು.

ಬಾದಾಮಿ ಚಾಲುಕ್ಯರ ಮೊದಲನೆಯ ಪುಲಿಕೇಶಿಯ ರಾಣಿ ದುರ್ಲಭಾದೇವಿಯನ್ನು ಮಂಗಳೇಶನ ಶಾಸನವೊಂದು 'ರಾಜನಿಪುಣೆ'[4] ಎಂದು ಪ್ರಶಂಸಿದೆ. 2ನೇ ಪುಲಿಕೆಶಿಯ ಮಗ ಚಂದ್ರಾದಿತ್ಯನ ರಾಣಿ–ವಿಜಯ ಮಹಾದೇವಿ ಬಾದಾಮಿ ಚಾಲುಕ್ಯ ರಾಣಿಯರಲ್ಲಿ ಅತ್ಯಂತ ಗೌರವಕ್ಕೆ ಪಾತ್ರಳಾದವಳು. ಜೊತೆಗೆ ಸ್ವತಃ ವಿದ್ವಾಂಸೆಯಾದ ಇವಳು ಚಂದ್ರಾದಿತ್ಯನ ಮರಣದ ತರುವಾಯ ಸ್ವತಂತ್ರ್ಯ ಆಡಳಿತ ನಡೆಸಿದ ವಿಷಯ ತಿಳಿದು ಬರುತ್ತದೆ. ಇದರಿಂದ ಆಕೆ ತನ್ನ ಪತಿಯ ಅಸ್ತಿತ್ವದ ಕಾಲದಲ್ಲಿಯೂ ಕೂಡ ರಾಜಕಾರ್ಯಗಳಿಗೆ ಸಹಕರಿಸುತ್ತಿದ್ದ ವಿಷಯವನ್ನು ಸೇರಿಸಲಾಗಿದೆ.[5] ಲೋಕೇತಿನಿಮ್ಮಡಿಯು ರಾಜ್ಯಭಾರಮಾಡಿದ ವಿಷಯವನ್ನು ವಿಜಯಾದಿತ್ಯನ ಶಾಸನವೊಂದು ಉಲ್ಲೇಖಿಸಿದೆ.[6] ಚಾಲುಕ್ಯ ರಾಣಿಯರು ತಮ್ಮ ಪತಿಯೊಂದಿಗೆ ದಿಗ್ವಿಜಯಗಳಲ್ಲೂ ಸಹ ಪಾಲ್ಗೊಳ್ಳುತ್ತಿದ್ದರು. ಉದಾಹರಣೆಗೆ ವಿನಯಾದಿತ್ಯನ ಉತ್ತರದ ದಿಗ್ವಿಜಯಗಳಲ್ಲಿ 'ವಿನಯವತಿ ಪತಿಯೊಡನೆ ಹೋಗಿದ್ದಳು.[7] ಆಡಳಿತದಲ್ಲಿ ಆಕೆ ಪ್ರಾವಿಣ್ಯಳಾಗದಿದ್ದರೆ ಇಂತಹ ಯುದ್ಧ ಸಂದರ್ಭದಲ್ಲಿ ರಾಣಿಯರು ಹೋಗುವಂತಹ ಪ್ರಸಂಗಗಳು ಇರುತ್ತಿರಲಿಲ್ಲ. ಹಾಗಾಗಿ ರಣರಂಗದ ದರ್ಶನವನ್ನು ಮಾಡಿದ ಬಗ್ಗೆ ತಿಳಿಸಬಹುದಾಗಿದೆ.

ರಾಷ್ಟ್ರಕೂಟ ವಂಶದಲ್ಲಿ ರಾಣಿಯರು ಅತ್ಯಂತ ಲವಲವಿಕೆಯಿಂದ ಕೂಡಿದ್ದರು. ರಾಷ್ಟ್ರಕೂಟ ರಾಣಿಯರು ಎಷ್ಟು ಪ್ರಭಾವಶಾಲಿಗಳಾಗಿದ್ದರು ಎಂಬುದನ್ನು ಶಾಸನಗಳು, ಸಮಕಾಲೀನ ಸಾಹಿತ್ಯಿಕ ಕೃತಿಗಳು ಮತ್ತು ತಾಮ್ರಪಟ ಶಾಸನಗಳು ನಿಖರವಾದ ಮಾಹಿತಿಯನ್ನು ನೀಡುತ್ತವೆ. ರಾಷ್ಟ್ರಕೂಟ

---

[3] ಎ.ಇ. XVI. 11 ಬಂಕಾಪುರದ ಶಾಸನ

[4] ಐ.ಎ. ನಂ. 19, ಪು–9, ಮಹಾಕೂಟ, (ತಾ) ಬಾದಾಮಿ ಕ್ರಿ.ಶ. 601.

[5] ಐ.ಎ. vii, ಪುಟ. 163, ನೇರೂರು ತಾಮ್ರಪಟ, ಕ್ರಿ.ಶ. 689.

[6] ಬಿ.ಕೆ.ಪಿ. L-1-2 ಕುರ್ತಕೋಟಿ (ತಾ) ಗದಗ, ಕ್ರಿ.ಶ. 696–754.

[7] ಡಾ. ಶೀಲಾಕಾಂತ ಪತ್ತಾರ, **ಬಾದಾಮಿ ಸಾಂಸ್ಕೃತಿಕ ಅಧ್ಯಯನ,** ಪುಟ–64, ಪ್ರಸಾರಂಗ, ಹಂಪಿ.

ಚಕ್ರವರ್ತಿ ಧ್ರುವನ ರಾಣಿಯಾಗಿದ್ದ ವೆಂಗಿಚಾಲುಕ್ಯರ ರಾಜಕುಮಾರಿ ಶೀಲಾಭಟ್ಟಾರಿಕಾ ಶಾಸನದಲ್ಲಿ ತನ್ನನ್ನು 'ಪರಮೇಶ್ವರಿ' ಹಾಗೂ 'ಪರಮಭಟ್ಟಾರಿಕಾ' ಶೀಲಾಮಹಾದೇವಿ ಎಂದು ಸಂಬೋದಿಸಿಕೊಂಡಿದ್ದಾಳೆ. ಈ ಸಂಬೋಧನೆಗಳು ರಾಷ್ಟ್ರಕೂಟರ ರಾಣಿಯಾಗಿದ್ದ ಆಕೆಯ ಪರಮಾಧಿಕಾರಿವನ್ನು ಸೂಚಿಸುತ್ತದೆ.[8]

ದೃವನ ರಾಣಿ ಶೀಲಾಮಹಾದೇವಿ ಹೊಂದಿದ್ದ ದಾನಪತ್ರಗಳು ರಾಷ್ಟ್ರಪತಿ, ವಿಷಯಪತಿ, ಗ್ರಾಮಕೂಟ, ನಿಯುಕ್ತ, ಮಹತ್ತರ ಈ ಮುಂತಾದ ಆಡಳಿತಾಧಿಕಾರಿಗಳಿಗೆ ತಾನು ದುರ್ಗಾದಿತ್ಯವೆಂಬುವವನಿಗೆ ನಂದಾಪುರದ್ವಾರಿ ವಿಷಯದಲ್ಲಿದ್ದ ಕೊಳವದ್ರ ಗ್ರಾಮವನ್ನು ದಾನ ನೀಡಿದುದರ ಬಗೆಗಿನ ಆದೇಶವಾಗಿದೆ. ಈ ದಾನಶಾಸನವನ್ನು ರಾಣಿಯು ರಾಜನ ಸಂಪ್ರದಾಯಿಕ ಅನುಮತಿಯನ್ನು ಪಡೆಯದೆಯೇ ಸ್ವತಂತ್ರವಾಗಿ ತನ್ನ ಹೆಸರಿನಲ್ಲೇ ಹೊರಡಿಸಿದ್ದಾಳೆ. ಅಧಿಕಾರಿಗಳಿಗೆ ತನ್ನ ಆದೇಶವನ್ನು ನೀಡಿದ್ದಾಳೆ. ಇದರಿಂದ ರಾಜ್ಯದ ಶಾಸನಾಧಿಕಾರವನ್ನೂ ಸ್ವಾತಂತ್ರ್ಯವನ್ನು ರಾಷ್ಟ್ರಕೂಟ ರಾಣಿಯಾದ ಶೀಲಮಹಾದೇವಿ ಪಡೆದಿದ್ದಳು. ಎಂಬುದು ರಾಣಿಯರು ರಾಜರಷ್ಟೇ ಅಧಿಕಾರವನ್ನು ಹೊಂದಿದ್ದರು ಎಂಬುದಕ್ಕೆ ಇದು ಪುಷ್ಟಿನೀಡುತ್ತದೆ. ಇದರಿಂದ ಮೇಲಿನ ವಿಷಯವು ಸತ್ಯವೆಂದು ವೇದ್ಯವಾಗುತ್ತದೆ.[9]

ರಾಷ್ಟ್ರಕೂಟರ ಮುಮ್ಮಡಿ ಗೋವಿಂದನ ರಾಣಿ ಗಾಮುಂಡಬ್ಬೆಯ ಹೆಸರು ರಾಜನ ಹೆಸರಿನೊಂದಿಗೆ ತಾಮ್ರಪಟಗಳಲ್ಲಿ ಉಲ್ಲೇಖಗೊಂಡಿದೆ. ರಾಣಿಯು ಯುದ್ಧ ಶಿಬಿರದಲ್ಲಿ ತಂಗಿದ್ದಾಗ ಅಮೋಘವರ್ಷನನ್ನು ಹಡೆದಳೆಂದು ತಿಳಿಸುತ್ತದೆ. ಇದರಲ್ಲಿರುವ ವಿವರಗಳಿಂದ ರಾಣಿಯರು ಯುದ್ಧ ರಣರಂಗಕ್ಕೆ ರಾಜನ ಬೆಂಬಲವಾಗಿ ಹೊರಡುತ್ತಿದ್ದರೆಂಬ ವಿಷಯಗಳು ತಿಳಿದು ಬರುತ್ತವೆ.[10] ರಾಣಿಯರು ರಾಜಕೀಯ ರಂಗದಲ್ಲಿ ತಾವು ಪಡೆದಿದ್ದ ಅತ್ಯುನ್ನತ ಹಂತದ ಅಧಿಕಾರದ ಜೊತೆಗೆ ಸ್ವಾತಂತ್ರ್ಯವನ್ನು ತಿಳಿಸುತ್ತದೆ.

ನಾಲ್ವಡಿ ಗೋವಿಂದನ ಅಂದೂರ ತಾಮ್ರಪಟಗಳು ಮೂರು ಜನ ರಾಣಿಯರ ಸ್ಥಾನಮಾನದ ಬಗ್ಗೆ ಮತ್ತಷ್ಟು ಸ್ವಾರಸ್ಯಕರವಾದ ಮಾಹಿತಿಯನ್ನು ಒದಗಿಸುತ್ತವೆ. ಈ ಶಾಸನವು ನಾಲ್ವಡಿ

---

8 ಎ.ಇ. xxii ನಂ. 17 ಜತ್ವಾಯಿ ತಾಮ್ರಪಟ, ಕ್ರಿ.ಶ. 786.ಅ

9 ಎ.ಇಂ. ಜೆತ್ವಾಯಿ ತಾಮ್ರಪಟಗಳು. (ಎ.ಇ. xxii, ನಂ. 17)

10 ಎ.ಇಂ. ಸಂಪುಟ xxxiii ಭಾಗ vii ಸಂ.60 ಬ್ರಿಟೀಷ್ ಮ್ಯೂಜಿಯಂ ನಲ್ಲಿನ ಮುಮ್ಮಡಿ ಗೋವಿಂದನ ತಾಮ್ರಪಟಗಳು.

ಗೋವಿಂದನ ಮಹಾರಾಣಿ ಬಾಗಿಯವ್ವೆ ರಾಷ್ಟ್ರಕೂಟ ರಾಜ್ಯದ ಹನ್ನೆರಡು ಸಾಮಂತ ಪ್ರಮುಖರಿಂದ ಪಟ್ಟವನ್ನು ಕಟ್ಟಿಸಿಕೊಂಡಳು. ನಾಲ್ವಡಿಗೋವಿಂದನು ಈ ಪಟ್ಟದ ಸಂದರ್ಭದಲ್ಲಿ ಹಿರಣ್ಯಗರ್ಭ, ಉಭಯಮುಖಿ, ಗೋಸಹಸ್ರ ಮತ್ತು ಕಲ್ಪವೃಕ್ಷ ದಾನಗಳನ್ನು ತನ್ನ ರಾಣಿಗೆ ಧಾರ್ಮಿಕ ಶ್ರೇಯಸ್ಸು ಉಂಟಾಗಲೆಂದು ನೀಡಿದನೆಂದು ತಿಳಿಸುತ್ತದೆ. ಉಲ್ಲೇಖಿತ ಧ್ರುವನ ರಾಣಿ ಶೀಲಮಹಾದೇವಿ ಮತ್ತು ನಾಲ್ವಡಿ ಗೋವಿಂದನ ರಾಣಿ ಭಾಗಿಯವ್ವೆ ಇಬ್ಬರೂ ವೆಂಗಿಚಾಲುಕ್ಯ ಮನೆತನದ ರಾಜಕುಮಾರಿಯಾಗಿದ್ದರು. ಈ ಮೇಲೆ ಉಲ್ಲೇಖಿಸಲ್ಪಟ್ಟ ಜೇತ್ವಾಯಿ ಮತ್ತು ಅಂದೂರ ತಾಮ್ರಪಟಗಳು ನೀಡುವ ವಿವರಗಳು ವೆಂಗಿಚಾಲುಕ್ಯ ಮನೆತನದ ರಾಜಕುಮಾರಿಯರಿಗೆ ರಾಷ್ಟ್ರಕೂಟರ ರಾಜಕೀಯ ವ್ಯವಸ್ಥೆಯಲ್ಲಿ ಕೊಡಲ್ಪಟ್ಟಿದ್ದ, ರಾಜಕೀಯ ಹಾಗೂ ಆಡಳಿತಾತ್ಮಕ ಹಾಗೂ ಧಾರ್ಮಿಕ ಅಧಿಕಾರ ಮತ್ತು ಸ್ಥಾನಮಾನಗಳು ಎಷ್ಟು ವಿಶಿಷ್ಠ ಉನ್ನತವಾಗಿದ್ದವೆಂಬುದನ್ನು ಮನದಟ್ಟು ಮಾಡಿಕೊಡುತ್ತವೆ. ಅಲ್ಲದೆ ವೆಂಗಿಚಾಲುಕ್ಯ ಮನೆತನವು ಅತ್ಯಂತ ಪ್ರಭಾವ ಶಾಲಿ ಹಾಗೂ ಪ್ರತಿಸ್ಪರ್ಧಿ ಸಮಕಾಲೀನ ರಾಜಮನೆತನವಾಗಿತ್ತೆಂಬುದನ್ನು ಸೂಚಿಸುತ್ತವೆ. ಆದುದ್ದರಿಂದಲೇ ಇಂತಹ ಪ್ರತಿಸ್ಪರ್ಧಿ ರಾಜಮನೆತನವನ್ನು ತಮ್ಮ ಅಂಕಿತಕ್ಕೆ ಒಳಪಡಿಸುವ ಉದ್ದೇಶದಿಂದಲೇ ವೆಂಗಿಚಾಲುಕ್ಯ ಮನೆತನದ ರಾಜಕುಮಾರಿಯರನ್ನು ರಾಷ್ಟ್ರಕೂಟ ಅರಸರು ವಿವಾಹವಾಗಿ ತಮ್ಮ ರಾಣಿಯರಿಗೆ ಪಟ್ಟಬಂಧದ ಅಧಿಕಾರ, ಧರ್ಮಕಾರ್ಯಗಳನ್ನು ಸ್ವತಂತ್ರವಾಗಿ ನಡೆಸಿ ದಾನ ಶಾಸನಗಳನ್ನು ಹಾಕಿಸುವ ಅಧಿಕಾರ ಮುಂತಾದ ವಿಶೇಷ ರಾಜಕೀಯ ಸ್ಥಾನಮಾನಾಧಿಕಾರಗಳನ್ನು ನೀಡಿದ್ದರು ಎಂಬುದು ತಿಳಿಸುತ್ತದೆ.

ರಾಷ್ಟ್ರಕೂಟರ ಕಾಲದಲ್ಲಿ ರಾಷ್ಟ್ರಕೂಟ ರಾಣಿಯರು ಯಾರು ರಾಜಕುಮಾರು ಅಪ್ರಾಪ್ತವಯಸ್ಸಿನಲ್ಲಿಯೇ ಸಿಂಹಾಸನವೇರಿದಾಗ ತಮ್ಮ ಪುತ್ರನ ಹೆಸರಿನಲ್ಲಿ ಪೋಷಕತ್ವ ಸರ್ಕಾರವನ್ನು ನಡೆಸಿರುವ ನಿದರ್ಶನಗಳು ದೊರೆಯುವುದಿಲ್ಲ. ಮುಮ್ಮಡಿ ಗೋವಿಂದನ ಪುತ್ರ ಒಂದನೇ ಶರ್ವ ಅಮೋಘವರ್ಷ ಅಪ್ರಾಪ್ತ ವಯಸ್ಕನಾಗಿದ್ದಾಗಲೇ ಗೋವಿಂದನ ಮರಣದ ನಂತರ ಸಿಂಹಾಸನವನ್ನೇರಿದ ಸಂದರ್ಭದಲ್ಲಿ ಪೋಷಕತ್ವ ಸರ್ಕಾರವನ್ನು ನಿರ್ವಹಿಸಲು ನೇಮಕಗೊಂಡದ್ದು ಗುಜರಾತಿನ ರಾಷ್ಟ್ರಕೂಟ ಮನೆತನದ ರಾಜ ಮುಮ್ಮಡಿ ಕರ್ಕ, ಹಾಗೆಯೇ ಮುಮ್ಮಡಿಕೃಷ್ಣನ ಮಗ ನಾಲ್ವಡಿ ಇಂದ್ರನ ಪರವಾಗಿ ಪೋಷಕ ಸರ್ಕಾರವನ್ನು ನಿರ್ವಹಿಸಿದ ಗಂಗ ಮನೆತನದ ಮಾರಸಿಂಹನಾಗಿದ್ದನು.[11] ಈ ರೀತಿ ರಾಜಮಾತೆಯರ ಬದಲಾಗಿ ಇತರ ರಾಜಮನೆತನದ

[11] ಡಾ.ಬಿ.ಎಸ್. ಶಾಮಲಾ ರತ್ನಕುಮಾರಿ, ಅಪ್ರಕಟಿತ ಪಿಹೆಚ್.ಡಿ. ಪ್ರಬಂಧ, **ರಾಷ್ಟ್ರಕೂಟ ರಾಜ್ಯ,** ಪುಟ–108–109.

ಬಂಧುಗಳಿಗೆ ವಹಿಸಿಕೊಟ್ಟಿರುವುದನ್ನು ಗಮನಿಸಿದರೆ ಸಂದರ್ಭದ ಕ್ಲಿಷ್ಟತೆಯೇ ಇದಕ್ಕೆ ಕಾರಣವೆನ್ನಬಹುದು. ರಾಷ್ಟ್ರಕೂಟರ ಮೂರನೇ ಗೋವಿಂದ ಮತ್ತು ಕೃಷ್ಣರು ಅಪ್ರತಿಮ ದಿಗ್ವಿಜಯಿಗಳಾಗಿದ್ದು ಸಾರ್ವಭೌಮತ್ವವನ್ನು ಉತ್ತರ ಮತ್ತು ದಕ್ಷಿಣ ಭಾರತದ ರಾಜರುಗಳ ಮೇಲೆ ಹೇರಿದ್ದರು. ಆದುದ್ದರಿಂದ ಅಪ್ರಾಪ್ತವಯಸ್ಕ ಇವರ ಪುತ್ರರು ಸಿಂಹಾಸನಾರೂಢರಾದಾಗ ರಾಷ್ಟ್ರಕೂಟ ದೊರೆಗಳಿಗೆ ಈ ಹಿಂದೆ ಸೋತಿದ್ದ ರಾಜರುಗಳು ಸ್ವತಂತ್ರರಾಗಲು ಹವಣಿಸಿ ರಾಜ್ಯದ ಮೇಲೆ ಯುದ್ಧ ನಡೆಸಲು ಯತ್ನನಡೆಸುತ್ತಿದ್ದರು. ರಾಜ್ಯ ವಿಪ್ಲವವನ್ನುಂಟು ಮಾಡುವ ಪರಿಸ್ಥಿತಿಯಿದ್ದಿತು. ಇಂತಹ ಪರಿಸ್ತಿತಿಯಲ್ಲಿ ರಾಜ್ಯದ ಭದ್ರತೆಯನ್ನೂ ತಮ್ಮ ರಾಜನ ಹಾಗೂ ನಿಷ್ಠಿರಾದ ಪರಿವಾರದ ರಕ್ಷಣೆ ಮಾಡಲು ರಾಜಸ್ತ್ರೀಯರಿಗಿಂತ ರಾಜಬಂಧುಗಳಲ್ಲಿ ಸಮರ್ಥ ಹಾಗೂ ನಿಷ್ಠರಾದ ರಾಜನನ್ನೇ ನೇಮಿಸುವುದು ತೀರಾ ಅನಿವಾರ್ಯವೆನಿಸಿದ್ದಿತು. ಹಾಗಾಗಿ ರಾಷ್ಟ್ರಕೂಟರ ರಾಜಮಾತೆಯರನ್ನು ಪೋಷಕತ್ವ ಸರ್ಕಾರದ ಜವಾಬ್ದಾರಿಯನ್ನು ನಿರ್ವಹಿಸಲು ನೇಮಿಸುತ್ತಿರಲಿಲ್ಲವೆಂದು ಹೇಳಬಹುದು.

ರಾಷ್ಟ್ರಕೂಟ ರಾಜಕುಮಾರಿಯರಾದ ಅಮೋಘವರ್ಷನ ಮಗಳು ಚಂದ್ರೋಬಲಬ್ಬೆ ಮತ್ತು ಮುಮ್ಮಡಿ ಅಮೋಘವರ್ಷನ ಮಗಳು ರೇವಕನಿಮ್ಮಡಿ ತಲಕಾಡಿನ ಗಂಗ ಮನೆತನದ ರಾಜಕುಮಾರರಾದ ಮೊದಲನೇ ಬೂತುಗನ ರಾಣಿ ರಾಯಚೂರಿನ ದೋಖ್ (ದಕ್ಷಿಣ) ಪ್ರದೇಶವನ್ನು ಆಳುತ್ತಿದ್ದಳು.[12] ಅಂತೆಯೇ ಎರಡನೇ ಬೂತುಗನ ರಾಣಿ ರೇವಕ ನಿಮ್ಮಡಿ ತನ್ನ ಪತಿಗೆ ಬಳುವಳಿಯಾಗಿ ಬಂದಿದ್ದ ಬೆಳ್ವೊಲ 300, ಪುಲಿಗೆರೆ 300 ಎಡೆವೊಳಲು 70 ಮತ್ತು ಕಿಸುಕಾಡು 70 ಪ್ರಾಂತ್ಯಗಳನ್ನು ನೋಡಿಕೊಳ್ಳುತ್ತಿದ್ದಳು.[13] ಇವರು ಪರೋಕ್ಷವಾಗಿ ರಾಜನ ಸಹಯೋಗದೊಂದಿಗೆ ಆಳ್ವಿಕೆ ನಡೆಸುತ್ತಿದ್ದದ್ದು ಕಾಣಸಿಗುತ್ತದೆ. ಈ ಮೇಲಿನ ಎಲ್ಲ ವಿವರಗಳಿಂದ ರಾಷ್ಟ್ರಕೂಟರ ಕಾಲದಲ್ಲಿ ರಾಣಿಯರು ಸುಸಂಸ್ಕೃತರಾಗಿದ್ದು ಪ್ರಭಾವಶಾಲಿಯೂ ಗೌರವಶಾಲಿಗಳೂ ಆಗಿದ್ದರೆಂದು ಖಚಿತವಾಗಿ ಹೇಳಬಹುದು.

ಹೊಯ್ಸಳರ ವಿಷ್ಣುವರ್ಧನನ ಪಟ್ಟಮಹಿಷಿ ಶಾಂತಲೆಯನ್ನು ಸಹ ಇಂಥಹ ರಾಣಿಯರ ಸಾಲಿಗೆ ಸೇರಿಸಬಹುದಾಗಿದೆ.

---

[12] ಎಂ.ಇ. ಸಂಪುಟ xxxiii ಭಾಗ vii ಸಂ.60, ಮುಮ್ಮಡಿ ಗೋವಿಂದನ ತಾಮ್ರಪಟಗಳು.

[13] ಅದೇ,

ಧುರದೊಳು ವಿಷ್ಣುನ್ರಿಪಾಳಕೆಂಗೆ ವಿಜಯಶ್ರೀ
ವಕ್ಷದೊಳಂ ಸಂತತಂ
ಪರಮಾನಂದ ದಿನೋತು ನಿಲ್ವವಿಪುಶ್ರೀ ತೇಜದುದ್ದಿನಿಯಂ
ವರದಿಗ್ವಿತ್ತಿಯನೆಯ್ದಿ ಸಲ್ಲೆರೆವ ಕೀರ್ತಿಶ್ರೀ ಯೆನುತ್ತಿರ್ಪುದೀ
ಧರೆಯೋಳು ಶಾಂತಲೆದೇವಿಯಂ ನೆರೆಯ ಬಣ್ಣಿಪ್ಪಾತನೇವಣ್ನಿಪಂ ॥

ಎಂದು ಶ್ರವಣಬೆಳಗೊಳದ ಶಾಸನ ವರ್ಣಿಸಿ ಶಾಂತಲೆ ಯುದ್ಧ ರಣರಂಗದಲ್ಲಿ ವಿಜಯದ ಸಂಕೇತಳೆಂದೂ ಕೀರ್ತಿಶ್ರೀ ಎಂದೂ, ತನ್ನ ರಾಜನ ಬೆನ್ನೆಲುಬಾಗಿ ನಿಂತಂತ ವಿವರಣೆಯನ್ನು ಸೂಚಿಸುತ್ತದೆ.

"ಸಮಯೋಚಿತ ಸದರ್ಥ ವಚನಚಾತುರ್ಯ್ಯ ಹೃತಭುಜಬಳವೀರ ಗಂಗ ವಿಷ್ಣುವರ್ಧನ ತ್ರ ಕೀರ್ತಿ ಸಂಪತ್ತಿನ ಸಂಪಾದಿತಗಂಗಾ ತರಂಗೆ"[14] 'ವಿವೇಕಯ್ಕ ಬೃಹಸ್ಪತಿ ಪ್ರತ್ಯುತ್ಪನ್ನ ವಾಚಸ್ಪತಿ' ಎಂದು ಸೂಚಿಸಿವೆ. ಹೀಗೆ ವಿಷ್ಣುವರ್ಧನನ ಪಿರಿಯರಸಿ ಪಟ್ಟಮಹಾದೇವಿಯಾದ ಶಾಂತಲೆ ವಿಷ್ಣುವರ್ಧನನ ಯಶಸ್ಸಿನಲ್ಲಿ ಸಹಕರಿಸುತ್ತಿದ್ದಳು. ಇವಳ ಬಿರುದುಗಳು ಆಕೆಯ ವಿಶೇಷತೆಗಳನ್ನು, ಮನೋಬಲತೆಗಳನ್ನು ವ್ಯಕ್ತಪಡಿಸುತ್ತವೆ. ಹಾಸನದ ಶಾನಸವೊಂದು.[15]

"ಸತತಂ ನೋಳ್ಪೊಡೆ ಲಕ್ಷ್ಮೀದೇವತೆ ರಣವ್ಯಾಪಾರದೋಳ್ ಖಲ್ಗದೇ
ವತೆ ಬಿಣ್ಪಿಂದಮೆ ಭೂಮಿದೇವತೆ ಜನಕ್ಕೆಲ್ಲಂದದಿಂ ಪುಣ್ಯದೇ।
ವತೆ ವಾಗ್ದೇವತೆ ವಿದ್ಯೆಯೊಳ್ ಸಕಲ ಕಾರ್ಯೋದ್ಯೋಗದೊಳ್ ಮಂತ್ರದೇ
ವತೆ ನಾಥಂಗನೇ ಶಾಂತಿದೇವಿಯನ ದಿನ್ನೇವಣ್ಣಿಪಂ ಬಣ್ಣಿಪಂ॥"

ಎಂದು ವರ್ಣಿಸಿ ಆಕೆ ವಿಷ್ಣುವರ್ಧನನ ಸಂಗ್ರಾಮಗಳಲ್ಲಿ ಭಾಗವಹಿಸುತ್ತಿದ್ದು ವಿಜಯ ದೇವತೆ ಎಂದು ಹೆಸರಾಳಾಗಿದ್ದಳು. ಎಂದು ಶಾಸನ ತಿಳಿಸಿದೆ. ಇದರ ಅರ್ಥ ಈ ರೀತಿ ಇದೆ.

ಶಾಂತಲೆ ನೋಟದಲ್ಲಿ ಲಕ್ಷ್ಮಿಯಂತೆ ಕಂಡುಬಂದರೂ, ಯುದ್ಧ ಭೂಮಿಯಲ್ಲಿ ಆಕೆ ಉತ್ತಮ ತರಬೇತಿ ಪಡೆದ ಸಮರದ ಖಡ್ಗದೇವತೆ ಎಂದೂ, ಆಡಳಿತದಲ್ಲಿ ಆಕೆ ಜನರ ಪಾಲಿಗೆ ಪುಣ್ಯದೇವತೆ,

[14] ಎ.ಕ. IV, ನಾಗಮಂಗಲ, ಶಾ.ಸಂ. 3 ನಾಗಮಂಗಲ, ಕ್ರಿ.ಶ. 1135.
[15] ಎ.ಕ. V, ಹಾಸನ, ಶಾ.ಸಂ. 116, ಕ್ರಿ.ಶ

ಮಾತಿಗೆ ತಪ್ಪದ ರಾಣಿಯಾಗಿದ್ದ ಸಕಲ ವಿದ್ಯೆಯನ್ನು ಕಲಿತು ಪಾರಂಗತಳಾದ ಪಂಡಿತೆಯಾಗಿದ್ದಳೆಂದು ಶಾಸನ ವಿವರಿಸಿದೆ. ಇದರ ಜೊತೆಗೆ ಆಕೆಯನ್ನು ಶಾಸನಗಳು ಅವಳು ತನ್ನ ಪತಿಗೆ ವಿಜಶ್ರೀ, ಓತುನಿಲ್ವ, ವಿಪುಳಶ್ರೀ, ಕೀರ್ತಿಶ್ರೀಯಾಗಿದ್ದಳೆಂದು ತನ್ನ ರಾಜನ ಬೆನ್ನೆಲುಬಾಗಿ ನಿಂತ ಬಗ್ಗೆ ಮಾಹಿತಿಯನ್ನು ತಿಳಿಸುತ್ತವೆ.

ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ಸಂಗಮ ಮನೆತನದ ಬುಕ್ಕರಾಯನ ರಾಣಿ ಚೊಮ್ಮದೇವಿ. ಕ್ರಿ.ಶ. 1397ರಲ್ಲಿ ರಾಣಿಯು ಪ್ರಜಾಕಲ್ಯಾಣಕ್ಕಾಗಿ ತಿರುಮಣಿಯೂರು ಎಂಬ ಗ್ರಾಮದಲ್ಲಿ ಒಂದು ಕೆರೆಗೆ ನೀರು ಹರಿದು ಬರಲು ಕಾಲುವೆಯನ್ನು ತೋಡಿಸಬೇಕೆಂದು ಆಶಿಸಿ ತನ್ನ ಮಂತ್ರಿಗಳಾದ ನಾಗರಾಜ ಮತ್ತು ಮಾಯಾನಯನಿಗಳಿಗೆ ಆದೇಶವನ್ನು ನೀಡುತ್ತಾಳೆ. ಯುವರಾಣಿಯ ನಿರೂಪದಂತೆ ಮಂತ್ರಿಗಳು ಪೆದ್ದ ಭೈರವೋಜ ಮತ್ತು ಪಿನ್ನ ಪೋಂಬರಿಗೆ ಕೆಲಸಗಳನ್ನು ವಹಿಸುತ್ತಾಳೆ. ಈಕೆ ತನ್ನ ಪತಿ ಬುಕ್ಕರಾಯನ ಕಾಲದಲ್ಲಿ ಆಳ್ವಿಕೆ ಮಾಡುತ್ತಿದ್ದರಿಂದಲೇ ಆಕೆ ಮಂತ್ರಿಗಳನ್ನು ಹೊಂದಿದ್ದಳೆಂದು ಹೇಳಬಹುದು.[16]

ಸಂಗಮ ಮನೆತನದ ರಾಮಚಂದ್ರ ರಾಣಿ ಬುಕ್ಕಾಂಬ ತನ್ನ ಪತಿಯೊಂದಿಗೆ ಯುದ್ಧದಲ್ಲಿ ಪಾಲ್ಗೊಂಡಿದ್ದ ಬಗ್ಗೆ ಕ್ರಿ.ಶ. 1415ರ ಫೆಬ್ರವರಿ 14ರಲ್ಲಿ ಹೊರಡಿಸಿರುವ ಶಾಸನದಲ್ಲಿ ದಾಖಲಾಗಿದೆ..[17] ತುಳುವ ಮನೆತನದ ಆಡಳಿತಾವಧಿಯಲ್ಲಿ ಸಾಮ್ರಾಜ್ಯದ ಗಡಿಯೂ ತುಂಗಭದ್ರೆಯಿಂದ ಪಶ್ಚಿಮಕ್ಕೆ ಇದ್ದ ದೇಶವನ್ನೆಲ್ಲಾ ಆವರಿಸಿತ್ತು. ವಿಸ್ತಾರ ಸಾಮ್ರಾಜ್ಯದ ರಾಜಕೀಯದಲ್ಲಿ ರಾಣಿಯರು ಸಹ ಪಾಲ್ಗೊಳ್ಳುತ್ತಿದ್ದರು. ಕೃಷ್ಣದೇವರಾಯನ ರಾಣಿಯರಾದ ಚಿನ್ನಾದೇವಿ ಮತ್ತು ತಿರುಮಲದೇವಿಯರು ಅನೇಕ ಯುದ್ಧಗಳಲ್ಲಿ ಪಾಲ್ಗೊಂಡು ರಾಜರಿಗೆ ಪ್ರೋತ್ಸಾಹಿಸುತ್ತಿದ್ದರು. ಕ್ರಿ.ಶ. 1515ರ ಕೊಂಡವೀಡು ಹಾಗೂ ಮತ್ತಿತರ ಕೋಟೆಗಳನ್ನು ವಶಪಡಿಸಿಕೊಳ್ಳುವ ಸಮಯದಲ್ಲಿ ರಾಣಿಯರು ಜೊತೆಯಲ್ಲಿದ್ದರು. ಈ ವಿಷಯದ ನೆನಪಿಗಾಗಿ ರಾಣಿಯರೊಂದಿಗೆ ರಾಜನು ತಿರುಪತಿಗೆ ಭೇಟಿ ನೀಡಿ ತಿರುವೇಂಗಳನಾಥ ಸ್ವಾಮಿಗೆ ದಾನದತ್ತಿಗಳನ್ನು ನೀಡಿದ್ದರು.[18]

---

[16] ಸಿ.ಎಸ್. ವಾಸುದೇವನ್, **ಹಂಪಿ ಪರಿಸರದ ಕೆರೆಗಳು,** ಪು–81, ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2001.

[17] ಸುಮನ.ಆರ್. **ವಿಜಯನಗರದ ತುಳುವ ಅರಸರ ರಾಣಿಯರು, ಚಾರಿತ್ರಿಕ ಅಧ್ಯಯನ,** ಪುಟ–20, (ಎಂ.ಫಿಲ್ ಅಪ್ರಕಟಿತ ನಿಬಂಧ), ಹಂಪಿ, ವಿಶ್ವವಿದ್ಯಾಲಯ. 2007.

[18] ಸೋಮಶೇಖರ್ ಎಸ್. ವೈ, **ವಿಜಯನಗರ ಕಾಲದ ಸೈನ್ಯವ್ಯವಸ್ಥೆ ಯುದ್ಧ ನೀತಿ,** (ಪಿಎಚ್.ಡಿ ನಿಬಂಧ ಕನ್ನಡ ವಿಶ್ವವಿದ್ಯಾಲಯ ಹಂಪಿ, ಪು–38. 1999.

ರಾಯಚೂರು ದಂಡಯಾತ್ರೆ ವಿಜಯನಗರದ ಯುದ್ಧಗಳಲ್ಲಿಯೇ ಪ್ರತಿಷ್ಠಿತ ವಿಷಯವಾಗಿತ್ತು. ಬುಕ್ಕರಾಯನ ಕಾಲದಲ್ಲೂ ಸಹ ಗೆಲ್ಲಲು ಪ್ರಯತ್ನಿಸಿದ್ದರು. ಆದರೆ ತುಳುವ ವಂಶದ ಶ್ರೀಕೃಷ್ಣದೇವರಾಯನ ಕಾಲದಲ್ಲಿ ಇದನ್ನು ಗೆಲ್ಲಲಾಯಿತು. ಇದು ದೀರ್ಘಕಾಲದ ಹೋರಾಟವಾಗಿತ್ತು. ಈ ಸಂದರ್ಭದಲ್ಲಿ ರಾಣಿಯರು ಸಹ ಯುದ್ದಲ್ಲಿ ಪಾಲ್ಗೊಂಡಿದ್ದರು ಇವರನ್ನು ಮುಚ್ಚಿದ ಪಲ್ಲಕ್ಕಿಯಲ್ಲಿ ಕರೆದೊಯ್ಯಲಾಯಿತು. ಎಂದು ನ್ಯೂನಿಜ್ ತಿಳಿಸಿದ್ದಾರೆ.[19]

ಅಚ್ಯುತರಾಯನ ರಾಜ ಮಹಿಷಿ ಹಾಗೂ ಪ್ರೀತಿ ಪಾತ್ರಳಾದ ರಾಣಿ ಓದುವ ತಿರುಮಲಾಂಭ ಕವಯಿತ್ರಿಯಾಗಿದ್ದಳು. ಅಂತೆಯೇ ಒಬ್ಬ ಹೋರಾಟಗಾರ್ತಿಯಾಗಿದ್ದಳು. ಅಚ್ಯುತದೇವರಾಯನ ಮಧುರಾ ದಂಡಯಾತ್ರೆ ಸಂದರ್ಭದಲ್ಲಿ ಈಕೆಯು ಸಹ ಯುದ್ಧದಲ್ಲಿ ಪಾಲ್ಗೊಂಡು ರಾಜನಿಗೆ ಸ್ಫೂರ್ತಿಯನ್ನು ನಿಡುತ್ತಿದ್ದಳೆಂದು ತಿಳಿಯುತ್ತದೆ. ಅಲ್ಲದೆ ರಾಣಿಯು ರಾಜಕೀಯ ವಿಚಾರದಲ್ಲಿಯೂ ಸಹ ಸ್ವಾತಂತ್ರ್ಯತೆಯನ್ನು ಪಡೆದಿದ್ದಳೆಂದು ಆಕೆಯ ಕೃತಿಯಿಂದ ತಿಳಿದು ಬರುತ್ತದೆ.[20]

ಇಂತಹ ರಾಣಿಯರನ್ನು ಬಿಟ್ಟರೆ ಕೆಲವು ಮಹಾಮಂಡಳೇಶ್ವರ, ಸಾಮಂತ, ದಂಡನಾಯಕರುಗಳ ರಾಣಿಯರು ತಮ್ಮ ಪತಿಯೊಂದಿಗೆ ರಾಜಕೀಯ ರಂಗದಲ್ಲಿ ಪಾಲ್ಗೊಂಡಿದ್ದಾರೆ. ಅಂತಹವರಲ್ಲಿ ಚಾಲುಕ್ಯ ವಿಕ್ರಮಾದಿತ್ಯನ ಮಗಳು ಮೈಳಲಾದೇವಿ. ಪತಿ ಜಯಕೇಸಿಯ ರಾಜ್ಯ ನಿರ್ವಹಣೆಯಲ್ಲಿ ಬೆಂಗಾವಲಾಗಿ ನಿಂತುಕೊಂಡು ಆಡಳಿತದಲ್ಲಿ ಪಾಲುದಾರಿಕೆಯನ್ನು ಪಡೆದಿದ್ದಳೆಂದು ಎಲ್ಲಾ ಶಾಸನಗಳು ವಿವರಿಸುತ್ತವೆ. ಆ ಮೂಲಕ ಎಲ್ಲರ ಗಮನವನ್ನು ಸೆಳೆದಿದ್ದಾಳೆ.

"ವಿನುತಃ ವಿಕ್ರಮಚಕ್ರವರ್ತಿ ವಿದತಂಸ್ತ್ರೀರತ್ನಮಂ ಬೋಗಬಾ
ಗಿ(ನಿ) (..........) –ವಿಯಂ ವಿಭವದಿಂ ಕಾದಂಬ ಚಕ್ರೇಶನೊಳ್
ಘನ ವಿಕ್ರಾಂತ ನೊಳೊಲ್ಪುಕೊಡಿ ನೆಗಳ್ದ ಕಾದಂಬ
ರಾಜ್ಯಾಭಿವರ್ಧನ ಸತ್ಕೀರ್ತಿ ವಿರಾಜಿಸಲ್ಕೆ ಜಸಮಂ
ಸಂತೋಷ(............)"

---

[19] ಅದೇ, ಪುಟ–39.

[20] ಎಂ.ಎಲ್. ಶಿವಶಂಕರ್, ಚನ್ನಬಸಪ್ಪ.ಎಸ್. ಪಾಟೀಲ, **ವಿಜಯನಗರದ ಅಧ್ಯಯನ** ಸಂ. 3 ಪು.106, ವಿಜಯನಗರದ ಶಾಸನಗಳು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು, 1996.

ಎಂದು ಆಕೆಯ ವ್ಯಕ್ತಿತ್ವವನ್ನು ಶಾಸನ[21] ಪರಿಚಯಿಸಿಕೊಟ್ಟಿದೆ.

ಇವಳ ಅಧಿಕಾರ ವ್ಯಾಪ್ತಿಗೆ ಕೊಂಕಣ ವೊಂಬೈನೂರು, ಉಣಕಲ್ಲು ಸಬ್ಬಿ, ಎರಡು ಮೂವತ್ತು ಕೊಂಡಕುಳಿ, ಹಾನುಂಗಲ್ಲು ಐನೂರು, ಎತ್ತುಗ್ರಾಮೆ, ಕಾದರವಳ್ಳಿ, ಎರಡು ಮೂವತ್ತು ಪೊಳಲಗುಂದ, ಮೂವತ್ತು ವೇಣುಗ್ರಾಮ, ಎಳ್ಪತ್ತು ಹಯ್ವಿಯ್ಯನೂರು, ಕವಡಿದ್ವೀಪ ಹಾಗೂ ಸವಲಕ್ಕಗಳು ಸೇರಿದ್ದವು.

ಒಬ್ಬ ಸಾಮಂತನರಾಣಿಯಾಗಿ ಈಕೆಯ ಅಧಿಕಾರ ವ್ಯಾಪ್ತಿಯನ್ನು ಮತ್ತು ಶಾಸನಗಳ ಉಲ್ಲೇಖಗಳನ್ನು ಗಮನಿಸಿದರೆ ಈಕೆ ಮಹಿಳಾ ಸ್ವತಂತ್ರ್ಯರಾಜಕಾರಣಿ ಮತ್ತು ಪುರುಷ ಸಾಮ್ರಾಟರುಗಳಿಗಿಂತ ಕಡಿಮೆ ಇರದ ರಾಜ್ಯಾಡಳಿತದ ರಾಣಿ ಎಂದು ಸಂಬೋಧಿಸಿದರೆ ತಪ್ಪಾಗಲಾರದು.

ಮಹದೇವ ಮಂತ್ರಿಯ ಪತ್ನಿ ಲೋಕಮಹಾದೇವಿಯನ್ನು ಶಾಸನವೊಂದು ಚತುರತೆಯೊಳು ಸಮಂತು ಜಿನಶಾಸನ ದೇವತೆ ಎಂದು ಹೊಗಳಿದೆ. ಬೊಪ್ಪದೇವಚಮೂಪನ ಮಡದಿ ಬೂಪ್ವಿಯಕ್ಕನನ್ನು ಸಮಸ್ತ ಚತುರೋಕ್ತಿ ಕಳೋದ್ಭಾಸಿತ ಪದ್ಮಾವತಿ ಎಂದು ಹಾಗೂ ಪತಿಯ ಕಾರ್ಯಗಳಲ್ಲಿ ಸಹಕರಿಸುತಿದ್ದಳೆಂದು ತಿಳಿಸಿದೆ. ಗಂಗಸೇನಾಪತಿಯ ಮಡದಿ ಲಕ್ಷ್ಮೀಮತಿಯನ್ನು ಶ್ರವಣಬೆಳಗೊಳದ ಶಾಸನ ಕಾರ್ಯನೀತಿ ವಧೂರಣೆ ಜಯವಧೂ ಎಂದು ಕರೆದಿರುವುದು ಗಮನಾರ್ಹ. ಪ್ರಮುಖರು. ವಿಜಯನಗರ ಕಾಲದಲ್ಲಿ ರಾಜನ ಜೊತೆ ಜೊತೆಯಲ್ಲಿ ರಾಣಿಯರು ಸಹ ರಾಜಕೀಯ ಕಾರ್ಯಗಳಲ್ಲಿ ಪಾಲ್ಗೊಳ್ಳುತ್ತಿದ್ದರು. ಅಂತೆಯೇ ಈ ಅರಸಿಯರ ಮೇಲೆ ಕೆಲವಾರು ಶಾಸನಗಳು ಬೆಳಕುಚೆಲ್ಲಿವೆ. ರಾಣಿಯರು, ಹೆಗ್ಗಡತಿಯರು ಇತರೆ ಮಹಿಳೆಯರು ವಿಜಯನಗರ ಸಾಮ್ರಾಜ್ಯವನ್ನು ಧಾರ್ಮಿಕ, ಸಾಮಾಜಿಕ ಕಾರ್ಯಗಳಲ್ಲಿ ಸ್ವತಂತ್ರವಾಗಿ ಕಾರ್ಯ ನಿರ್ವಹಿಸುತ್ತಿದ್ದರೆಂಬುದು ಸ್ಪಷ್ಟವಾಗುತ್ತದೆ. ಆದರೆ ಅವರು ರಾಜ್ಯಾಡಳಿತದಲ್ಲಿ ಭಾಗವಹಿಸಿದ ಮತ್ತು ಇತರ ಸಾಮಾಜಿಕ ಕಾರ್ಯಗಳನ್ನು ನಿರ್ವಹಿಸಿದ ವಿಷಯಗಳಾವುವು ಹೆಚ್ಚಾಗಿ ಈ ಶಾಸನಗಳಲ್ಲಿ ಪ್ರಸ್ತಾಪವಾಗಿಲ್ಲ.

---

[21] **ಧಾರವಾಡ ತಾಲ್ಲೂಕು ಶಾಸನ ಸೂಚಿ,** ಶಾ.ಸಂ. 39, ನರೇಂದ್ರ, ಕ್ರಿ.ಶ. 1125,

ಹೀಗೆ ಕಾರ್ಯೇಷು ಮಂತ್ರಿಗಳಾಗಿ ತಮ್ಮ ಪತಿಮಹಾಶಯರುಗಳೊಂದಿಗೆ ರಾಜ್ಯಾಡಳಿತದಲ್ಲಿ ಭಾಗಿಗಳಾಗಿ ತಮ್ಮ ಉಜ್ವಲ ರಾಜಕಾರಣವನ್ನು ಪುರುಷ ಪ್ರಧಾನ ಸಮಾಜದಲ್ಲಿ ಯಶಸ್ವಿಯಾಗಿ ನಡೆಸಿರುವುದು ಪ್ರಶಂಸನೀಯ.

**ಭತ್ತ ಗ್ರಾಮದಲ್ಲಿ ರಾಣಿಯರ ಆಡಳಿತ**

ಭತ್ತ ಗ್ರಾಮದ ವಿವರಣೆಯ ಬಗ್ಗೆ ಪಿ.ಬಿ. ದೇಸಾಯಿಯವರು "Bhatta is derived from the sanscrit word. Bhakis wich comes from the root bhoja meaning to share enjoy. Hence we can interpret the expression bhattagrama as a village intended for one's own enjoyment as private mantainance" ಎಂದು ತಿಳಿಸಿದ್ದಾರೆ.[22]

ಭತ್ತ ಗ್ರಾಮವೆಂದರೆ, ವ್ಯಕ್ತಿಯ ಉಪಬೋಗಕ್ಕೋಸ್ಕರ ನೀಡಿದ ಗ್ರಾಮಗಳೆಂದು ತಿಳಿದು ಬರುತ್ತದೆ. ಭತ್ತ ಗ್ರಾಮದ ವಿವರಣೆ ಕದಂಬರ ಕಾಲದಲ್ಲಾಗಲೀ, ಗಂಗರ ಕಾಲದಲ್ಲಾಗಲೀ ಇಲ್ಲ. ಕಲ್ಯಾಣಿ ಚಾಲುಕ್ಯರ ಕಾಲದಲ್ಲಿ ಮಾತ್ರ ಭತ್ತಗ್ರಾಮಗಳು ಅಸ್ತಿತ್ವಕ್ಕೆ ಬಂದಿರುವುದನ್ನು ಕಾಣಬಹುದು. ಈ ಭತ್ತ ಗ್ರಾಮಗಳನ್ನು ರಾಜರುಗಳಿಗಿಂತ ರಾಣಿವರ್ಗದವರುಗಳೇ ಆಳ್ವಿಕೆ ನಡೆಸಿದ್ದಾರೆ. ತ್ರೈಲೋಕ್ಯ ಮಲ್ಲನ ರಾಣಿ ಮೈಳಲಾದೇವಿ ತರ್ದವಾಡಿ ಸಾಸಿರದೊಳಗಣ ಭತ್ತಗ್ರಾಮ ಹೊನ್ನವಾಡಿಯಲ್ಲಿ ಸೋಮೇಶ್ವರ ದೇಗುಲಕ್ಕೆ ದಾನ ನೀಡಿದಳು. ಇಲ್ಲಿ ಮೈಳಲಾದೇವಿ ಹೊನ್ನವಾಡ ಭತ್ತ ಗ್ರಾಮವನ್ನು ಆಳುತ್ತಿದ್ದರಿಂದಲೇ[23] ದೇಗುಲಕ್ಕೆ ದಾನ ನೀಡಲು ಸಾಧ್ಯವಾಯಿತು. ತ್ರೈಲೋಕ್ಯಮಲ್ಲನ ಮತ್ತೊಬ್ಬ ರಾಣಿ ಕೇತಲದೇವಿ ತರ್ದವಾಡಿ ಸಾಸಿರದ ಅಗ್ರಹಾರ ಪೊನ್ನವಾಡವನ್ನು ಆಳುತ್ತಿದ್ದಳೆಂದು ಹೊನ್ನವಾಡದ ಎರಡು ಶಾಸನಗಳು ತಿಳಿಸುತ್ತವೆ. ಜೊತೆಗೆ ಹಿರಿಯ ಕೇತಲ ದೇವಿ ಭಲ್ಲಕುಂದೆ ಮುನ್ನೂರರ[24] ಬಳಿಯ ತೆಕ್ಕಕಲ್ಲು ಮೂರೂರಮಂ ಆಳುತಿದ್ದ ವಿಷಯವನ್ನು ಸಿರಗುಪ್ಪೆ ಶಾಸನ ತಿಳಿಸುತ್ತದೆ.[25] ಕಲ್ಯಾಣ ಚಾಲುಕ್ಯರ ಕಾಲದಲ್ಲೇ ಭತ್ತಗ್ರಾಮವನ್ನು ಆಳುತಿದ್ದ ಇವನ ಮತ್ತೊಬ್ಬ ರಾಣಿ ಚಂದಲಾದೇವಿಯ ಬಗ್ಗೆ ಕ್ರಿ.ಶ. 1098ರ ಶಾಸನವೊಂದು "ಶ್ರೀ ಮತಿರಿಯರಸಿ ಚಂದಲಾದೇವಿಯರು

---

[22] ಜ್ಯೈ. ಸೌ ಇಂ. ಪು–26, ಪಿ.ಬಿ. ದೇಸಾಯಿ

[23] ಬಿ.ಕೆ.ಐ, 1-i-83, ಬಾಗೇವಾಡಿ, ಕ್ರಿ.ಶ. 1054

[24] ಐ.ಎ. XiX, ಪು–296, ಹೊನ್ನವಾಡ, ಕ್ರಿ.ಶ. 1062.

[25] ಎಸ್.ಐ.ಐ. Ix-i- ಶಾ.ಸಂ–159, ಸಿರಗುಪ್ಪ ಕ್ರಿ.ಶ. 1093.

ಆಲಂದೆಸಿರ ಪ್ರಮುಖ ವನಕೆ ಭತ್ತ ಗ್ರಾಮಂಗಲಮ್? ದುಷ್ಟನಿಗ್ರಹ ಇಷ್ಟ ಪ್ರತಿಪರಸರಿಂದ ಆ ಸುಗೆಯ್ಯುತ್ತಮಿರೆ" ಎಂದು ಉಲ್ಲೇಖಿಸಿದೆ.[26]

ಈ ಶಾಸನ ಚಂದಲಾದೇವಿ ಆಲಂದೆ 1000, ಇತರೆ ಭತ್ತಗ್ರಾಮದ ಪ್ರದೇಶಗಳನ್ನು ಆಳುತಿದ್ದ ಬಗ್ಗೆ ವಿವರಗಳನ್ನು ತಿಳಿಸಿದೆ. ಇದರ ಜೊತೆಗೆ ನೃತ್ಯ ವಿದ್ಯಾಧರಿ, ಅಭಿನವ ಸರಸ್ವತಿ, ಚಂದ್ರಿಕಾದೇವಿ, ಎಂದೆಲ್ಲಾ ಹೆಸರುಗಳಿಸಿರುವ ಈಕೆ ಸಾಮಂತ ಸೀಮಂತಿನಿ ಪರಿವ್ರಿತೆ ಎಂದೂ ಸಹ ವರ್ಣನೆಗೊಂಡಿದ್ದಳು. ಈ ವರ್ಣನೆಯಲ್ಲಿ ಸಾಮಂತ ಸೀಮಂತಿನಿ ಎಂಬ ಬಿರುದನ್ನು ಗಮನಿಸಿದರೆ ಈಕೆ ಸಾಮಂತ ರಾಜರುಗಳಿಂದ ಇಲ್ಲವೇ ತನ್ನ ಅಧೀನದಲ್ಲಿ ಸಾಕಷ್ಟು ಜನ ಆಡಳಿತವರ್ಗವನ್ನು ಹೊಂದಿದ್ದಳು ಎಂದು ಹೇಳಬಹುದಾಗಿದೆ. ಅಂತೆಯೇ ಭತ್ತಗ್ರಾಮವನ್ನು ಆಳುತಿದ್ದವಳು ರಾಣಿ ಅಬ್ಬಲಾದೇವಿ ಈಕೆ 'ಕರಡಿ ಕಲ್ನಾ ನೂರರ ಬಳಿಯ ಭತ್ತ ಗ್ರಾಮದ ಲಿಂಗ' ಪ್ರದೇಶವನ್ನು ಆಳುತ್ತಿದ್ದಳು.[27] ಹೊಯ್ಸಳರ ಕಾಲದಲ್ಲಿ ವಿಜಯನಗರ ಅರಸರ ಕಾಲದಲ್ಲಿ ಈ ರೀತಿಯ ಭತ್ತ ಗ್ರಾಮದ ಆಳ್ವಿಕೆಗಳು ಕಾಣಸಿಗುವುದಿಲ್ಲ.

**ಮಹಾಮಂಡಳೇಶ್ವರೀಯರುಗಳಾಗಿ ರಾಣಿಯರು**

ಇಂದಿನಂತೆ ಆಡಳಿತದ ಅನುಕೂಲಕ್ಕೋಸ್ಕರ ಪ್ರಾಚೀನ ಕಾಲದಲ್ಲೂ ಸಾಮ್ರಾಜ್ಯವನ್ನು ರಾಜ್ಯವನ್ನು ಹಲವು ಭಾಗಗಳನ್ನಾಗಿ ವಿಂಗಡಿಸಿದ್ದರು. ಹೀಗೆ ವಿಂಗಡಿಸಿದ್ದಂತಹ ಪ್ರದೇಶಗಳಲ್ಲಿ ಮಹಾಮಂಡಲಗಳು ಒಂದು ಈ ಮಹಾಮಂಡಲಗಳಿಗೆ ರಾಜ್ಯಭಾರಕ್ಕೋಸ್ಕರ ರಾಜರು ರಾಣಿಯರನ್ನು ನೇಮಕ ಮಾಡುತ್ತಿದ್ದರು. ಈ ವಿಷಯಗಳು ಶಾಸನೋಕ್ತವಾಗಿವೆ. ಹೀಗೆ ಮಹಾಮಂಡಲಗಳಲ್ಲಿ ನೇಮಕಗೊಂಡು ಆಳ್ವಿಕೆ ನಡೆಸುತ್ತಿದ್ದವರನ್ನು "ಮಹಾಮಂಡಳೇಶ್ವರಿ"ಯರುಗಳೆಂದು ಕರೆಯಲಾಗುತ್ತಿತ್ತು. ಕೆಲವೊಮ್ಮೆ ಮಹಾಮಂಡಲಗಳಿಗೆ ಪುರುಷ 'ಮಹಾಮಂಡಲೇಶ್ವರರು' ನೇಮಕಗೊಳ್ಳುತ್ತಿದ್ದರು. ಈ ಮಹಾಮಂಡಳೇಶ್ವರರ ರಾಣಿಯರು ಮಹಾಮಂಡಳೇಶ್ವರೀಯರುಗಳಾಗಿ ಕಾರ್ಯಭಾರ ಮಾಡುತ್ತಿದ್ದ ಪ್ರಸಂಗಗಳೂ ಇದ್ದವು. ಈ ಆಡಳಿತ ರಾಜ ಸಚಿವ ಸಂಪುಟಕ್ಕೆ ಸಮವಾಗಿರುತ್ತಿತ್ತು.

---

[26] ಜೈ. ಸೌ. ಇಂ. ಶಾ.ಸಂಖ್ಯೆ–252, ಆಲಂದೆ, ಕ್ರಿ.ಶ. 1099.

[27] **ಕಾರ್ಪಸ್ ಇನ್ಸ್ಕ್ರಪ್ಸನ್ಸ್ ಇನ್ ದಿ, ಕನ್ನಡ ಡಿಸ್ಟ್ರಿಕ್ಟ್ ಆಫ್ ದಿ ಹೈದ್ರಾಬಾದ್ ಸ್ಟೇಟ್ಸ್** ಶಾ.ಸಂ–9. ಲಿಂಗಸುಗೂರು. ಕ್ರಿ.ಶ. 1027.

ಜಗದೇಕಮಲ್ಲ ಜಯಸಿಂಹ ಮಹಾಮಂಡಳೇಶ್ವರ ಕುಂದರಾಜನ ರಾಣಿ ಜೋಗಲ ದೇವಿ ಅಜ್ಜಡಿಯನ್ನು,[28] ಮತ್ತೊಬ್ಬ ರಾಣಿ ಪಂಪಾದೇವಿ ಜಡಗೂರನ್ನು[29] ಆಳುತ್ತಿದ್ದಂತೆ ಉಲ್ಲೇಖಗಳು ಶಾಸನಗಳಲ್ಲಿ ಮೂಡಿಬಂದಿವೆ. ಅಂತೆಯೇ ಚೋಳಮಹಾರಾಜ ಮಹಾಮಂಡಳೇಶ್ವರ ಜಗದೇಕಮಲ್ಲ ಮಲ್ಲದೇವನ ರಾಣಿ ಬಲ್ಲದೇವಿ ಸಿರಿವೊಳಲಕೆರೆಯನ್ನಾಳುತ್ತಿದ್ದಳು.[30] ಸಿಂದವಂಶದ ಚಾವುಂಡದೇವನ ವಕ್ಷಸ್ಥಳ ನಿವಾಸಿನಿ ಲಕ್ಷ್ಮೀದೇವಿ, ಸೂಂಡಿ ಹೊಸವೂರಾಕರ ಕೆರೆಮಂಡಲ ದೊಳೆ ನೆಗಳ್ದ.... ಪ್ರದೇಶವನ್ನು ಆಳುತ್ತಿದ್ದಳು.[31]

ಮಹಾ ಮಂಡಳೇಶ್ವರ ಹೊಯ್ಸಳ ನಾರಸಿಂಹನ ರಾಣಿ ಪಟ್ಟಮಹಾದೇವಿ ಮೈಳಲಾದೇವಿ ಮೊದರು ನಾಡನ್ನು[32] ಆಳುತ್ತಿದ್ದ ವಿಷಯ ಶಾಸನೋಕ್ತಗೊಂಡಿದೆ ಲಕ್ಷ್ಮಿದೇವರಸ ವೇಣುಗ್ರಾವನ್ನಾಳುತ್ತಿದ್ದಾಗ ಅವನ ಮಡದಿ ಲಲಿತೆಯ ದೇವಿ ಮಟ್ಟವಾಡವನ್ನಾಳುತ್ತಿದ್ದಳು.[33] ಮಾಂಡಳಿಕ ಬಲ್ಲದೇವ ವರ್ಧಾಂಗಲಕ್ಷ್ಮಿ ಪಟ್ಟಮಹಾದೇವರಸಿಯರು "ತನ್ನಾಳುವ ಭೂಮಿ ತೇಕುರವಟಿಯ ಕಲಿದೆವರಿಗೆ ದಾನಕೊಟ್ಟ ವಿಷಯ[34] ಶಾಸನದಲ್ಲಿದೆ".

ಸುಳುಕಿ ರಾಜಾದಿತ್ಯ ಬನವಾಸಿಯನ್ನಾಳುವಾಗ ಅವನ ಮಡದಿ ಶ್ರೇಯಾದೇವಿ ಸಮಕರಿಯನ್ನು ಆಳುತ್ತಿದ್ದಳು.[35] ಮಹಾಮಂಡಳೇಶ್ವರನ ತ್ರಿಭುವನ ಮಲ್ಲ ಭುಜಬಳಗಂಗ ಪೆರ್ಮಾಡಿ ದವಿವನ ಪಟ್ಟಮಹಾದೇವಿ. ಬಾಚಲಾದೇವಿ ಬನ್ನಿಕೆರೆಯಲ್ಲಿ ರಾಜ್ಯಭಾರ ಕೈಗೊಂಡ ಉಲ್ಲೇಖವೊಂದು ಆಲಹಳ್ಳಿ ಶಾಸನದಲ್ಲಿದೆ.[36] ಇವಳನ್ನು ಶಾಸನ 'ಪೆರ್ಗಡೆ ಬಾಚಲದೇವಿ' ಎಂದು ಕರೆದಿದೆ. ಮಹಾಮಂಡಳೇಶ್ವರಿ ಎಂದು ನಾಮಾಂಕಿತಳಾದ ಪಾವಕ ವಂಶದ ಎರಡನೆಯ ಕಲಿಚೋರನ ಹೆಂಡತಿ ರೆಬ್ಬಲದೇವಿ ಮಂಡಳೇಶ್ವರನ ರಾಣಿಯರಾಗಿ ಆಡಳಿತ ನಡೆಸಿದ್ದಾಳೆ.

---

[28] ಎಸ್.ಐ.ಐ. x.viii. ಶಾ.ಸಂ 44, ಕಳ್ಳಿಹಳ (ತಾ) ಹಾವೇರಿ, ಕ್ರಿ.ಶ. 1019.

[29] ಎಸ್.ಐ.ಐ. x.viii. ಶಾ.ಸಂ 52, ಬಿದರಗಡ್ಡಿ (ತಾ) ಹಾವೇರಿ, ಕ್ರಿ.ಶ. 1019.

[30] ಎ.ಕ. xi, ಚಳ್ಳಕೆರೆ, 1087, ಓಬಳಾಪುರ, ಕ್ರಿ.ಶ. 1087.

[31] ಎಸ್.ಐ.ಐ. xv, ಶಾ.ಸಂ. 236, ಹೊಸೂರು (ತಾ) ಬಾದಾಮಿ, ಕ್ರಿ.ಶ. 1155.

[32] ಎ.ಕ. IV, ಕೃಷ್ಣರಾಜಪೇಟೆ, ಶಾ.ಸಂ.32, ಕನ್ನಂಬಾಡಿ ಕ್ರಿ.ಶ.1150.

[33] ಡಾ.. ಚೆನ್ನಕ್ಕ ಎಲಿಗಾರ, **ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ,** ಪುಟ–195, ಪ್ರಸಾರಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, 1999.

[34] ಎ.ಕ. vii, ಚಿಕ್ಕನಾಯಕನಹಳ್ಳಿ, ಶಾ.ಸಂ. 14, ದೊಡ್ಡ ತೇಕಲವಟ್ಟ, ಕ್ರಿ.ಶ. 1187.

[35] ದಾ.ಜಿ.ಶಾ, ಸೂ, ಶಾ.ಸಂ–51, ಸಾವಿನಕೆರೆ (ತಾ) ಹಾನಗಲ್ಲು, (ಕ್ರಿ.ಶ.?)

[36] ಎ.ಕ. vii, ಶಿವಮೊಗ್ಗ, ಶಾ.ಸಂ.97, ಆಲಹಳ್ಳಿ, ಕ್ರಿ.ಶ. 1113.

ಗಂಗಮಹಾದೇವಿ ಮಂಡಳಿಯ ಮಹಾಮಂಡಳೇಶ್ವರ ಭುಜಭಲಗಂಗ ಪೆರಮಡಿ ಬರ್ಮದೇವನ ಪಟ್ಟದರಸಿ ಪಾಂಡ್ಯ ಕುಲದವಳು ಇವಳನ್ನು ಶಾಸನೋಕ್ತ ಕವಿಗಳು ಇವಳನ್ನು ಜಿನೇಂದ್ರ ಪದಾಂಬುದ ಭೃಂಗೀ ಭೂಷಣ ಭೂಷತಾಂಗೀ, ನಿತಂಬಿನೀ ನಾಂತಿಳಕಾಯಮಾನ ವಿರಾಜಿತ' ಎಂದು ವರ್ಣಿಸಿದ್ದಾರೆ.[37]

ಮಂಡಳಿಯ ಮಂಡಲೇಶ್ವರ ಇಮ್ಮಡಿ ನನ್ನಿಯಗಂಗ ಪೆರ್ಮಾಡಿದೇವನ ಪಟ್ಟದರಸಿ, ಕಾಂಚಲದೇವಿ, ಇಮ್ಮಡಿ ಗಂಗ ಮಹಾದೇವಿಯೆಂದು ಹೆಸರಿದ್ದ ಚಾಂದಲಾದೇವಿ ಭುಜಭಲಗಂಗ ಪೆರ್ಮ್ಮಡಿದೇವನ ರಾಣಿ ಬಾಚಲದೇವಿಯರು ಮಹಾಮಂಡಲೇಶ್ವರರ ರಾಣಿಯರಾಗಿ ರಾಜಕಾರ್ಯದಲ್ಲಿ ಸಲಹೆ ನೀಡುತ್ತಿರಬೇಕೆಂದು[38], ಅಭಿಪ್ರಾಯ ವ್ಯಕ್ತಪಡಿಸಬಹುದಾಗಿದೆ. ವಿಜಯನಗರ ಕಾಲದಲ್ಲಿ ರಾಣಿಯರು ಸ್ವತಂತ್ರವಾಗಿ ಮತ್ತು ರಾಜನೊಂದಿಗೆ ಆಡಳಿತದಲ್ಲಿ ಪಾಲ್ಗೊಂಡಿದ್ದರು. ಮಂಡಲೇಶ್ವರಿಯರು ಎಂದು ಶಾಸನಗಳು ಬಿಂಬಿಸಿಲ್ಲ.

**ಆಡಳಿತದಲ್ಲಿ ದಂಡನಾಯಕರ ರಾಣಿಯರ ಪಾತ್ರ**

ರಾಣಿಯರಂತೆ ಮಹಾಮಂಡಳೇಶ್ವರಂತೆ ದಂಡನಾಯಕರುಗಳ ಮಡದಿಯರು ಸಹ ರಾಜಕೀಯದಲ್ಲಿ ಆಳ್ವಿಕೆ ನಡೆಸಿದ್ದಾರೆ. ಚಾಲುಕ್ಯರ ಜಗದೇಕಮಲ್ಲನ ಮಹಾದಂಡನಾಯಕನಾದ ದಾವಣರಸನ ಪತ್ನಿ ರೇವಕಬ್ಬರಸಿ ಪೊಸವೂರಿನ ಆಡಳಿತವನ್ನು ನೋಡಿಕೊಳ್ಳುತ್ತಿದ್ದರು.[39] ಈಕೆಯನ್ನ ಹಿರೇಕೆರೂರು ಶಾಸನವೊಂದು[40] 'ಮಹಾಪಾಸಾಯಿತೆ' ಎಂದು ಕರೆದಿದೆ. 2ನೆಯ ಯಾದವ ಸಿಂಘಣನ ಕಾಲದಲ್ಲಿ ಬಾಗುಬಾಯಿ ಎಂಬುವಳು ವಿಜಾಪುರದ ಬಹುಭಾಗದ ಆಳ್ವಿಕೆಯನ್ನು ಕೈಗೊಂಡಿದ್ದಳೆಂದು ಶಾಸನ ಈ ರೀತಿಯಾಗಿ ವಿವರಿಸಿದೆ. ಶಾಸನದಲ್ಲಿ "ಶ್ರೀಮತು ಸರ್ವಾಧಿಕಾರಿ ಭಾ ಗುಬಾಯಿಗಳು"[41] ಎಂಬ ವಾಕ್ಯದೊಂದಿಗೆ ಹೊಗಳಿದೆ ಶಿರೂರು ತಾಲ್ಲೂಕಿನ ಶಾಸನ ಬಾಗಲಕೋಟಿ ಶಾಸನವೊಂದು[42] ಮಹಾ ಪ್ರಭುವಿಣೆ ಎಂದು ಲಕ್ಶ್ಮಾದೇವಿಯನ್ನು ಶಾಸನಗಳು ಹೊಗಳಿವೆ.

---

[37] ಐ.ಎನ್.ಡಿ. ನಂ 19, ಆಡಂಪೂರ (ತಾ) ಬಿಲೋಳಿ (ಕ್ರಿ.ಶ.1116)

[38] ಬಿ.ಎಸ್.ರಾಮಭಟ್ಟ, **ಶಿವಮೊಗ್ಗನಗರದ ಇತಿಹಾಸದರ್ಶನ,** ಪುಟ–12–13, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು–2006.

[39] ಬಿ.ಕೆ.ಐ, –1, i-65, ಹೊಸೂರು (ತಾ) ಗದಗ, ಕ್ರಿ.ಶ. 1029.

[40] ಎ.ಇ xxxvi- ಪು–221, 1957–58, ಚಿಕ್ಕೆರೂರ (ತಾ), ಹಿರೇಕೆರೂರ ಕ್ರಿ.ಶ. 1048.

[41] ಎಸ್.ಐ.ಐ, xviii, 377, ಬಿಜಾಪುರ (ತಾ) ಬಿಜಾಪುರ ಕ್ರಿ.ಶ 1241.

[42] ಎಸ್.ಐ.ಐ – xv, ಶಾ.ಸಂ. 39, ಶಿರೂರ (ತಾ) ಬಾಗಲಕೋಟೆ, ಕ್ರಿ.ಶ. 1148.

**ನಾಳ್ಗಾವುಂಡಿಯರ ಆಡಳಿತ**

ಇದು ರಾಜವರ್ಗದ ಮೂರನೆಯ ಹಂತ. ಇದು ಹಲವಾರು ಗ್ರಾಮಗಳ ಅಧಿಕಾರವನ್ನು ವಹಿಸುವುದಾಗಿದೆ. ಪ್ರಾಚೀನ ಕರ್ನಾಟಕದ ರಾಜಕೀಯ ರಂಗವನ್ನು ಅವಲೋಕಿಸಿದಾಗ ಈ ವರ್ಗದ ಉಲ್ಲೇಖಗಳು ಬೆರಳೆಣಿಕೆಯಷ್ಟಾದರೂ ಪ್ರಶಂಸನೀಯ. ಇಂತಹ ನಾಳ್ಗಾವುಂಡಿಯರಲ್ಲಿ, ಜಕ್ಕಿಯಬ್ಬೆ ಸುಪ್ರಸಿದ್ಧಳು.

ರಾಷ್ಟ್ರಕೂಟ ಕೃಷ್ಣನ ಕೈಕೆಳಗೆ ಮಹಾಸಾಮಂತನಾಗಿ ಕಲಿದೇವನು ಕಲಿವಿಟ್ಟರಸ ಬನವಾಸಿ 12 ಸಾವಿರವನ್ನು, ಕಲಿವಿಟ್ಟರಸನ ಕೈಕೆಳಗೆ ನಾಳ್ಗಾವುಂಡ ನಾಗಾರ್ಜುನನು ನಾಗರಖಂಡ 70ನ್ನು ಆಳುತ್ತಿದ್ದಾಗ, ಯುದ್ಧರಣರಂಗದಲ್ಲಿ ನಾಗಾರ್ಜುನ ಆಕಸ್ಮಿಕವಾಗಿ ಮಡಿಯಲು ಸ್ವತಃ ಕಲವಿಟ್ಟರಸನೇ ನಾಳ್ಗಾವುಂಡಿಯಾದ ಜಕ್ಕಿಯಬ್ಬರಸಿಗೆ ನಾಗರ ಖಂಡ–70ನ್ನು ಆಕೆಯ ಆಳ್ವಿಕೆಗೆ ನೀಡಿ ನಾಳ್ಗಾವುಂಡಿಯಾಗಿ ನೇಮಿಸಿದನು. ಇವಳ ಕೈಕೆಳಗೆ ನಣ್ಣುವರ ಕಲಿಗ ಮತ್ತು ಸಂದಿಗ ಕುಡಿವುಳ್ಡ ಎಂಬ ಇಬ್ಬರು ಪೆರ್ಗಡೆಗಳು ಸಹಕರಿಸುತ್ತಿದ್ದರೆಂದು ಶಿಕಾರಿಪುರದ ಬಂದಲಿಕೆ ಶಾಸನ ಈ ರೀತಿಯಾಗಿ ಹೊಗಳಿದೆ.[43]

"ಉತ್ತಮ ಪ್ರಭುಶಕ್ತಿಯುಕೆ ಜಿನೇನ್ದ್ರ ಶಾಸನಭಕ್ತೆಕಾ
ನ್ತ್ಯಾತ್ತವಿಭ್ರಮೆ ಜಕ್ಕಿಯಬ್ಬೆ ಸಮಸ್ತು ನಾಗರ ಖಡ್ಡಮೆ
ಪ್ಪುತ್ತುಮಂ ವಧುವಾಗಿಯುಂ ನಿಜವೀರ ವಿಕ್ರಮಗರ್ಭದಿಂ
ಪೆತ್ತವಂ ಪ್ರತಿಪಾಲಿಸುತ್ತೊಸದಿಳ್ಪಳಿಳ್ದ ವಸಾನದೊಳ್"

ಎಂದು ವಿವರಿಸಿದೆ. ಇದನ್ನ ಗಮನಿಸಿದರೆ "ಆಕೆ ಉತ್ತಮ ಪ್ರಭುಶಕ್ತಿಯುಕ್ತೆ" ಎಂದು ಹೇಳಿ ಅವಳ ವೀರ ವಿಕ್ರಮಗರ್ಭ'ವನ್ನು ಎತ್ತಿಹಿಡಿದಿದೆ.

ಚಾಳುಕ್ಯರ ಅಹಮಮಲ್ಲನ ಪಾದಾಂಬುಜ ಭ್ರಮದ ಹಂಪ. ಪಟ್ಟದ ವಧುನಾಗಿಯಕ್ಕನನ್ನು ಬಳ್ಳಿಗಾವೆಯ ಶಾಸನ ಈಗೆ ಹೊಗಳಿದೆ,

43 ಎ.ಕ. vii, ಶಿಕಾರಿಪುರ, ಶಾ.ಸಂ. 219, ಬಂದಲಿಗೆರೆ (ಕ್ರಿ.ಶ. 915)

"ಅದು ವೆಳಳ.....ಣ್ಣ ಬಸನಲ್ಲಿದೆ ಪೆಣ್ಡತಿಗುಂಟು ದುಷ್ಟರಂ
ಕಿಡಿಸುವ ಶಿಷ್ಟರಂ ಪೊರೆವನುಗ್ರಹನಿ........ ಮಪ್ಪುನಾಡುವೆ
ರ್ಗಡೆತನ ಮನದನಳೆದು ಮಹಾಮಲ್ಲನ ಚಿತ್ತವೃತ್ತಿಯೋ......
.... ಳೆನಲ್ಕೆ ಪೋಲ್ವ ನರರಾರ್ಗ್ಗಳ್ ಬಾಪ್ಪುರ ನಾಗಿಯಕ್ಕನರ್ ॥[44]"

ಈ ಒಂದು ಶಾಸನ ನಾಗಿಯಕ್ಕ ನಿರ್ವಹಿಸಿದ ಪೆರ್ಗಡೆತನದ ಸ್ಪಷ್ಟ ಚಿತ್ರಣವನ್ನು ನೀಡುತ್ತದೆ.

**ಗಾವುಂಡ ರಾಣಿಯರಾಳ್ವಿಕೆ**

ನಾಳ್ಗವುಂಡರ ಕೆಳಗಿನ ಅಧಿಕಾರ ವರ್ಗವೇ ಗಾವುಂಡ........ ನಾಳ್ಗಾವುಂಡಿತನ ಹತ್ತಾರು ಗ್ರಾಮಗಳ ಆಡಳಿತವಾದರೆ ಗಾವುಂಡತನ ಗ್ರಾಮದ ಪ್ರಭು ಆಡಳಿತ. ವಂಶ–ಪಾರಂಪರ್ಯವಾಗಿ ಗಾವುಂಡ ಅಧಿಕಾರ ಬರುತ್ತಿದ್ದು ಕೆಲವು ಮಹಿಳೆಯರು ನಿರ್ವಹಿಸಿದ ಬಗ್ಗೆ ಮಾಹಿತಿಗಳು ದೊರೆಯುತ್ತವೆ.

ಅರಸೀಕೆರೆಯ ಮಹಾಪ್ರಭು ಕಲಿಯಮಗೌಡನ ಮಗಳು ಕಣಕಪಿರಿಯೊಡಪೆರ್ಗಡೆಯ ಮನೋವಲ್ಲಭೆ ಬಾಚಲದೇವಿ "ಅರಸೀಕೆರೆಯ ಗೌಡಿಕೆಯಿಂ ತನಗೆ ನಡೆವ ತೇಜಸ್ವಾಮ್ಯದಿಯಳ್ಳ ಧನಭೂಮಿಯನಿತುಮಂ" ಕಲಿದೇವರಿಗೆ ದತ್ತಿ ಬಿಟ್ಟಳೆಂದು ಶಾಸನ ಹೇಳಿದೆ.

ಕೋಲಾರದ ವಿಭುಮಾದಿರಾಜನ ಮಗಳು ಬಿಜ್ಜಿಯವ್ವೆ ಕೋಲಾರದ ಪ್ರಭುತ್ವ ನಿರ್ವಹಿಸಿದ ವಿಷಯ ಸವದತ್ತಿ ಶಾಸನದಲ್ಲಿ ತಿಳಿಸಿದೆ. ಮಾದಿರಾಜ ಮಡಿದಾಗ

"ಆ ಮಾದಿರಾಜನ ಗ್ರಜೆ
ಭೂಮಿಸ್ತುತೆ ಬಿಜ್ಜಿಯವ್ವೆಯನುಜರ ಮಹಿಮೋ
ದ್ದಾಮಮುಮಲಿ ತತ್ಪ್ರಭುತೆಯ
ನಾ ಮೊಳ್ಕೆಯಿನಧಿಕವಾಗೆ ನಡೆಯಿಸುತಿರ್ದ್ದಳ್ ॥"

---

44 ಎ.ಕ. vii, ಶಿಕಾರಿಪುರ, ಶಾ.ಸಂ 170, ಬಳ್ಳಿಗಾವೆ, ಕ್ರಿ.ಶ. 1065.

"ಸಲೆ ಕೋಲಾರದೊಳಾ ಪ್ರಭುತ್ವವೆಸೆಗುಂ ತಂನಾಮದೊಳ್ ಮಾದಿರಾ
ಜಲಸತ್ಪುತ್ರಿಯನಾ ಪ್ರಭುತ್ವಸಹಿತಂ ಶ್ರೀ ಗೌರಿಯಂ ಪೂಣ್ಕೆಮಂ
ಗಲ ತೂರ್ಯ್ಯಂ ವಿಭುಮಲ್ಲಿಕಾರ್ಜುನ ನೊಳ್ಪಿಂ ವಿಜ್ಜಯವ್ವೆ ಪ್ರಭು[45]
ತ್ವಲತಾ ವಿಸ್ತರದಾಗಿ ತಾಂ ನೆರಪಿ ಚಿತ್ತೋತ್ಸಾಹಮಂ ತಾಳ್ದಿದಳ್[46]"

ಎಂದೂ ಇವಳು ಅನುಜರ ಮಹಿಮಾದ್ವಾವುಮುಮಂ ತತ್ರಭುತೆಯಂ ನಿರ್ವಹಿಸಿದಳೆಂದೂ ತನ್ನ ಪತಿಯೊಂದಿಗೆ ಗೌಡಿಕೆಯನ್ನು ನಡೆಸಿದಳೆಂದು ತಿಳಿಸಿದೆ. ಈ ಉಲ್ಲೇಖಿತ ಸವದತ್ತಿಯ ಶಾಸನ ಗಂಡುಮಕ್ಕಳಿಲ್ಲದಾಗ ಹೆಣ್ಣುಮಕ್ಕಳಿಗೆ ತವರು ಮನೆಯಲ್ಲಿದ್ದುಕೊಂಡೇ ವಿವಾಹವಾಗಿ ಗೌಡಿಕೆಯನ್ನು ನಡೆಸಿದ ಬಗ್ಗೆ ಮಾಹಿತಿಯನ್ನು ತಿಳಿಸುತ್ತದೆ.

**ರಾಣಿಯರ ಸ್ವತಂತ್ರ್ಯಾಡಳಿತ**

ಕೆಲವೊಮ್ಮೆ ಪ್ರಾಚೀನ ಕರ್ನಾಟಕದ ಸಾಮ್ರಾಜ್ಯದ ಆಡಳಿತಗಳಲ್ಲಿ ರಾಜನ ಜೊತೆ ರಾಣಿಯರು ಸುಕಸಂಕಥಾವಿನೋದದಿಂದ ಜೀವಿಸುತ್ತಿದ್ದರೆ ಉಳಿದ ಕೆಲವು ರಾಣಿಯರು ಸಂದರ್ಭಕ್ಕನುಸಾರವಾಗಿ ಸಾಮ್ರಾಜ್ಯದ ಯಾವುದಾದರೊಂದು ಒಂದು ಭಾಗದಲ್ಲಿ ಸ್ವತಂತ್ರ್ಯರಾಗಿ ಆಡಳಿತ ನಡೆಸುತ್ತಿದ್ದರು. ರಾಜನ ಪತ್ನಿಯರು ರಾಜಪುತ್ರಿಯರು, ಪತಿಯ ಮರಣಾನಂತರ, ಪುತ್ರವಿಹೀನರಾಗಿದ್ದಾಗ, ಮಕ್ಕಳು ಅಪ್ರಾಪ್ತರಾಗಿದ್ದಾಗ ಹಾಗೂ ಕೆಲವೊಂದು ಔಚಿತ್ಯ ಪೂರ್ಣ ಸಂದರ್ಭಗಳಲ್ಲಿ ತಮ್ಮ ಮಕ್ಕಳನ್ನು ಅಥವಾ ಉತ್ತರಾಧಿಕಾರಿಗಳನ್ನು ಮುಂದಿಟ್ಟುಕೊಂಡು ಸ್ವತಂತ್ರ್ಯ ಆಡಳಿತವನ್ನು ನಡೆಸುತ್ತಿದ್ದ ಪ್ರಸಂಗಗಳು ಚರಿತ್ರೆಯಲ್ಲಿ ಇವೆ. ಸಂದರ್ಭ ಬಂದಾಗ ಕೈಯಲ್ಲಿ ಖಡ್ಗ ಹಿಡಿದು ವೈರಿಗಳ ರುಂಡ, ಚೆಂಡಾಡಿದ, ತುರುಗೋಳದಂತಹ ದಿಟ್ಟ ಪ್ರಸಂಗಗಳಲ್ಲಿ ಭಾಗಿಯಾದ ಉದಾಹರಣೆಗಳು ಅವರ ಸ್ವತಂತ್ರ ಆಡಳಿತ ಮನೋಭಾವನೆಯನ್ನು ಸೂಚಿಸುತ್ತವೆ.

ಕದಂಬ ಸಾಮ್ರಾಜ್ಯದ ಕಾಲಕ್ಕೆ ಸಂಬಂಧಿಸಿದಂತೆ ರಾಣಿಯರು ಸ್ವತಂತ್ರ್ಯ ಆಡಳಿತ ನಡೆಸಿರುವ ಉಲ್ಲೇಖಗಳು ದೊರಕುವುದಿಲ್ಲ. ಆದರೆ ಬಾದಾಮಿ ಚಾಲುಕ್ಯರ ಕಾಲದಿಂದ ರಾಣಿಯರು ಸ್ವತಂತ್ರ್ಯ/ನೇರ ಆಳ್ವಿಕೆ ನಡೆಸಿದ ಉಲ್ಲೇಖಗಳು ಹೆಚ್ಚಾಗಿ ಕಾಣಸಿಗುತ್ತವೆ.

---

45 ಎಸ್.ಐ.ಐ. ix-i-145, ಬಾಗಳಿ (ತಾ) ಹರಪನಹಳ್ಳಿ. 1079.

46 ಎಸ್.ಐ.ಐ. xxx-248, ಪರಸಗಡ (ತಾ) ಸವದತ್ತಿ, ಕ್ರಿ.ಶ. 1225.

ಮೊದಲನೇ ಪುಲಿಕೇಶಿಯ ರಾಣಿ ದುರ್ಲಭಾದೇವಿ ಬಾದಾಮಿಯ ಸುತ್ತಲಿನ ಕಿಸುವೊಳಲು ಕೆಂದೂರು, ನಂದಿಗ್ರಾಮ ವ್ರೀಹಿ, ಮುಖಗ್ರಾಮ ಶ್ರೀಯಂಭಾಟಕ ಇತ್ಯಾದಿ ಹತ್ತು[47] ಗ್ರಾಮಗಳನ್ನು ಆಳಿದಕ್ಕೆ ಆಧಾರವಿದೆ. ಇವಳ ಆಜ್ಞೆ ಮೇರೆಗೆ ಮಗ ಮಂಗಳೇಶನು ಮಕುಟೇಶ್ವರ ದೇವರಿಗೆ ದಾನ ನೀಡಿದ ದಾಖಲೆ ಇದೆ.

ಎರಡನೇ ಪುಲಿಕೇಶಿಯ ಮಗ ಚಂದ್ರಾದಿತ್ಯನ ರಾಣಿ ವಿಜಯಭಟ್ಟಾರಿಕೆ ಅತ್ಯಂತ ಗೌರವಕ್ಕೆ ಪಾತ್ರಳಾದ ರಾಣಿ. ಕ್ರಿ.ಶ. 645ರಲ್ಲಿ ಇವಳ ಪತಿ ಚಂದ್ರಾದಿತ್ಯ ಆಕಸ್ಮಿಕವಾಗಿ ಮರಣ ಹೊಂದಿದಾಗ ರಾಜ್ಯಾಡಳಿತದ ಸೂತ್ರವನ್ನು ನೇರವಾಗಿ ವಿಜಯ ಮಹಾದೇವಿಯೇ ವಹಿಸಿದ್ದಳು. ಈ ವಿಷಯವನ್ನು ಕ್ರಿ.ಶ. 659ರ ನೇರೂರ ತಾಮ್ರಪಟ ವಿವರಿಸಿದೆ.[48] ಸ್ವರಾಜ್ಯ ಪಂಚಮ ಸಂವತ್ಸರ ಎಂದು ಹೇಳಿರುವುದನ್ನು ಗಮನಿಸಿದಾಗ ಆಕೆ ಸ್ವತಃ ರಾಜ್ಯಭಾರವನ್ನು ಮಾಡಿದ ಬಗ್ಗೆ ಸೂಚಿಸುತ್ತದೆ. ಇವಳ ಮಗ ಅಪ್ರಾಪ್ತನಾದ ಕಾರಣ ಮಗನ ಪರವಾಗಿ ರಿಜೆಂಟ್ ಆಗಿ ಆಡಳಿತ ನಡೆಸಿರಬಹುದಾದ ಸಂದರ್ಭಗಳಿವೆ. ಈ ತಾಮ್ರಪಟ ಅವಳ ಸಾಮ್ರಾಜ್ಞೆ ಸ್ಥಾನವನ್ನು ಸೂಚಿಸುತ್ತದೆ. ಆದರೆ ಈಕೆ ರಾಜ್ಯಾಡಳಿತದಲ್ಲಿ ಎಷ್ಟು ವರ್ಷಗಳ ಕಾಲ ರಾಜ್ಯಭಾರವಹಿಸಿದಳೆಂದು ತಿಳಿದು ಬಂದಿಲ್ಲ. ವಿಜಯಾದಿತ್ಯನ ಶಾಸನವೊಂದು ಅವನ ರಾಣಿ ಲೋಕೇತಿನಿಮ್ಮಡಿಯು ಕ್ರಿ.ಶ. 696–734ರ ಕಾಲದಲ್ಲಿ ಕುರತ್ತಕುಂಟೆಯನ್ನು ಆಳ್ವಿಕೆ ಮಾಡುತ್ತಿದ್ದಳು.[49] ಇವಳನ್ನು ವಿಜಯಾಧಿತ್ಯನ ಕಾಲದ ಬಾದಾಮಿ ಸ್ತಂಭ ಶಾಸನ ರಾಜಮಾತೆ ಎಂದು ವರ್ಣಿಸಿದೆ.

ಶ್ರೀಪುರುಷನ ರಾಣಿ ವಿನೇತಿನಿಮ್ಮಡಿ ಮುವೆಲ್ಲೂರನ್ನು ಆಳುತ್ತಿದ್ದಳು.[50] ಶ್ರೀಪುರುಷನ ಮಗ ದುಗ್ಗಮಾರ ಕುವಳಾಲನಾಡು 300, ಗಂಗರ ಸಾಸಿರ ನಾಡನ್ನು ಆಳುತ್ತಿದ್ದಾಗ ಇವನ ರಾಣಿ ಮಹಾದೇವಿ ಕಳಿಕಬ್ಬೆ ಅಗಳಿ ಪ್ರಾಂತ್ಯವನ್ನು ಆಳುತ್ತಿದ್ದಳೆಂದು ಮೇಲಾಗಾಣಿ ಶಾಸನ ತಿಳಿಸುತ್ತದೆ.[51]

ರಾಷ್ಟ್ರಕೂಟ ಮನೆತನದಲ್ಲಿ ಅಮೋಘವರ್ಷನ ಮಗಳಾದ ರೇವಕನಿಮ್ಮಡಿ ಎರಡನೇ ಬೂತುಗನ ಮಡದಿ ತನ್ನ ಪತಿಗೆ ಬಳುವಳಿಯಾಗಿ ಬಂದಿದ್ದ ಬೆಳ್ವೊಲ 300, ಪುಲಿಗೆರೆ 300,

---

[47] ಐ.ಎ. XIX. P-16-18

[48] ಐ.ಎ. VII, ಪು.163, ನೆರೂರು ತಾಮ್ರಪಟ, ಕ್ರಿ.ಶ. 659, **"ಸ್ವರಾಜ್ಯ ಪಂಚಮ ಸಂವತ್ಸರ"** ಎಂದು ತಿಳಿಸಿದೆ".

[49] ಬಿ.ಕೆ.ಐ L-I-2 ಕುರ್ತಕೋಟಿ (ತಾ) ಗದಗ, ಕ್ರಿ.ಶ. 696–754.

[50] ಎಂ.ಎ.ಆರ್. 1917 ನಂ. 78, ಹೆಬಾಟ (ತಾ) ಶ್ರೀನಿನಿವಾಸಪುರ, ಕ್ರಿ.ಶ.

[51] ಎ.ಕ. X, ಮುಳಬಾಗಿಲು ಶಾ.ಸಂ. 80, ಕ್ರಿ.ಶ. 767.

ಎಡೆವೊಳಲ್ಕೂಂ ಮತ್ತು ಕಿಸುಕಾಡು 70 ಪ್ರಾಂತ್ಯಗಳಲ್ಲಿ ಸ್ವತಂತ್ರಳಾಗಿ ಆಳುತ್ತಿದ್ದಳು[52] ರಾಷ್ಟ್ರಕೂಟ ಚಕ್ರವರ್ತಿ ಧ್ರುವನ ರಾಣಿಯಾಗಿದ್ದ ಶೀಲಭಟ್ಟಾರಿಕೆ ಶಾಸನದಲ್ಲಿ ರಾಣಿಯನ್ನು 'ಪರಮೇಶ್ವರಿ' ಹಾಗೂ ಪರಮಭಟ್ಟಾರಿಕಾ ಶೀಲಮಹಾದೇವಿ ಎಂದು ಸಂಭೋದಿಸಲಾಗಿದೆ. ಈ ಬಿರುದುಗಳು ರಾಷ್ಟ್ರಕೂಟರ ರಾಣಿ ಶೀಲಮಹಾದೇವಿಗಿದ್ದ ಪರಮಾಧಿಕಾರವನ್ನು ಸೂಚಿಸುತ್ತವೆ. ರಾಜನ ಅನುಮತಿಯನ್ನು ಪಡೆಯದೆ ಸ್ವತಂತ್ರ್ಯವಾಗಿ ಆಡಳಿತಾಧಿಕಾರಿಗಳಿಗೆ ಗ್ರಾಮಗಳನ್ನು ದಾನ ನೀಡಿದ ವಿಷಯವನ್ನು ಸೂಚಿಸುತ್ತದೆ.[53] ಇಂದ್ರನ ಪತ್ನಿಯಾದ ಗೋವಿಂದಬ್ಬೆಯು ದೇವಗೇರಿ ಹಳ್ಳಿಯನ್ನು[54] ಅಮೋಘವರ್ಷನ ಮಗಳು ಚಂದ್ರೋಬಲಬ್ಬೆ, ರಾಯಚೂರಿನ ದೋಖ್ ಪ್ರದೇಶವನ್ನು ಆಳುತ್ತಿದ್ದರು.

ರಾಷ್ಟ್ರಕೂಟರ ಸಾಮಂತರಾಗಿದ್ದ ಗಂಗರಾಜ್ಯದಲ್ಲಿ ರಾಣಿಯರು ಆಡಳಿತದಲ್ಲಿ ಸ್ವತಂತ್ರ್ಯರಾಗಿದ್ದರು. ದುಗ್ಗಮಾರನ ಪತ್ನಿ ಕಂಚಿಯಬ್ಬೆಯು ಕೋಲಾರ ಜಿಲ್ಲೆಯ ಅಗಳಿ ಎಂಬ ಪ್ರದೇಶವನ್ನು[55] ಎರಡನೇ ನೀತಿಮಾರ್ಗನ ರಾಣಿ ಭುಜಲಬ್ಬರಸಿಯು ಪುಲಿಗೆರೆ 300 ಗೊಳಗಿದ್ದ ಪತ್ತುಪೆರುಬಾಳ ಗ್ರಾಮವನ್ನಾಳುತ್ತಿದ್ದರು.[56]

ಇಮ್ಮಡಿ ಬೂತುಗನ ಮತ್ತೊಬ್ಬರಾಣಿ ಪದುಮಬ್ಬರಸಿಯು ನರೇಗಲ್ಲಪ್ರಾಂತ್ಯವನ್ನು.[57] ನೀತಿಮಾರ್ಗ ಪೆರ್ಮಾನಡಿಯ ಆಳ್ವಿಕೆಯಲ್ಲಿ ಪರಬ್ಬರಸಿಯು ಕುಂದತ್ತೊರು[58] ಇಮ್ಮಡಿ ಮಾರಸಿಂಹನ ರಾಣಿ ಪೂರ್ವ ಚಾಲುಕ್ಯ ರಾಜಕುಮಾರಿ ಅಂಕಬ್ಬರಸಿಯು ಪುಲ್ಲುಂಗೂರನ್ನು,[59] 2ನೇ ಬೂತುಗನ ರಾಣಿಯಾಗಿದ್ದ ಸರಮಬ್ಬೆಯು ಕೂರ್ಗಲ್ಲನ್ನು ಆಳುತ್ತಿದ್ದರು.[60] ಇದನ್ನು ಕೂರ್ಗಲ್ಲ ಶಾಸನ ಬೂತುಗನ ಅರಸಿ ಸರಮಬ್ಬೆಯಾಳುತ್ತಿರೆ ಎಂದು ವಿವರಿಸಿದೆ. ವಿನಯಾದಿತ್ಯನ ರಾಣಿ ವಿನಯಾವತಿ ರಾಜನ ಜೊತೆ ಉತ್ತರದ ದಿಗ್ವಿಜಯಕ್ಕೆ ಹೋಗಿದ್ದನ್ನು ಮೂರನೇ ಗೋವಿಂದನ ರಾಣಿ ಗಾಮುಂಡಬ್ಬೆ ಯುದ್ಧ ಶಿಬಿರದಲ್ಲಿ ಇದ್ದುದ್ದನ್ನು ಹಾಗೂ ಇಮ್ಮಡಿ ಪುಲಿಕೇಶಿಯ ರಾಣಿ ಅಗ್ರಮಹಾದೇವಿ ರಣರಂಗದಲ್ಲಿ

---

[52] ಎಸ್.ಐ.ಐ. xi-I ಕೆಸರಬಾವಿ (ತಾ) ಹುನಗುಂದ ಕ್ರಿ.ಶ. 837.

[53] ಎ.ಎಂ. ಜೆತ್ವಾಯಿ ತಾಮ್ರಪಟಗಳು.

[54] ಎಸ್.ಐ.ಐ. xvii, ಶಾ.ಸಂ. 14, ದೇವಗೇರಿ, ಶಾಸನಪುಟ–8.

[55] ಎ.ಕ. x, ಮುಳಬಾಗಿಲು, ಶಾಸನ, ಪುಟ–97.

[56] ಎ.ಇಂ. IV, ಶಾಸನ ಸಂಖ್ಯೆ.50, ಹೆಬ್ಬಾಳ ಶಾಸನ, ಪು–359.

[57] ಶಾಸನ ಸಂಖ್ಯೆ, 182, ನರೇಗಲ್ ಶಾಸನ, ಬಾಂ.ಕ 1926–27.

[58] ಎ.ಇಂ. xxxiv, ಭಾಗ–2, ಹುಲಗೂರು ಶಾಸನ, ಶಾ.ಸಂ. 12, ಪುಟ–59.

[59] ಅದೇ,

[60] ಎ.ಕ. iv, ಹುಣಸೂರು, ಶಾಸನ. ಸಂ. 62, ಕೊರಗಲ್ಲು ಕ್ರಿ.ಶ

ಬೀಡು ಬಿಟ್ಟಿದ್ದನ್ನು ಗಮನಿಸಿದರೆ ರಾಣಿಯರು ಸ್ವತಂತ್ರ್ಯರಾಗಿ, ಕ್ರಿಯಾಶೀಲರಾಗಿ ಭಾಗವಹಿಸುತ್ತಿದ್ದರೆಂಬುದನ್ನು ಅವರ ಆಡಳಿತಾತ್ಮಕತೆಯ ವಿಶೇಷವನ್ನು ತಿಳಿಸುತ್ತದೆ.

ಚಾಲುಕ್ಯರ ನಂತರ ಕಾಲದಲ್ಲೂ ಈ ಪದ್ಧತಿ ಮುಂದುವರಿಯಿತ್ತಾದರೂ ಪರೋಕ್ಷ ರಾಜಕೀಯ ಆಡಳಿತ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಮರೆಯಾಗಿ ಚಕ್ರವರ್ತಿಗಳ ರಾಣಿಯರು ರಾಜಕೀಯದಲ್ಲಿ ನೇರವಾಗಿ ಹೆಚ್ಚಿನ ಆಸಕ್ತಿ ತೋರಿಸಿದರು. ಈ ಹಿಂದೆ ರಾಣಿಯರು ಕೇವಲ ಉತ್ಸವ ಮೂರ್ತಿಗಳಂತೆ ತೋರಿಬಂದರು. ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಅವರ ಬಿಗಿರ ಧೋರಣೆ ಸಡಿಲಿಸಿತು. ಪ್ರಾಚೀನ ಕರ್ನಾಟಕದ ರಾಜಕೀಯ ಜೀವನದಲ್ಲಿ ಕಲ್ಯಾಣಿ ಚಾಲುಕ್ಯರ ರಾಣಿಯರ ಪಾತ್ರ ಅಮೋಘ. ಅದು ವಿದ್ಯಾಕ್ಷೇತ್ರವಾಗಬಹುದು, ಸಾಮಾಜಿಕ ಮತ್ತು ಧಾರ್ಮಿಕ ನೆಲೆಯಲ್ಲಾಗಿರಬಹುದು ಕಲ್ಯಾಣ ಚಾಲುಕ್ಯರ ರಾಣಿಯರ ಹೆಸರು ಉನ್ನತವಾದುದ್ದಾಗಿದೆ.

ಕಲ್ಯಾಣ ಚಾಲುಕ್ಯರ ಮನೆತನದಲ್ಲಿ ರಾಜನಷ್ಟೇ ಸಮಾನ ಅವಕಾಶ ಪಡೆದು ಸ್ವತಂತ್ರ್ಯ ರಾಜ್ಯಭಾರ ನಿರ್ವಹಿಸಿ ಶಾಸನೋಕ್ತಗೊಂಡ ರಾಣಿಯರಲ್ಲಿ ಬಹು ಪ್ರಮುಖಳೆಂದೆ ಅಕ್ಕಾದೇವಿ. ಇವಳು ದಾಸವರ್ಮ ಮತ್ತು ಭಾಗಲಾದೇವಿಯವರ ಮಗಳಾಗಿದ್ದು ಐದನೇ ವಿಕ್ರಮಾದಿತ್ಯನ ಸಹೋದರಿಯಾಗಿದ್ದಳು. ಇವಳು ಎರಡನೇ ಜಯಸಿಂಹನ ಅಕ್ಕ. ಇವಳನ್ನು ಮಯೂರ ವರ್ಮನಿಗೆ ನೀಡಿ ವಿವಾಹವನ್ನು ಮಾಡಲಾಯಿತು. ಇವಳು ತನ್ನ ಸ್ಥಾನಬಲ ಹಾಗೂ ಸ್ವಕಾರ್ಯ ಬಲದ ಮೇರೆಗೆ ಪ್ರಾಮುಖ್ಯತೆಯಿಂದ ಬೆಳಗಿದ್ದಳು. ಕಲ್ಯಾಣ ಚಾಲುಕ್ಯರಂತಹ ಪ್ರತಿಷ್ಠಿತ ಮನೆತನದಲ್ಲಿ ಜನಿಸಿ, ಚಕ್ರವರ್ತಿಯ ಘನತೆಯ ದರ್ಪದಲ್ಲಿ ಅಧಿಕಾರದಿಂದ ರಾಜ್ಯಭಾರ ನಡೆಸಿದ ಅಪ್ರತಿಮ ಮಹಿಳೆಯಾಗಿದ್ದಾಳೆ.

ಅಕ್ಕಾದೇವಿ ಸುಮಾರು 44 ವರ್ಷಗಳ ಕಾಲ ಅಂದರೆ ಕ್ರಿ.ಶ. 1010 ರಿಂದ ಕ್ರಿ.ಶ. 1054ರ ವರೆವಿಗೂ ಕಿಸುಕಾಡು 70 ಪ್ರದೇಶದಲ್ಲಿ ಸ್ವತಂತ್ರ್ಯಳಾಗಿಯೇ ಒಬ್ಬ ಪ್ರಬಲ ರಾಜನಂತೆ ಯಶಸ್ವೀಯುತವಾಗಿ ಆಡಳಿತ ನಡೆಸಿದ್ದಾಳೆ.[61] ಕ್ರಿ.ಶ. 1054ರಲ್ಲಿ ಈಕೆ ಕಿಸುಕಾಡು 70 ಪ್ರದೇಶವನ್ನು ಮಾತ್ರವಲ್ಲದೆ ತೊರಗೆರೆ 60, ಮಾಸೆಯವಾಡಿ 140, ಪ್ರದೇಶಗಳಲ್ಲಿ ಪ್ರಮುಖ ಆಡಳಿತ ನಡೆಸಿದ ಬಗ್ಗೆ ದಾಖಲೆಗಳಿವೆ. ಅಕ್ಕಾದೇವಿ ಉತ್ತಮ ಸಾಮ್ರಾಜ್ಞೆಯಾಗಿದ್ದಂತೆ ಯುದ್ಧ ರಣರಂಗದಲ್ಲಿಯೂ ವೀರತ್ವ,

[61] ಎ.ಇ. xv, ನಂ. 6, ಸೂಚಿ (ತಾ) ರೋಣ, ಕ್ರಿ.ಶ. 1010.

ಶೌರ್ಯತ್ವಗಳಿಂದ ಹೋರಾಡುತಿದ್ದಳು. ತನ್ನ ಸ್ವಂತ ಸಾಮರ್ಥ್ಯಗಳಿಂದ ಶತೃಗಳ ವಿರುದ್ಧ ಧೈರ್ಯದಿಂದ ಹೋರಾಡಿ, ಶತೃಗಳನ್ನು ಸಂಹರಿಸುತ್ತಿದ್ದಳು. ಹೀಗಾಗಿ ಇವಳು ರಣಭೈರವಿ ಎಂಬ ಬಿರುದನ್ನು ಗಳಿಸಿದ್ದಳು. ತನ್ನ ಸಾಮ್ರಾಜ್ಯದ ಸುತ್ತಲಿನ ಶತ್ರುಗಳನ್ನು ಸೋಲಿಸಿ ಸಾಮ್ರಾಜ್ಯದ ಎಲ್ಲೆಯನ್ನು ವಿಸ್ತರಿಸಿದ್ದಳು. ಬಂಡುಗಾರನಾದ ಗೋಕಾವಿಯ ಕೊತಾವಲನ ಮೇಲೆ ದಂಡೆತ್ತಿ ಹೋಗಿ ಅವನನ್ನು ಸದೆಬಡಿದಳು. ವಿಜಾಪುರ ಜಿಲ್ಲೆಯ ಹುನಗುಂದ ತಾಲ್ಲೂಕಿನ ವಿಕ್ರಮಪುರ (ಅರಸೀಬೀದಿ) ಈಕೆಯ ರಾಜಧಾನಿಯಾಗಿದ್ದು ಉತ್ತಮ ಆಡಳಿತವನ್ನು ರೂಪಿಸಿದ್ದಳು.

ಬೇಲೂರು, ಹೆಟ್ಟೂರು, ಅರಸೀಬೀದಿ, ಸೂಡಿ ಕೋರಲಹಳ್ಳಿ ಹಲವು ಹತ್ತು ಶಾಸನಗಳು ಇವಳ ಬಗ್ಗೆ ವಿವರಿಸುತ್ತವೆ. ಕಿಸುಕಾಡು, ತೊರಗೆರೆ, ಮತ್ತು ಮಾಸೆಯವಾಡಿಗಳಲ್ಲಿ ಏಳು ಜನರಿಂದ ಕೂಡಿದ ಸದಸ್ಯರು ಈಕೆಯ ಕೈ ಕೆಳಗೆ ಕೆಲಸ(ರಾಜ್ಯಭಾರ) ನಿರ್ವಹಿಸುತ್ತಿದ್ದರು. "ಸ್ವಸ್ತಾನವರತ ಪರಮಕಲ್ಯಾಣಾಭ್ಯುದಯ ಸಹಸ್ರಧಳಭೋಗಭಾಗಿನಿ ದ್ವಿತೀಯ ಲಕ್ಷ್ಮೀ ಸಮಾನೆಯಗಣಿತ ದಾನ ಚಿಂತಾಮಣಿ ವಿವೇಕ ಚೂಡಾಮಣಿಗಳೇಕ ವ್ಯಾಕ್ಯೆಯ ಗುಣದ ಬೆಡಂಗಿ" ಎಂದೂ,[62]

ಸಕಲ ಜಗತ್ ಪ್ರಣುತೆಯುಲ ಸ್ವವಂಶ ವರ್ಧನೈಕ ಸಾಕ್ಷ ಲಕ್ಷ್ಮೀಯುಂ ಪರಿಜನಕಲ್ಪವ್ರಿಯುಲ ವಸುಧಾಜನ ಕಾಮಧೇನುವಂ ಏಕವಾಕ್ಯೆಯುಂ ಗೋಣದ ಬೆಂಡಂಗಿ"[63] ಸ್ವಸ್ತಿ ಅರಿನೃಪಮ ಕುಟಘಟ್ಟಿತ ಚರಣಾರವಿಂದೆಯಾರ್ ಗುಣದ ಬೆಡಂಗಿ[64] ಎಂದೂ, ರಣಭೈರವಿ, ಉಚ್ಚಂಡಬೈರವಿ ಎಂದು ಹೊಗಳಿವೆ. ಕ್ರಿ.ಶ. 1010 ರಿಂದ ಕ್ರಿ.ಶ. 1033ರಲ್ಲಿ ಇವಳು ರಾಜ್ಯಭಾರದಲ್ಲಿದ್ದಳೆಂಬುದನ್ನು ತಿಳಿಯಬಹುದು. ಆದರೆ ಕನ್ನಡದ ಯಾವುದೇ ಶಾಸನದಲ್ಲೂ ಇವಳು ಕೈಗೊಂಡ ಯುದ್ಧಗಳ ನೇರ ಉಲ್ಲೇಖವಿಲ್ಲ. ಆದರೆ ಶಾಸನವೊಂದು, ಈಕೆಯನ್ನು

"ಶ್ರೀವನಿತೆಯೆನಿಸಿದ ಅಕ್ಕಾ
ದೇವಿಗೆ ವಾಗ್ದೇವಿಗಖಿಳಜನನುತ ಸೀತಾ
ದೇವಿಗೆ ಮಾದೇವಿಗೆ ಭೂ
ದೇವಿಗೆ ಸಮನೆಂಬ ನ್ರಪಸುತ ಸಮುದಯಮಂ॥
ಗುಣದ ಬೆಡಂಗಿಯೆನಲ್

[62] ಎ.ಇ. XV, ನಂ.–6, ಸೂಡಿ, (ತಾ) ರೋಣ, ಕ್ರಿ.ಶ. 1010.

[63] ಐ.ಎಂ. xviii, ಪು–270–75, ಬೇಲೂರು (ತಾ) ಬಾದಾಮಿ, ಕ್ರಿ.ಶ. 1022.

[64] ಎ.ಇ. xvii, ನಂ.10, ಅರಸಿಬೀದಿ (ತಾ) ಹುನಗುಂದ, ಕ್ರಿ.ಶ. 1042.

ದ್ಗುಣಮಂ ನೆಗಳ್ವೇಕವಾಕ್ಯೆಯನೆ ಸೂನೃತಮಂ
ರಣಭೈರವಿಯೆನೆ ಶ್ರ್ಯದ
ಗುಣಮನದೇನೆಂದು ಬಣ್ಣಿಪೆಂ ನೃಪಸುತೆಯ"॥

ಜನಕಂ ಶ್ರಿ ದಸವರ್ಮ ದೇವನಭಯಂ ಚಲುಕ್ಯವಜ್ರಂ ದಿನೇ
ಶನಿಭಂ ಭಾಗಲದೇವಿ ಪುಣ್ಯಪತಿ ಸತ್ಯಾಲಾಪೆ ತಾಯ ಚಕ್ರವರ್ತಿ
ನಿಜ ಪ್ರೋಜ್ವಲಕೀರ್ತಿ ಜಯಸಿಂಹ ತಮ್ಮನೆಂದಂಬೆ ಮೇ
ದಿನಿಯೊಳ್ ಶ್ರೀ ನೆಗಳ್ವೇಕವಾಕ್ಯೆಯ ಯಶಪ್ರಖ್ಯಾತಿ ಸಾಮಾನ್ಯಮೇ॥

ಅವಿನಮ್ರಾ ನೃಪಾಳಕ ಪ್ರಳಯ ಸಂಪಾದಕ್ಷಮೋಚ್ಚಂಡ ಬೈ
ರವಿ ತಾನಾಗಿಯುಮೆಯ್ದೆ ಶಾಂತತರರೂಪಾನ್ವಿತೆ ನಿರ್ಭರ್ತ್ಸನಾ
ರವ ಸಿಂಹಾಗ್ರಜೆಯಾಗಿಯುಂ ಮದಗಜೋದ್ಯದ್ಯಾನೆಯೆಂದಂದುಧಾ
ತವಿಚಿತ್ರಂ ನೆಗಳ್ವೇಕ ವಾಕ್ಯೆಯ ಚರಿತ್ರಂ ಭೋರಿಭೂಚಕ್ರದೊಳ್॥

ಜಿನಬುಧ ಅನಂತ ರುದ್ರಾಗಮ ನಿಗದಿತಧರ್ಮಂಗಳ ಮಾಡಿ ಕೈಯಾಂ
ತನ ವಜ್ರಕ್ಕಾಪ್ಪೆನಿತನಾನುದಿನಂ ಕೊಟ್ಟು ಸರ್ವೋರ್ವಿಯೊಳ
ದಾನ ನಯಾಲಂಕಾರೆ ರಾರಾಜಿಸಿದಲಖಿಳ ವಿದ್ಯಾರ್ಥಿ ದೀನಾವಲಿನಂ
ದಿನಿಯಕ್ಕಾದೇವಿ ಧರ್ಮಾಗ್ರಣಿ ವಿಮಲವಚಃ ಶ್ರೀಜಯಶ್ರೀ ಯಶಶ್ರೀ॥

ಅಂತು ಸಕಲಜಗತ್ ಪ್ರಣತೆಯಂ ಸಮಸ್ತರಿಪುನ್ರಿಪಿ ಚರ್ಣಾರವಿಂದೆಯಂ ವಿವೇಕ ಚೂಡಾಮಣಿಯಮ ದೀನಾನಾಥ ಚಿಂತಾಮಣಿಯಂ ಸ್ವವಂಶ ವರ್ಧನೈಕ ಸಾಕ್ಷ ಲಕ್ಷ್ಮಿಯಂ ಪರಿಜನಕಲ್ಪವೃಕ್ಷೆಯಂ ವಸುಧಾಜನ ಕಾಮಧೇನುಂ ಏಕವ್ಯಾಕೆಯುಂ ಗೊಣದ ಬೆಡಂಗಿಯೆನಿಸಿ ನೆಗಳ್ವ ಶ್ರೀ ಮದಕ್ಕಾದೇವಿಯರ್.[65]"

---

65 ಐ.ಎ. xviii, ಪುಟ–270–75, ಬೇಲೂರು (ತಾ) ಬಾದಾಮಿ ಕ್ರಿ.ಶ. 1022.

ಈ ಶಾಸನೋಕ್ತ ವಿವರಗಳು ಅಕ್ಕಾದೇವಿಯ ಬದುಕಿನ ಸತ್ವಸಾರವನ್ನೇ ಎತ್ತಿಹಿಡಿದಿವೆ. ಕದಂಬರ ಮಯೂರ ವರ್ಮ ತನ್ನ ಅಧಿಕಾರ ಅವಧಿಯಲ್ಲಿ ತನ್ನ ರಾಣಿ ಅಕ್ಕಾದೇವಿಗೆ ಸ್ವತಂತ್ರ್ಯ ರಾಜ್ಯಭಾರದ ಎಲ್ಲಾ ನೀತಿ ನಿಯಮಗಳನ್ನು ನಿರೂಪಿಸಿ ಕೊಟ್ಟಂತ್ತಿದೆ. ಕಿಸುಕಾಡು ಪ್ರದೇಶವನ್ನಾಳುತ್ತಿದ್ದಾಗ ಇವಳ ರಾಜಧಾನಿ ಆಗಲೇ ಹೇಳಿದಂತೆ ವಿಕ್ರಮಪುರ ತರುವಾಯದಲ್ಲಿ ಇದು ಅರಸೀಬೀದಿ ಎಂದು ಹೆಸರಾಗಿದ್ದು ಇಂದಿಗೂ ಕೂಡ ಅರಸಿಭೀದಿ ಎಂದೇ ಕರೆಯಲಾಗುತ್ತದೆ. ಸೂಡಿ ಗ್ರಾಮವೂ ಇವಳಿಗೆ ಸಂಬಂಧಿಸಿದ್ದ ಪ್ರದೇಶವಾಗಿದೆ. ಅಲ್ಲಿ ಇವಳಿಗೆ ಸಂಬಂಧಿಸಿದ ಶಾಸನಗಳು ದೊರೆತಿದ್ದು ಇವಳ ರಾಜಕೀಯ ನೈಪುಣ್ಯತೆಯನ್ನು ಎತ್ತಿಹಿಡಿದಿವೆ.

ಕ್ರಿ.ಶ. 1047ರ ಕಾಲಕ್ಕೆ ಅಕ್ಕಾದೇವಿ ಬನವಾಸಿಯ ಆಡಳಿತವನ್ನು ಬಿಟ್ಟು ಮತ್ತೆ ಕಿಸುಕಾಡ ಪ್ರದೇಶವನ್ನು ತನ್ನ ಕೇಂದ್ರವನ್ನಾಗಿಸಿಕೊಂಡು ಆಡಳಿತ ನಡೆಸಿದಂತೆ ತೋರುತ್ತದೆ. ಈ ಊಹೆಯನ್ನು ಕ್ರಿ.ಶ. 1050ರ ಸೂಡಿ ಶಾಸನದ[66] ಶ್ರೀ ಮಕ್ಕಾದೇವಿಯರ್ ಕಿಸುಕಾಡೆಳ್ಪತ್ತುಮಂ ಬಾಗಡಗೆಯೆಳ್ಪತ್ತುಮಂ ತೊರಗಲೆ ಮಂಮಾಸಯವಾಡಿ ನೂರನಾಲ್ವತ್ತುಮಂ ದುಷ್ಟನಿಗ್ರಹ ವಿಶಿಷ್ಠ ಪ್ರತಿಪಾಳದಿಂ ರಾಜ್ಯಂಗೆಯುತ್ತಂ ಎಂಬ ಕ್ರಿ.ಶ. 1050ರ ಕೋರಲಹಳ್ಳಿಯ ಶಾಸನದ ಉಲ್ಲೇಖಗಳು ದೃಢಪಡಿಸುತ್ತವೆ.[67] ಇಷ್ಟೇ ಅಲ್ಲದೆ ಸಾಕಷ್ಟು ಶಾಸನಗಳು ಇದನ್ನೇ ಬೆಂಬಲಿಸುತ್ತವೆ. ಹೀಗಾಗಿ ಕೆಲವೇ ವರ್ಷ ಇವಳು ಬನವಾಸಿನಾಡಿನಲ್ಲಿದ್ದು ಆ ಮೇಲೆ ಅನೇಕ ವರ್ಷ ಕಿಸುಕಾಡಿನಲ್ಲಿಯೇ ಆಳ್ವಿಕೆ ನಡೆಸಿದಳು. ಈ ಸ್ಥಳಾಂತರಕ್ಕೆ ಕ್ರಿ.ಶ. 1047ರ ತರುವಾಯದಲ್ಲಿ ಜರುಗಿದ ಪತಿ ಮಯೂರವರ್ಮನ ಮರಣವೇ ಕಾರಣವಾಗಿರಬೇಕು.

ಕದಂಬ ಮಯೂರವರ್ಮನು ತನ್ನ ಅಧಿಕಾರದ ಅವಧಿಯಲ್ಲಿ ಮಡದಿ ಅಕ್ಕಾದೇವಿಗೆ ಸ್ವತಂತ್ರ ರಾಜ್ಯಭಾರದ ಎಲ್ಲಾ ನೀತಿ ನಿಯಮಗಳನ್ನು ನಿರೂಪಿಸಿ ಕೊಟ್ಟಂತಿವೆ. ಅಕ್ಕಾದೇವಿಯ ಆಡಳಿತದ ಸ್ವರೂಪವನ್ನು ಸಮಗ್ರವಾಗಿ ಸವಿವರವಾಗಿ ಶಾಸನಗಳು ತಿಳಿಸಿಕೊಡದಿದ್ದರೂ ಅಲ್ಲಲ್ಲಿ ದೊರಕುವ ತುಂಡು ಹೇಳಿಕೆಗಳು ಆಧಾರದಿಂದ ಒಂದು ಸ್ಥೂಲ ಚಿತ್ರವನ್ನು ಕೊಡಬಹುದಾಗಿದೆ.

ಅಂತೆಯೇ ಹಾನುಗಲ್ಲ ಕದಂಬ ಮಲ್ಲಿಕಾರ್ಜುನನ ರಾಣಿಯಾದ ಪಟ್ಟಮಹಾದೇವಿ ಪದ್ಮಲದೇವಿ ಪ್ರಮುಖಳಾಗಿದ್ದು ಪ್ರತ್ಯಕ್ಷವಾಗಿಯೇ ರಣಾಂಗಣ ದರ್ಶನ ಮಾಡಿದ ದಾಖಲೆ

---

[66] ಎ.ಇ. X.V, 6 ಸೂಡಿ (ತಾ) ರೋಣ. ಕ್ರಿ.ಶ. 1050.

[67] ಬಿ.ಕೆ.ಐ. I, I-86 ಕೋರಲಹಳ್ಳಿ, (ತಾ), ಮುಂಡರಗಿ, ಕ್ರಿ.ಶ. 1050.

ಹಿರೇಮಾಗಡಿಯಲ್ಲಿದೆ.[68] ಈಕೆ ಕೈಗೊಂಡ ಹೋರಾಟ ಪ್ರಸಂಗ ಭಾಗ ತ್ರುಟಿತವಾಗಿದ್ದು ಶಾಸನದ ಮೂರನೆಯ ಮುಖದಲ್ಲಿ ಮಿಯೊಳು ಖಣಖ್ವಣಲೆನೆ ಒಂದು ತುಳುತಿರಿದು ರಣದೊಳು ವೀರಮರಣ ಪಡೆದ ಒಬ್ಬ ವ್ಯಕ್ತಿಯ ದಾಖಲೆ ಮಾಡಿದೆ.

ಇದೇ ಮನೆತನಕ್ಕೆ ಸೇರಿದ ಎರಡನೇ ಜಯಸಿಂಹನ ರಾಣಿ ಲಕ್ಷ್ಮೀದೇವಿ ಬನವಾಸಿ 12.000 ಪ್ರದೇಶವನ್ನು, ಒಂದನೇ ಸೋಮೇಶ್ವರನ ರಾಣಿಯಾದ ಲಚ್ಚಲಾಮಹಾದೇವಿ ಬೆಳೆವಂತೆ ಗ್ರಾಮವನ್ನು ಆಳ್ವಿಕೆ ನಡೆಸುತ್ತಿದ್ದ ವಿಷಯವನ್ನು ತಿಳಿಸುತ್ತದೆ.[69] ಒಂದನೇ ಸೋಮೇಶ್ವರನ ಹಿರಿಯರಾಣಿ ಮತ್ತು ಪ್ರಮುಖ ರಾಣಿಯಾದ ಮೈಳಲಾದೇವಿಯು ಬನವಾಸಿ 12.000 ಎಂಬ ಪ್ರದೇಶವನ್ನು ಆಳ್ವಿಕೆ ಮಾಡುತ್ತಿದ್ದ ವಿಷಯವನ್ನು, "ಶ್ರೀಮತ್ ಪಿರಿಯರಸಿ ಮೈಲಾಳಾದೇವಿಯರ್ ಬನವಾಸಿ ಪನ್ನಿಚ್ಚಾರ್ಸಾಗ ಪರಮುಮೆಮ್? ಆಳುತ್ತಿರೆ" ಎಂದು ವಿವರಿಸಿದೆ.[70]

ಒಂದನೇ ಸೋಮೇಶ್ವರನ ಮತ್ತೊಬ್ಬರಾಣಿ ಕೇತಲಾದೇವಿ ಇವಳು ಪೊನ್ನವಾಡದ ಅಗ್ರಹಾರವನ್ನು[71] ಮತ್ತು ತರದವಾಡಿ ಈ ಅಗ್ರಹಾರವನ್ನು 50 ಗ್ರಾಮಗಳಿಂದ ಸುತ್ತುವರಿಯಲ್ಪಟ್ಟಿದ್ದ ಎಂಬ ತರದವಾಡಿ ಎಂಬ ಪ್ರದೇಶವು ಬಾಡ 1000 ಪ್ರದೇಶವು ಸಹ ಈಕೆಯ ಅಧೀನದಲ್ಲಿಯೇ ಇತ್ತು.[72] ಎರಡನೇ ಸೋಮೇಶ್ವರನ ರಾಣಿ ಕಂಚಲಾ ಮಹಾದೇವಿ ಮುಳಗುಂದ ನೆಲೆವೀಡಿನಲ್ಲಿ ರಾಜ್ಯಾಡಳಿತ ನಡೆಸುತ್ತಿದ್ದ ಬಗ್ಗೆ ಗುಡಿಗೆರೆ ಶಾಸನ ತಿಳಿಸುತ್ತದೆ.[73]

ರಾಜನೋ ಬಹುವಲ್ಲಭಾ ಎಂಬ ನಾಣ್ಣುಡಿಯಂತೆ ಚಾಲುಕ್ಯ ಸಾಮ್ರಾಟನಾದ ಆರನೇ ವಿಕ್ರಮಾದಿತ್ಯ ಇಪ್ಪತ್ತು ಜನ ರಾಣಿಯರನ್ನು ವಿವಾಹವಾಗಿದ್ದನು.[74] ಇವನು ತನ್ನ ರಾಣಿಯರಲ್ಲಿ ಕೆಲವರನ್ನು ರಾಜ್ಯಾಡಳಿತದ ಅಧಿಕಾರಿಗಳನ್ನಾಗಿ ನೇಮಕಮಾಡಿಕೊಂಡಿದ್ದನು. ಇವರು ಪ್ರದೇಶಗಳ, ಅಗ್ರಹಾರ, ಭತ್ತಗ್ರಾಮಗಳಲ್ಲಿ ಆಡಳಿತಗಾರರಾಗಿದ್ದರು. ಆರನೇ ವಿಕ್ರಮಾದಿತ್ಯನ ಹಿರಿಯರಾಣಿ ಹಾಗೂ

---

68 ಕೆ. ಐ. v, I i-86, ಕೋರಲಹಳ್ಳಿ (ತಾ) ಮುಂಡರಗಿ. ಕ್ರಿ.ಶ. 1050.

69 ಎ.ಆರ್.ಇ, 1946-47, NO.210, 1048-49.A.D.

70 ಎಸ್.ಐ.ಐ. ಸಂ. XVIII, ಶಾ.ಸಂ. ಕ್ರಿ.ಶ. 1053.

71 ಐ.ಎ. XIX, ಪು.270, ಕ್ರಿ.ಶ. 1054,

72 ಎ.ಆರ್.ಇ,, ಸಂ. XVIII, ಶಾ.ಸಂ. 67, ಕ್ರಿ.ಶ. 1062.

73 ಎ.ಆರ್.ಇ, ಸಂ. XX, ಶಾ.ಸಂ. 46, ಕ್ರಿ.ಶ. 1072.

74 Nagayya, **G.M. Inscriptions ofVikramaditya** Vol-VI.AStudy P-45.

ಪಟ್ಟಮಹಿಷಿಯಾದ ಲಕ್ಷ್ಮೀಮಹಾದೇವಿಯು ಚಾಲುಕ್ಯ ವಿಕ್ರಮ ವರ್ಷ ಕ್ರಿ.ಶ. 1080ರಲ್ಲಿ ಡೋಣಾಪುರಿ/ಡೋಣಿಯನ್ನು[75] ಕಲ್ಯಾಣದ ಆಳ್ವಿಕೆಯನ್ನು[76] ಪದಿನೆಂಟು ಅಗ್ರಹಾರಗಳನ್ನು[77] ನಿಡಿಸಿಂಗಯ ಆಡಳಿತವನ್ನು[78] ನೋಡಿಕೊಳ್ಳುತ್ತಿದ್ದಳು.

ಆರನೇ ವಿಕ್ರಮಾದಿತ್ಯನ ಮತ್ತೋರ್ವ ರಾಣಿ ಚಂದಲಾದೇವಿ ಅಲಂದೆ 1000 ಪ್ರದೇಶವನ್ನು ಮತ್ತು ಭತ್ತಗ್ರಾಮವನ್ನು ಆಳುತ್ತಿದ್ದಳು. ಈಕೆ ಅಂತಃಪುರಕ್ಕೆ ಸೀಮಿತಳಾಗಿರದೆ ರಾಜನ ಕಾರ್ಯಗಳನ್ನು ಆಗಾಗ ನಿರ್ವಹಿಸುತ್ತಿದ್ದಳು. 'ಶ್ರೀಮತಿರಿಯರಸಿ ಚಂದಲಾದೇವಿಯರ್ ಅಲಂದೇಸಿರ ಪ್ರಮುಖ ವೆನೆಕ ಭತ್ತಗ್ರಾಮಂಗಲಮ್? ದುಷ್ಠ ನಿಗ್ರಹ ಇಷ್ಟಪ್ರತಿ ಪರನರಿಂದ ಆಸುಗೆಯ್ಯಾತ್ತಿಮಿರೆ' ಎಂಬ ಶಾಸಸಸನದ ಸಾಲುಗಳು ಆಕೆ ಧರ್ಮ ರಾಜನೀತಿಗಳಲ್ಲಿ ಪಡೆದಿದ್ದ ಮಹತ್ವವನ್ನು ತಿಳಿಸುತ್ತದೆ.

ವಿಕ್ರಮಾದಿತ್ಯನ ಇನ್ನುಳಿದ ರಾಣಿಯರಲ್ಲಿ ಮೈಳಲದೇವಿ, ಅಗ್ರಹಾರ ಕನ್ನವಳ್ಳಿಯನ್ನು[79] ರಾಜ್ಯಭಾರ ಮಾಡುತ್ತಿದ್ದ ಸೂಚನೆ ಇದೆ. ಜಾಕಲದೇವಿಯನ್ನು "ಶ್ರೀಮಜ್ಜಾಕಲ ದೇವಿಯರನ್ಮೂನೊರೊಳಿಂಗಣಿಗೆಯಂ ತ್ರಿಬೋಗಾಭ್ಯನ್ತರ ಸಿದ್ದಿಯಿಂದಾಳುತ್ತಿರೆ[80] ಎಂದು ಶಾಸನ ಆಕೆಯ ಆಳ್ವಿಕೆಯನ್ನು ಸಾಭೀತುಪಡಿಸಿದೆ. ಆದರೆ ಜಾಕಲದೇವಿಯ ಬಗ್ಗೆ ವಿದ್ವಾಂಸರುಗಳಲ್ಲಿ ಭಿನ್ನಾಭಿಪ್ರಾಯವಿದೆ. ಇಬ್ಬರು ಜಾಕಲದೇವಿಯರು ಇರುವಂತೆ ಹುಣಸಿ ಹಡಗಲಿ ಶಾಸನ ಮತ್ತು ಹಿರೇಲಿಂಗದಳ್ಳಿಯ ಜಾಕಲಮಹಾದೇವಿಯ ಶಾಸನಗಳು ಅನುಮಾನವನ್ನು ಸೃಷ್ಟಿಸಿವೆ.[81]

ಇದೇ ವಿಕ್ರಮಾದಿತ್ಯನ ರಾಣಿಯಾದ ಮಲಯಮತಿದೇವಿ ಅಗ್ರಹಾರದ ಮೇಲಾಳಿಕೆಯನ್ನು[82] ತುಂಬುಳ ಅಗ್ರಹಾರದ ಆಡಳಿತವನ್ನು,[83] ರಾಣಿ ಸಾವಲದೇವಿ ನೆರೆಯಂಗಲ್ ಅಗ್ರಹಾರದ

---

75 ಎಸ್.ಐ.ಐ.xi-ii- ಶಾ.ಸಂ. 126, ಡೋಣಿ (ತಾ) ಮುಡರಗಿ, ಕ್ರಿ.ಶ.1080.

76 ಎ.ಇ. XV, ನಂ.6, ಸೂಡಿ, (ತಾ) ರೋಣ, ಕ್ರಿ.ಶ. 1084.

77 ಐ.ಎ. x , ಪು–185, ಕಂಬಳ (ತಾ) ಗದಗ ಕ್ರಿ.ಶ. 1095–96.

78 ಧಾರವಾಡ ಶಾಸನ ಸಊಚಿ, 25, ನಿಡಸಿಂಗಿ (ತಾ) ಹಾನಗಲ್ಲು ಕ್ರಿ.ಶ. 1044,

79 ಎಸ್.ಐ.ಐ XX ಶಾ.ಸಂ. 61, ಕನ್ನೋಳಿ (ತಾ) ಸಿಂದಗಿ ಕ್ರಿ.ಶ. 1094.

80 ಜೈ.ಸೌ. ಇಂ. ಪುಟ–236, ಇಂಗಳಿಗೆ (ಜಿಲ್ಲೆ, ಕಲಬುರ್ಗಿ, ಕ್ರಿ.ಶ. 1094.

81 ಎಸ್.ಐ.ಐ XVIII ಶಾ.ಸಂ. 127, ಹಿರೇಲಿಂಗದಹಳ್ಳಿ, (ತಾ) ಹಾಮಂ.ಕ್ರಿ.ಶ.

82 ಎ.ಐ.ಎ. ಎಸ್. ನಂ. 17, ದಿಗ್ಗಾವ (ಜ) ಗುಲಬರ್ಗಾ, ಕ್ರಿ.ಶ. 1107.

83 ಎ.ಐ.ಎ IX-i- ಶಾ.ಸಂ. 175, ಚಿನ್ನತುಂಬಳ (ತಾ) ಅದೋನಿ. ಕ್ರಿ.ಶ. 1107.

ಮೇಲ್ವಿಚಾರಣೆಯನ್ನು[84] ನೋಡಿಕೊಳ್ಳುತ್ತಿದ್ದ ಬಗ್ಗೆ ಆಧಾರಗಳಿವೆ. ಮತ್ತೊಬ್ಬ ರಾಣಿ ಪದ್ಮಲದೇವಿ ಅರಸಿ ಅಗ್ರಹಾರ ಮಾಂಗೊಳದ ಆಡಳಿತವನ್ನು[85] ರಾಣಿ ಶ್ರಿಯಾದೇವಿ ಎಂಬ ರಾಣಿ ಬಗದಾಳ ಮೇಲ್ವಿಚಾರಣೆಯನ್ನು ನೋಡಿಕೊಳ್ಳುತ್ತಿದ್ದರು.[86] ಪಿರಿಯಕೇತಲದೇವಿ ಆರನೇ ವಿಕ್ರಮಾದಿತ್ಯನ ಮತ್ತೋರ್ವ ರಾಣಿ ಇವಳು ಸಿರುಗುಪ್ಪೆ, ಕೊಳನೂರು ಮತ್ತು ಸಿರಿಯೂರುಗಳ[87] ಆಡಳಿತವನ್ನು ನೋಡಿಕೊಳ್ಳುತ್ತಿದ್ದಳು. ಸಿರುಗುಪ್ಪೆ ಪ್ರದೇಶವು ಒಂದು ಭತ್ತಗ್ರಾಮವಾಗಿದ್ದು ಬಳ್ಳಕುಂದೆ 300ರ ಭಾಗವಾಗಿದ್ದ ತೆಕ್ಕಲಕಲ್ಲು 12ರ ಒಂದು ಭಾಗವಾಗಿತ್ತು.

ಕಲ್ಯಾಣ ಚಾಲುಕ್ಯರ ಸಮಕಾಲೀನರಾಗಿ ರಾಜ್ಯವಾಳಿದ ಹೊಯ್ಸಳರು ಸ್ತ್ರೀಯರುಗಳಿಗೆ ರಾಜಕೀಯ ರಂಗದಲ್ಲಿ ತುಸು ಅವಕಾಶ ಕಲ್ಪಿಸಿಕೊಟ್ಟಿದ್ದರು, ಇದಕ್ಕೆ ಆ ಕಾಲದಲ್ಲಿ ದೊರಕುವ ಶಾಸನಗಳು ಆಧಾರಗಳಾಗಿವೆ. ವಿಷ್ಣುವರ್ಧನನ ರಾಣಿಯರಾದ ಬಮ್ಮಲದೇವಿ, ಅಸಂದಿ 500, ನೀರ್ಗುಂದ 500ನ್ನು ಆಳುತ್ತಲಿದ್ದ ಉಲ್ಲೇಖಗಳು ಶಾಸನಗಳಲ್ಲಿ ಒಡಮೂಡಿಬಂದಿವೆ.[88]

ಹೊಯ್ಸಳರ ವೀರಬಲ್ಲಾಳನ ಕೆಲವು ರಾಣಿಯರು ರಾಜಕೀಯ ರಂಗದಲ್ಲಿ ಮಿನುಗುವ ನಕ್ಷತ್ರಗಳಂತೆ ಕಂಗೊಳಿಸಿದ್ದಾರೆ. ವೀರ ಬಲ್ಲಾಳನ ಬಹು ಸಂಖ್ಯೆಯ ಶಾಸನಗಳಲ್ಲಿ ಹಿರಿಯ ರಾಣಿ ಬಮ್ಮಲಾದೇವಿ ಕಾಣಿಸಿಕೊಂಡಿದ್ದಾಳೆ. ಕರ್ನಾಟಕದ ರಾಣಿಯರಲ್ಲಿ ಪ್ರತ್ಯಕ್ಷ ರಣಂಗಣ ದರ್ಶನ ಮಾಡಿದ ಕೆಲವೇ ರಾಣಿಯರಲ್ಲಿ ಬಮ್ಮಲಾದೇವಿ ಕೂಡ ಒಬ್ಬಳು. ಇವಳನ್ನು ವಿವೇಕಯ್ಕ ಬೃಹಸ್ಪತಿ ಪ್ರತ್ಯುತ್ಪನ್ನ ವಾಚಸ್ಪತಿ, ಗೀತ ವಾದ್ಯ ನೃತ್ಯ ಸೂತ್ರಧಾರೆ, ನಿಜ ಪದಾಭ್ಯುದಯ ದೀಪಕೆ ಎಂದು ಶಾಸನಗಳು ಶಾಂತಲೆಯನ್ನು ಹೊಗಳಿವೆ.

ಸಣ್ಣೇನಹಳ್ಳಿಯ ಶಾಸನ[89] ಬಲ್ಲಾಳದೇವನರಸಿ ಬಂಮಲದೇವಿ "ದೋರಸಮುದ್ರದೊಳು ಸುಖಸಂಕಥಾ ವಿನೋದದಿಂ ಆಳೆ" ಎಂದು ಹೇಳಿರುವುದು ದೋರಸಮುದ್ರದಲ್ಲಿ ಆಳುತ್ತಿದ್ದ ವಿಷಯವನ್ನು ತಿಳಿಸುತ್ತದೆ. ಕ್ರಿ.ಶ. 1193ರ ಹೆಮ್ಮನಹಳ್ಳಿಯ ಮಹಾಲಿಂಗೇಶ್ವರ ದೇವಾಲಯದ ಎದುರಿಗಿನ ಶಾಸನ "ಶ್ರೀಮತು ಪಿರಿಯರಸಿ ಬಮ್ಮಲದೇವಿಯ ಅಧಿಕಾರದಲ್ಲು" ಎಂಬ ವಾಕ್ಯದಿಂದ

---

[84] ಡೈ.ಕೆ.ಡಿ.ಪು 448, ನರೇಗಲ್ಲು, (ತಾ) ಹಂಗಳ ಕ್ರಿ.ಶ. 1077–78.

[85] ಎ.ಐ.ಎ IX-i-195, ರಂಗಪುರ (ತಾ) ಹಡಗಲಿ ಕ್ರಿ.ಶ. 1117.

[86] V.S. Kulakarni, **Historical and cultural studies of the Region around Basava Kalyana**.

[87] Iranna Pattar, **Women Administrates under the chalukayas 07 Kalyana** (Arti) P-132.

[88] ಎ.ಕ. V ಶಾ.ಸಂ. 32, ಅರಸೀಕೆರೆ (ತಾ) ಕಲ್ಲುಗುಂಡಿ, ಮತ್ತು ಶಾ.ಸಂ.124,

[89] ಎ.ಕ. ಸಂ. X ಚನ್ನರಾಯಪಟ್ಟಣ, ತಾ.ಸಂ. 23, ಸಣ್ಣೇನಹಳ್ಳಿ.

ಉಕ್ತಗೊಂಡಿದ್ದು, ಇವಳು ಸ್ವತಂತ್ರವಾಗಿ ಅಧಿಕಾರ ನಿರ್ವಹಿಸಿದ ಬಗ್ಗೆ ಸ್ಪಷ್ಟವಾದ ದಾಖಲೆಗಳು ದೊರಕದಿದ್ದರೂ, ರಾಜ್ಯಾಡಳಿತದಲ್ಲಿ ಆಕೆ ಅಧಿಕಾರದಲ್ಲಿದ್ದ ಬಗ್ಗೆ ತಿಳಿಯಬಹುದಾಗಿದೆ. 1173ರ ಹುಲಿಕಲ್ಲು ಶಾಶನ "ಮಹಾಮಂಡಳೇಶ್ವರಿ" ಪದವಿ ಅವಳ ಅಧಿಕಾರದ ಸ್ಥಾನಮಾನವನ್ನು ಸೂಚಿಸಿದೆ.

"ಮಲ ಮಲದು ಮಲೆದು ಮಲೆಪರ
ಕುಲಮಂ ಬೇರ್ವರಿಸಿ ಕಿತ್ತು ಬಂಮಲೆ ಮಲದದಿಂ
ಫಲಫಲ ಕುಫಲ ಕುಫಲ ಕೆನ
ಲಲೆವಳು ಪರಸತಿಯರ ವರ ಕೀರ್ತ್ಯುನ್ನತಿಯಂ ॥"

ಎಂದು ಅರಸೀಕೆರೆ ತಾಲ್ಲೂಕಿನ ನಂ-62ರ ಹಲಕೂರಿನ ಶಾಸನ ಬಂಮಲೆಯ ವ್ಯಕ್ತಿತ್ವವನ್ನು, ಆಕೆಯ ನಿಷ್ಠುರದ ಜೀವನವನ್ನು ಹೇಳಿದೆ. ಈ ಪದ್ಯದ ಅರ್ಥ, ಮಲೆದು ನಿಂತು ಮಲೆಪರ ಕುಲವನ್ನು ಬೇರು ಸಹಿತ ಕಿತ್ತು ನೀರಿನಲ್ಲಿ ಫಲಕುಫಲಕೆನ್ನುವಂತೆ ತೊಳೆದು ಅದನ್ನು ಮತ್ತೊಮ್ಮೆ ಹುಟ್ಟದಂತೆ ಮಾಡುವ ನೀತಿಯನ್ನು, ಇವಳು ಪರಸತಿಯರ ಕೀರ್ತಿ ಉನ್ನತಿಗಳಲ್ಲಿ ಉಪಯೋಗಿಸಬೇಕಾದರೆ ಬಮ್ಮಲಾದೇವಿಯ ದೃಢತೆ ಯಾವ ಮಟ್ಟದಲ್ಲಿ ಇತ್ತೆಂದು ಸ್ಪಷ್ಟವಾಗುತ್ತದೆ. ಶಾಸನಗಳಲ್ಲಿ ಇವಳು ಪಡೆದಷ್ಟು ವರ್ಣನೆ, ಅತಿಶಯೋಕ್ತಿ, ಬಿರುದಾವಳಿಗಳ ಪಟ್ಟಿಯನ್ನು ಬಲ್ಲಾಳನ ಯಾವ ರಾಣಿಯರು ಪಡೆದಿಲ್ಲ. ಇವಳು ವೀರಬಲ್ಲಾಳನ ರಾಣಿವರ್ಗದಲ್ಲಿಯೇ ಹೆಚ್ಚಿನ ಸ್ಥಾನ ಪಡೆದವಳಾಗಿದ್ದು ವೈವಿಧ್ಯಪೂರ್ಣ ಬದುಕು ಸಾಗಿಸಿದ್ದಾಳೆ. ಜೊತೆಗೆ ಕರ್ನಾಟಕವನ್ನಾಳಿದ ಪ್ರಾಚೀನ ರಾಜಮನೆತನಗಳಲ್ಲಿ ಸಿಗುವ ರಾಣಿಯರಲ್ಲೇ ಯಾರೂ ಬಳಸದಷ್ಟು ಸವತಿ ಮತ್ಸರದ ಪದಗಳನ್ನು ಇವಳು ಬಳಸಿರುವುದು ವಿಶೇಷ. ಅವೆಲ್ಲವೂ ಶಾಸನೋಕ್ತವಾಗಿವೆ. ಬಲ್ಲಾಳನ ಅರ್ಧಾಂಗಲಕ್ಷ್ಮಿಯೂ ಸವತಿ ಮುಖದರ್ಪಣೆಯೂ, ಸವತಿಯರೆನ್ನ ಸಮ್ಮಟ್ಟಿಗೆಯೂ, ಎಂಬ ಪದಗಳು ಶಾಸನಗಳಲ್ಲಿ ಕಾಣಸಿಗುತ್ತವೆ. ಈಕೆಯನ್ನು ಶಾಸನದಲ್ಲಿ ಕವಿ

"ಇಂಗಡಲ ಸುತೆಯ ಪೆಂಪು ಭಂಗಿಸುವ
ವಿಲಸದ ಮುದ್ರಿಜಾತೆಯ ಸೊಬಗಂ ।
ಭಂಗಿಸುವ ಸೊಗಸು ತನಗೆಸಲೇಂಗಳ
ಬಣ್ಣಿಸುವರಳವೆ ಒಮ್ಮೆಲೆ ಮಧುವಾ ॥"

ಎಂದು ಬಮ್ಮಲೆಯನ್ನು ವರ್ಣಿಸಿದ ಶಾಸನದ ಲಿಪಿಕಾರ ವೀರ ಬಲ್ಲಾಳನ ಬದುಕಿನಲ್ಲಿ ಆಕೆ ವಹಿಸಿದ ಮಹತ್ವವನ್ನು ತಿಳಿಸಲು ಪ್ರಯತ್ನಿಸಿದ್ದಾನೆ.

ವೀರಬಲ್ಲಾಳನ ಮತ್ತೋಬ್ಬ ರಾಣಿಯಾದ ಪಟ್ಟಮಹಾದೇವಿಯಾದ ಚೋಳ ಮಹಾದೇವಿ ಕಂಬಾಳಿನ ಅಧಿಕಾರದಲ್ಲಿದ್ದಳೆಂದು ಕೆಂಬಾಳುಶಾಸನ ತಿಳಿಸುತ್ತದೆ.[90] ದ್ವಿತೀಯ ರಾಣಿ ಪಿರಿಯರಸಿ ಪದ್ಮಲಾದೇವಿ ಪಟ್ಟಮಹಾದೇವಿ ಪೊಸವಡಂಗಿಲೆಯನ್ನು ಸುಧರ್ಮದಿಂದ ರಕ್ಷಿಸುತ್ತಿದ್ದಳೆಂದು ಶಾಸನ ಹೊಗಳಿದೆ.[91] ಚಿಕ್ಕತಾಯಿ ಬುಕ್ಕತಾಯಿ ಎಂಬ ರಾಣಿಯರು ನಿರುವಾರಿನ ಆಡಳಿತವನ್ನು,[92] ಮತ್ತೋರ್ವರಾಣಿ ಪಿರಿಯರಸಿ ಉಮಾದೇವಿ ದೋರಸಮುದ್ರದಲ್ಲಿ ಆಳುತ್ತಿದ್ದರು.[93]

ಕೆಲವೊಮ್ಮೆ ವಿಧವೆ ರಾಣಿಯರೂ ಸಹ ರಾಜ್ಯದ ಉಳಿಯುವಿಕೆಗೋಸ್ಕರ ತಮ್ಮ ಅಪ್ರಾಪ್ತ/ಪ್ರಾಪ್ತ ಮಕ್ಕಳನ್ನು ಮುಂದಿಟ್ಟುಕೊಂಡು ಇಲ್ಲವೆ, ಸ್ವತಃ ತಾವೇ ರಾಜ್ಯ ಸೂತ್ರಗಳನ್ನು ವಹಿಸಿಕೊಳ್ಳುವುದರ ಮೂಲಕ ರಾಜಕೀಯ ಪ್ರವೇಶ ಮಾಡಿದ್ದಾರೆ. ಈ ರೀತಿಯ ವಿವರಣೆಗಳು ನಮಗೆ ಬಾದಾಮಿ ಚಾಲುಕ್ಯರ ಕಾಲದಲ್ಲಿ ದೊರೆಯುತ್ತವೆ. ಕ್ರಿ.ಶ. 645ರ ಹೊತ್ತಿಗೆ ಬಾದಾಮಿ ಚಾಲುಕ್ಯರ ಚಂದ್ರಾದಿತ್ಯನ ರಾಣಿ ವಿಜಯಮಹಾದೇವಿ ಸ್ವತಃ ತಾನೇ ರಾಜ್ಯಸೂತ್ರಗಳನ್ನು ಧರಿಸಿದ ಬಗ್ಗೆ ಕ್ರಿ.ಶ. 659ರ ನೆರೂರು ತಾಮ್ರಪಟ 'ಸ್ವರಾಜ್ಯೇ ಪಂಚಮ ಸಂವತ್ಸರೇ' ಎಂದು ಇವಳ ಆಡಳಿತವನ್ನು ಸೂಚಿಸಿದೆ. ಇನ್ನೂ ಕೆಲವೊಮ್ಮೆ ರಾಜ್ಯದ ಯುವ ರಾಜ, ರಾಜಕುಮಾರಿಯರೂ ರಾಜ್ಯಭಾರ ನಡೆಸಿದ್ದಾರೆ. ಇದಕ್ಕೆ ನಿದರ್ಶನವೆಂದರೆ ಸತ್ಯಾಶ್ರಯ ಇರಿವ ಬೆಡಂಗನ ಮಗಳು ಮಹಾದೇವಿ ಈಕೆ ಮರವೊಳಲನ್ನು ಅಳಿದ ವಿಷಯ[94], ಚಾಲುಕ್ಯ ಪೆರ್ಮಾಡಿಯ ಮಗಳು ಪಂಪಾದೇವಿಯರ ರಾಜ್ಯಭಾರದ ಉಲ್ಲೇಖಗಳು[95] ಇವೆ. ಮತ್ತೆ ಕೆಲವು ಬಾರಿ ರಾಜನ ಸಹೋದರಿಯರೂ ರಾಜ್ಯಭಾರದಲ್ಲಿ ತೊಡಗಿದ್ದರೆಂಬುದಕ್ಕೆ ಅಹವಮಲ್ಲ ಮೊದಲನೆಯ ಸೋಮೇಶ್ವರನ ಮಗಳೂ ಇಮ್ಮಡಿ ಸೋಮೇಶ್ವರನ ತಂಗಿಯಾದ ಸುಗ್ಗಲಾದೇವಿಯರು.[96]

---

[90] ಎ.ಕ. V, ಚನ್ನರಾಯಪಟ್ಟಣ, ಶಾ.ಸಂ. 205, ಕೆಂಬಾಳು, ಕ್ರಿ.ಶ. 1200.

[91] ಎ.ಐ.ಎ ix-I, 330, ಹಿರೇಹಡಗಲಿ (ತಾ) ಹಡಗಲಿ, ಕ್ರಿ.ಶ. 1212.

[92] ಎ.ಆರ್.ಎಸ್.ಐ. ಇ, 1928–29, ಪುಟ–46.

[93] ಎ.ಕ. V ಅರಸೀಕೆರೆ, ಶಾ.ಸಂ. 85, ಅರಸೀಕೆರೆ, ಕ್ರಿ.ಶ. 1190.

[94] ಬಿ.ಕೆ.ಐ1-i-61, ಮರೊಳಿ (ತಾ) ಹುನಗುಂದ, ಕ್ರಿ.ಶ. 1024.

[95] ಎ.ಕ. iv, ಹುಣಸೂರು, ಶಾ.ಸಂ. 50, ಕುಡಕೂರು ಕ್ರಿ.ಶ. 997.

[96] ಐ.ಎನ್.ಕೆ. ನಂ. 5, ನಿಡಗುಂದಿ, (ಜಿ) ಬಿಜಾಪುರ, ಕ್ರಿ.ಶ. 1071.

ವಿಜಯನಗರ ಸಾಮ್ರಾಜ್ಯದಲ್ಲೂ ರಾಣಿಯರೂ ಸ್ವತಂತ್ರ್ಯವಾದ ಆಡಳಿತವನ್ನು ನಡೆಸುತ್ತಿದ್ದರು, ಸಂಗಮ, ಸಾಳ್ವ, ತುಳುವ ಮತ್ತು ಅರವೀಡು ಮನೆತನಗಳಲ್ಲಿನ ರಾಣಿಯರು ರಾಜಕೀಯದಲ್ಲೂ ನಿಪುಣರಾಗಿದ್ದು, ರಾಜನ ಆಳ್ವಿಕೆಯೊಂದಿಗೆ ಮಾತ್ರವಲ್ಲದೆ, ತಾವೇ ಸ್ವತಃ ಆಡಳಿತ ನಿರ್ವಹಿಸುತ್ತಿದ್ದರು. ಸಾಳ್ವಮನೆತನದ ತಿಮ್ಮರಾಜನ ರಾಣಿ ಹರಿಮಾ, ಈಕೆ ತಮಿಳು ರಾಜ್ಯದ ಆಡಳಿತವನ್ನು ನೋಡಿಕೊಳ್ಳುತ್ತಿದ್ದಳು.[97]

ಕೃಷ್ಣದೇವರಾಯನ ಮೂರನೆಯ ರಾಣಿಯಾದ ಒರಿಸ್ಸಾದ ರಾಜಪುತ್ರಿ ಜಗನ್ಮೋಹಿನಿಯು ಆಂಧ್ರ ಪ್ರದೇಶದ ಉಸ್ತುವಾರಿಯನ್ನು ನೋಡಿಕೊಳ್ಳುತ್ತಿದ್ದಳು.[98]

ವಿಜಯನಗರ ತುಳುವ ಸಾಮ್ರಾಜ್ಯದ ಆಡಳಿತಾವಧಿಯಲ್ಲಿ ಸಾಮ್ರಾಜ್ಯದ ಗಡಿಯೂ ತುಂಗಭದ್ರೆಯಿಂದ ಪಶ್ಚಿಮಕ್ಕೆ ಇದ್ದ ದೇಶವನ್ನೆಲ್ಲಾ ಆವರಿಸಿತ್ತು. ಈ ಬಲಿಷ್ಠ ರಾಜ್ಯದ ಪ್ರಭಾವ ದಕ್ಷಿಣದ ಶ್ರೀಲಂಕದವರೆವಿಗೂ, ಈಶಾನ್ಯದಲ್ಲಿ ತೆಲಂಗಾಣ ಒರಿಯದವರೆಗೂ ಹರಡಿತ್ತು. ಇಷ್ಟು ವಿಸ್ತಾರವಾದ ರಾಜ್ಯದ ರಾಜಕೀಯದಲ್ಲಿ ರಾಣಿಯರು ರಾಜರೊಂದಿಗೆ ಪಾಲ್ಗೊಳ್ಳುತ್ತಿದ್ದರು. ರಾಣಿಯರು ರಾಜರೊಂದಿಗೆ ಯುದ್ದದಲ್ಲಿ ಪಾಲ್ಗೊಳ್ಳುತ್ತಿದ್ದರು ಎಂಬುದನ್ನು ನ್ಯೂನಿಜ್‌ನ ವಿವರಣೆ ನಂಜುಂಡಕವಿಯ ರಾಮನಾಥಚರಿತೆ, ವಿರುಪಾಕ್ಷ ಪಂಡಿತನ ಚೆನ್ನಬಸವ ಪುರಾಣದಲ್ಲಿಯೂ ಕಾಣಬಹುದು.[99] ಕೃಷ್ಣದೇವರಾಯನ ರಾಣಿಯರಾದ ಚಿನ್ನಾದೇವಿ ಮತ್ತು ತಿರುಮಲಾದೇವಿಯರು ಅನೇಕ ಯುದ್ಧದಲ್ಲಿ ಪಾಲ್ಗೊಂಡಿದ್ದರು.[100] ಇದನ್ನು ಈಗಾಗಲೇ ರಾಜರೊಂದಿಗೆ ರಾಣಿಯರ ಕೂಡಿಕೆ ಆಡಳಿತ ವಿಭಾಗದಲ್ಲಿ ವಿವರಿಸಿ ವಿಶ್ಲೇಷಿಸಲಾಗಿದೆ. ಹೀಗೆ ರಾಣಿಯರ ಸ್ವತಂತ್ರಾಡಳಿತತೆ ಮತ್ತು ಅವರ ವಿರೋಚಿತ ವರ್ತನೆಗೆ ಕನ್ನಡಿ ಹಿಡಿದಿದೆ.

---

[97] ಎಸ್.ವೈ, ಸೋಮಶೇಖರ್, **ವಿಜಯನಗರ ಕಾಲದ ಸೈನ್ಯವ್ಯವಸ್ಥೆ, ಮತ್ತು ಯುದ್ಧನೀತಿ,** ಪುಟ–39, (ಪಿ.ಎಚ್.ಡಿ ನಿಬಂಧ). ಕನ್ನಡ ವಿಶ್ವವಿದ್ಯಾಲಯ, ಹಂಪಿ. 1999.

[98] ಎಸ್. ಚಿನ್ನಸ್ವಾಮಿ, ಸೋಸಲೆ, **ಸಾಮ್ರಾಜ್ಯ ಮತ್ತು ಸಂಸ್ಥಾನ,** ಪುಟ–76, ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. 2004.

[99] ಶ್ರೀಕಂಠಯ್ಯ, **ವಿಜಯನಗರ ಕಾಲದ ಕನ್ನಡ ಸಾಹಿತ್ಯದಲ್ಲಿ ಜನ ಜೀವನ ಚಿತ್ರ,** ಪುಟ–146, ಗೀತಾಬುಕ್‌ಹೌಸ್, ಮೈಸೂರು. 1983,

[100] ಎಸ್.ವೈ, ಸೋಮಶೇಖರ್, **ವಿಜಯನಗರ ಕಾಲದ ಸೈನ್ಯವ್ಯವಸ್ಥೆ ಮತ್ತು ಯುದ್ಧನೀತಿ,** ಪುಟ–1, ಕನ್ನಡ ವಿಶ್ವವಿದ್ಯಾಲಯ, ಹಂಪಿ. 1999.

**ರಾಣಿಯರ ಆಡಳಿತ ವರ್ಗ**

ರಾಜಕುಟುಂಬದ ರಾಣಿಯರು ಆಡಳಿತದಲ್ಲಿ ಪಾಲ್ಗೊಳ್ಳುತ್ತಿದ್ದ ಬಗ್ಗೆ ಈಗಾಗಲೇ ತಿಳಿದುಕೊಂಡಿರುವ ನಾವು ಅವರುಗಳು ತಮ್ಮ ಆಡಳಿದ ಪ್ರದೇಶದಲ್ಲಿ ಸುವ್ಯವಸ್ಥಿತ ಆಡಳಿತಕ್ಕೆ ಸಹಾಯವಾಗುವಂತೆ ಆಡಳಿತಗಾರರನ್ನು, ಮಂತ್ರಿಗಳನ್ನು ನೇಮಿಸಿಕೊಳ್ಳುತ್ತಿದ್ದರು. ಇದು ರಾಜ ಸಚಿವ ಸಂಪುಟಕ್ಕೆ ಸಮನಾಗಿರುತ್ತಿತ್ತು. ರಾಣಿಯರು ಸ್ವತಃ ಮಹಾಮಂಡಲ, ಭತ್ತಗ್ರಾಮ, ಪ್ರಾಂತ್ಯಗಳಲ್ಲಿ ಅಧಿಕಾರವನ್ನು ಹೊಂದಿರುತ್ತಿದ್ದರು. ಇವರ ಕಾರ್ಯಭಾರದಲ್ಲಿ ಮಂತ್ರಿಗಳು ಸಾಮಂತರು, ನಿಯೋಗದವರು ಸಹಕರಿಸುತ್ತಿದ್ದರು. ತಮ್ಮ ರಾಜ್ಯದ ಸುಭದ್ರತೆ ವ್ಯವಸ್ಥಿತ ಆಡಳಿತಕ್ಕಾಗಿ ಇವರೊಡನೆ ರಾಣಿಯರು ಒಳ್ಳೆಯ ಸೌಹಾರ್ದಯುತ ಸಂಬಂಧವನ್ನು ಇರಿಸಿಕೊಳ್ಳಬೇಕಿತ್ತು. ರಾಣಿಯರು ಅವರನ್ನು ಸಂಭೋದಿಸುತ್ತಿದ್ದ ಪದ್ಧತಿ, ಆಧರಿಸುತ್ತಿದ್ದ ವಿಧಿವಿಧಾನಗಳನ್ನು ಗಮನಿಸಿದರೆ ಆಡಳಿತದಲ್ಲಿ ಅವರೀರ್ವರ ನಡುವಿನ ಅನ್ಯೋನ್ಯ ಸಂಬಂಧವಿದ್ದ ಬಗ್ಗೆ ಅರಿವಾಗುತ್ತದೆ.

**ರಾಣಿಯರ ಅಧೀನದಲ್ಲಿ ಸಾಮ್ರಾಜ್ಯ ನಿರ್ವಹಣೆ**

ಒಂದು ವೇಳೆ ರಾಣಿಯರ ಆಡಳಿತ ವಿಸ್ತಾರವಾಗಿರುತ್ತಿದ್ದರೆ ಅವರು ತಮ್ಮ ಕೈಕೆಳಗೆ ಸಾಮಂತರು, ಮಂಡಳೇಶ್ವರರು, ನಾಳ್ಗಾವುಂಡರು, ಗಾವುಂಡರು ಎಂಬ ಅನೇಕ ಜನ ಪ್ರಮುಖ ಅಧಿಕಾರಿಗಳನ್ನು ನೇಮಿಸಿಕೊಂಡು ಸಾಮ್ರಾಜ್ಯದ ಆಡಳಿತದಲ್ಲಿ ಸಹಕರಿಸುತ್ತಿದ್ದರು. ಇಂತಹ ಅಧಿಕಾರದ ಬಗ್ಗೆ ಮಾಹಿತಿಗಳು ಕಡಿಮೆ. ಆದರೂ ಕೋರಲಹಳ್ಳಿಯ ಶಾಸನವೊಂದು ಚಾಲುಕ್ಯ ಮನೆತನದ ರಾಣಿ ಅಕ್ಕಾದೇವಿಯು ತನ್ನ ಕೈಕೆಳಗೆ ಮಹಾಸಾಮಂತ ಅಜ್ಜರಭೂಪನಿದ್ದುದನ್ನು ತಿಳಿಸುತ್ತದೆ.[101]

ಚಾಲುಕ್ಯ ಭೂಲೋಕಮಲ್ಲನ ಹಿರಿಯರಾಣಿ ಪಟ್ಟಮಹಾದೇವಿಯ ಮನೆವರ್ಗಡೆ ದಂಡನಾಯಕರನಾದ ಶ್ರೀಧರಯ್ಯ ಅವರವಾಡಿ 700, ಬೋಧನ 700ನ್ನು ಸಾಮಂತ ತನದಿಂದಲೇ ಪಟ್ಟಮಹಾದೇವಿಗೆ ಸೇರಿದ ರಾಜ್ಯದಲ್ಲಿ ಸಾಮಂತಿಕೆ ಅಧಿಕಾರವನ್ನು ನಡೆಸುತ್ತಿದ್ದನು.[102] ಇನ್ನೂ ಚಾಲುಕ್ಯ ವಂಶದ ರಾಜ ವಲ್ಲಭನ ರಾಣಿ ಪಿರಿಯಕೇತಲದೇವಿಯ ಮಹಾ ಸಾಮಂತ ಚೋಕರಸ.

---

[101] ಬಿ.ಕೆ.ಐ. 1–1–1986, ಕೋರಹಳ್ಳಿ (ತಾ) ಮುಂಡರಗಿ ಕ್ರಿ.ಶ. 1050.

[102] ಐ.ಎಸ್.ಐ. ನಂ. 30, ಕರಾಡಖೇಡ (ತಾ) ದೆಗಳೂರು ಕ್ರಿ.ಶ.

ಈಕೆ ಸಿರಗುಪ್ಪೆ, ಕೊಳನೂರು, ಭತ್ತಗ್ರಾಮಗಳಲ್ಲಿ ಆಡಳಿತ ನಡೆಸುತ್ತಿದ್ದಾಗ ಸಾಮಂತಿಕೆಯನ್ನು ನಿರ್ವಹಿಸುತ್ತಿದ್ದನು.[103] ಆರನೇ ವಿಕ್ರಮಾದಿತ್ಯನ ರಾಣಿ ಚಂದಲಾದೇವಿ ಅಲಂದೆ ಸಾಸಿರದ ಪ್ರದೇಶವನ್ನು ಆಳುವಾಗ ಆಕೆಯನ್ನು ಅಲಂದೆಯ ಶಾಸನ ಸಾಮಂತ ಸೀಮಂತಿನಿ ಎಂದಿದೆ.

ಹೊಯ್ಸಳ ವಿಷ್ಣುವರ್ಧನನ ಮಡದಿ ಬಮ್ಮಲದೇವಿ ಅಸಂಧಿ 500ನ್ನು ಆಳುತಿದ್ದಾಗ ಅವಳ ಪಾದ ಪದ್ಮೋಪಜೀವಿ ಮಹಾಸಾಮಂತ ಎರಕಗಾವುಂಡ ಕಿಸೂರು ಹಾರುವನಹಳ್ಳಿಯಮಂ ತ್ರಿಬೋಗವಾಗಿಆಳುತ್ತಿದ್ದರು.[104] ಎಂಬ ಉಲ್ಲೇಖವನ್ನು ಹಾರನಹಳ್ಳಿ ಶಾಸನ ತಿಳಿಯಪಡಿಸುತ್ತದೆ.

ರಾಣಿಯರ ಕೈಕೆಳಗೆ ಸಾಮಂತ ಅಧಿಕಾರಿ ವರ್ಗದಲ್ಲಿ ಮಂಡಳೇಶ್ವರ ಪ್ರಭುಗಳು ಸಹ ರಾಣಿಯರ ಆಡಳಿತದಲ್ಲಿ ಸಹಕರಿಸುತ್ತಿದ್ದರು ಮತ್ತು ಕಾರ್ಯಭಾರ ನಿರ್ವಹಿಸುತ್ತಿದ್ದ ವಿಷಯವನ್ನು ಶಾಸನಗಳು ಪುಷ್ಠಿಕರಿಸುತ್ತವೆ. ಚಾಲುಕ್ಯರ ಆರನೆಯ ವಿಕ್ರಮಾದಿತ್ಯನ ರಾಣಿ ಪಿರಿಯರಸಿ ಚಂದಲಾದೇವಿ ಪಾದಪ್ಮೋಪಜೀವಿ ಶ್ರೀಮನ್ಮಹಾಮಂಡಳೇಶ್ವರ ಬಿಬ್ಬರಸ 'ಅಲಂದೆನಾಡಗೊಂಕಣ ನೂರೊಪ್ಪತ್ತುರುವತ್ತು ಬಾಡ ವಾಪ್ಪತ್ಕೀಯ ಮಂಡಳಮಂ ಆಳುತ್ತಿದ್ದನೆಂದು ಅಲಂದೆ ಶಾಸನ ವಿವರಿಸಿದೆ.[105] ಇದೇ ಚಾಲುಕ್ಯನ ಮತ್ತೊರ್ವ ರಾಣಿ ಮಲಯವತಿ ಮಹಾಮಂಡಳೇಶ್ವರ ಲೋಕರಸನ ಉಲ್ಲೇಖ ದಿಗ್ಗಾ ವಿಶಾಸನಗಳಲ್ಲಿವೆ.[106]

ಜೊತೆಗೆ ಸಾಮಂತ, ಪ್ರಧಾನಿ ದಂಡ ನಾಯಕ, ಮನೆವರ್ಗಡೆ, ತಂತ್ರಪಾಲ ಮುಂತಾದ ಅಧಿಕಾರಿಗಳು ಇದ್ದು ಆಡಳಿತದಲ್ಲಿ ಭಾಗಿಗಳಾಗಿದ್ದರೆಂಬುದನ್ನು ಶಾಸನಗಳು ಉಲ್ಲೇಖಿಸಿ ಅವರನ್ನು ನಿಯೋಗದವರೆಂದು ಕರೆಯಲಾಗಿದೆ. ಚಾಲುಕ್ಯರ ಅಕ್ಕಾದೇವಿಗೆ ಸಂಬಂಧಿಸಿದ ಸೂಡಿಯ ಶಾಸನದಲ್ಲಿ "ಶ್ರೀಮನ್ ಮನೆವರ್ಗಡೆ ಕಾಳಿದಾಶಯ್ಯ ತಂತ್ರಪಾಲಮಿಳ್ಳಯ, ಚಿಟ್ಟಿಮಯ್ಯ, ಪ್ರಧಾನದೆಮ್ಮಣ್ಣ ಅಳಿಯಂ ಚಂದಿಮಯ್ಯ, ಅಡಪದ ಚಾವುಂಡರಾಯ ತಂತ್ರದ ಸೇನಬೋವಂ ದಾಸಿಮಯನಂತು ಸಮಸ್ತ ಪ್ರಧಾನರುಮಂ ಶ್ರೀಮತ್ ನಾಡ ಪೆರ್ಗಡೆ ನಾಗದೇವಯ್ಯ ಪ್ರಮುಖಕರಣ ಮುಮಿಳ್ಪು" ಎಂಬ ಉಲ್ಲೇಖವಿರುವುದು ಗಮನಾರ್ಹವಾದ ವಿಷಯಗಳಾಗಿವೆ. ಇಲ್ಲಿ ಸಮಸ್ತ ಪ್ರಧಾನರು ಪ್ರಮುಖ ಕರಣರು ಎಂಬ ವರ್ಗಗಳ ಉಲ್ಲೇಖದ ಸೂಚನೆಗಳಿವೆ. ಅವರ ಕೆಲಸ ಕಾರ್ಯಗಳ ಬಗ್ಗೆ ನಿರ್ದಿಷ್ಟತೆ

---

103 ಎ.ಐ.ಎ IX-I-159, ಸಿರಗುಪ್ಪಾ, (ತಾ) ಬಳ್ಳಾರಿ ಕ್ರಿ.ಶ. 1092.

104 ಎ.ಕ. V, ಅರಸೀಕೆರೆ ಶಾ.ಸಂ. 124, ಹಾರನಹಳ್ಳಿ, ಕ್ರಿ.ಶ. 1060.

105 ಜೈಸ್.ಇಂ.ಪು 252, ಅಲಂದೆ, ಕ್ರಿ.ಶ. 1099.

106 ಎ.ಡಿ.ಎ.ಎಸ್. ದಿಗ್ಗಾವ, 17, ಜಿ. ಗುಲಬರ್ಗಾ, ಕ್ರಿ.ಶ. 1107.

ಇಲ್ಲದೇ ಹೋದರೂ ರಾಣಿಯರ ಆಡಳಿತದಲ್ಲಿ ವಿವಿಧ ವರ್ಗಗಳಲ್ಲಿ ಸಹಕರಿಸುತ್ತಿದ್ದರೆಂಬುದನ್ನು ಸತ್ಯ ಸಂಗತಿಯಾಗಿದೆ.

ಇನ್ನೂ ರಾಣಿಯರ ಪಾದಪದ್ಮೋಪಜೀವಿಗಳಾಗಿದ್ದ, ಅಧಿಕಾರಿಗಳು ಕೆಲವು ಪ್ರದೇಶಗಳಲ್ಲಿ ಕಾರ್ಯಬಾರ ಮಾಡುತ್ತಿದ್ದ ಬಗ್ಗೆ ವಿವರಗಳು ಪ್ರಾಪ್ತವಾಗಿವೆ. ರಾಷ್ಟ್ರಕೂಟರ ರಾಜ ಅಮೋಘವರ್ಷನ ಮಗಳು, ಎರಗಂಗನ ವಕ್ಷಸ್ಥಲ ನಿವಾಸಿನಿ ಅಂದರೆ ರಾಣಿಯಾದ ರೇವಕ ನಿಮ್ಮಡಿ ಎಡದೊರೆ ತುಳುವ ಸಂಗಳನ್ನಾಳುತಿದ್ದಾಗ ಅವಳ ಪಾದ ಜೀವಿದೋಸಿ ಎಂಬುವನು ಕೆಲವು ಗ್ರಾಮಗಳ ಅಧಿಕಾರವನ್ನು ನಿರ್ವಹಿಸುತ್ತಿದ್ದನು.[107] ಚಾಲುಕ್ಯ ಭೂಲೋಕಮಲ್ಲನ ಹಿರಿಯರಾಣಿ ಪಟ್ಟಮಹಾದೇವಿಯರ ಮನೆವರ್ಗಡೆ ದಂಡ ನಾಯಕಂ ಶ್ರೀಧರಯ್ಯಂಗಳುಂ ಅವರವಾಡಿ 700 ಬೋಧನ, 700 ಸಾಮಂತಿಕೆಯನ್ನು ಆಳುತಿದ್ದನೆಂದು ಕರಾಡಖೇಡದ ಶಾಸನವೊಂದು ತಿಳಿಸಿದೆ.[108] ವಿಕ್ರಮಾದಿತ್ಯನ ರಾಣಿ ಮಲಯವತಿಯು ಆಡಳಿತ ವರ್ಗದ ಭಾನುದೇವ ಧಾರವಾಡದ ಗ್ರಾಮದ ಅಧಿಕಾರಿಯಾಗಿದ್ದನೆಂದು ತಿಳಿಯುತ್ತದೆ.[109]

ಹೊಯ್ಸಳ ವೀರಬಲ್ಲಾಳನ ಹಿರಿಯರಾಣಿ ಅಭಿನವ ಕೇತಲದೇವಿ ರಾಜ್ಯಭಾರ ಮಾಡುತಿದ್ದಾಗ ಆಕೆಯ ಪಾದಪದ್ಮೋಜೀವಿ, ಮಹಾಪ್ರಧಾನವಾದ ಕುಮಾರ ಮದವರ್ದಾಗಾನ ನಾಯಕ ಮತ್ತು ಕೇಶವ ದಣ್ಣಾಯಕರು ಕುಮಾರ ನಾಡಯೇತಾಧಿಷ್ಟಿತ ಮಾಡಿ ಸುಖದಿಂದನಾಳುತಿರ್ದ' ಎಂದು ಕುಂದೂರಿನ ಶಾಸನ ಹೇಳಿದೆ.[110] ಇನ್ನೊಬ್ಬ ಪಾದಪದ್ಮಜೀವಿಯಾದ ತೊದಪಿಳ್ಳೆದಂಡನಾಯಕ ಬೆಳಗುವರ್ತಿಯಲ್ಲಿ ನಾಡಾಧಿಕಾರಿಯಾಗಿ ಆಳ್ವಿಕೆ ನಡೆಸುತ್ತಿದ್ದನು.[111]

ಅಂತೆಯೇ ರಾಣಿಯರ ಆಡಳಿತದಲ್ಲಿ, ರಾಜ್ಯವರ್ದನೆಯಲ್ಲಿ ಮಂತ್ರಿಗಳು ಪರಿಶ್ರಮವಹಿಸುತ್ತಿದ್ದರು. ಪೆರ್ಮಾಡಿಯ ರಾಣಿಯಾದ ಮಲ್ಲಣದೇವಿಯ ಮಂತ್ರಿ ತಿಳಕಬಾಲಚಂದ್ರ, ಹೊಯ್ಸಳ ವೀರಬಲ್ಲಾಳನ ಹಿರಿಯರಾಣಿ ಉಮಾದೇವಿಯರ 'ರಾಜ್ಯ ಸಮುದ್ದರಣನುಮಪ್ಪ

---

107 ಬಿ.ಕೆ.ಐ 1-i - ನಂ.7 ಕೆಸರುಬಾವಿ (ತಾ), ಹುನಗುಂದ, ಕ್ರಿ.ಶ. 837.

108 ಐ.ಎನ್.ಡಿ. ನಂ–30, ಕರಡಾಖೇಡ (ತಾ) ಡೆಗಳೂರು.

109 ಧಾರವಾಡ ತಾಲ್ಲೂಕು ಸ್ರಚಿ, ನಂ–33, ಧಾರವಾಡ, (ತಾ) ಧಾರವಾಡ ಕ್ರಿ.ಶ. 1117.

110 ಎ.ಕ. iv, ಹೆಗ್ಗಡದೇವನಕೋಟೆ, 23, ಕುಂದೂರು, ಕ್ರಿ.ಶ 1218.

111 ಎ.ಕ. VII, ಹೊನ್ನಾಳಿ, 45, ಬೆಳಗುತ್ತಿ, ಕ್ರಿ.ಶ. 1175.

ಶ್ರೀ ಮನ್ಮಹಾಪ್ರಧಾನಂ ಕುಮಾರ ಪಂಡಿತ ಎಂಬ ವಿಷಯ ಕಣಿಕಟ್ಟಿಶಾಸನದಲ್ಲಿದೆ.[112] ಇವರು ರಾಣಿಯರ ರಾಜ್ಯಾಡಳಿತದಲ್ಲಿ ಬೆನ್ನೆಲುಬಾಗಿ ನಿಂತು ರಾಜ್ಯದ ಸಮಸ್ತ ಪ್ರಗತಿಗೆ ಸಹಕರಿಸುತ್ತಿದ್ದರು. ಹೆಬ್ಬಾಳದಲ್ಲಿ ಸ್ವತಂತ್ರ ಆಡಳಿತವನ್ನು ನಿರ್ವಹಿಸುತಿದ್ದ ಭೂಜಬ್ಬರಸಿಗೆ ಕನ್ನಯ್ಯನೆಂಬ ಪೆರ್ಗಡೆ (ಅಧಿಕಾರಿ) ಇದ್ದು ರಾಜ್ಯಾಡಳಿತದಲ್ಲಿ ಕೆಲಸ ಕಾರ್ಯಗಳನ್ನು ನಿರ್ವಹಿಸುತ್ತಿದ್ದನು.[113]

ತ್ರೈಲೋಕ್ಯ ಮಲ್ಲನ ರಾಣಿ ಕೇತಲದೇವಿಯು ಅಗ್ರಹಾರ, ಪೊನ್ನವಾಡದ ಆಡಳಿತವನ್ನು ನಿರ್ವಹಿಸುತಿದ್ದಾಗ, ಅವಳಿಗೆ ಆಡಳಿತದಲ್ಲಿ ಸಲಹೆ ಸೂಚನೆಗಳನ್ನು ನೀಡಲು ಚೂಡಾಮಣಿ ಚಂಕಿರಾಜನಿದ್ದಂತೆ[114] ಶಾಸನ ತಿಳಿಸಿದೆ. ತ್ರಿಭುವನ ಮಲ್ಲನ ಪಟ್ಟಮಹಾದೇವಿ ಮಲಯವತಿಯ ದಂಡನಾಯಕನಾಗಿ ಲೋಕರಸನು ಆಡಳಿತದಲ್ಲಿ ನಿಪುಣರಾಗಿದ್ದು ಮಲಯವತಿಯ ಮಂತ್ರಿಯಾಗಿದ್ದನೆಂದು ಶಾಸನ ಉಲ್ಲೇಖಿಸಿದೆ.[115]

ಕದಂಬ ಜಯಕೇಶಿಯ ಮಡದಿ ಮೈಳಲಾದೇವಿಯ ಮಹಾಪ್ರಧಾನ ದಂಡನಾಯಕ ಪಸಾಯಿತ ಮನೆವರ್ಗಡೆಯಾದ ಸಿಂಗಮರಸ, ಲಕ್ಕರಸರ ಉಲ್ಲೇಖಗಳು ಶಾಸನದಲ್ಲಿವೆ.[116] ಹಾಗೆಯೇ ಮೈಳಲಾದೇವಿಯ ದಂಡನಾಯಕ ಶ್ರೀಕರಣದ ಸಿಂಗಣ್ಣನನ್ನು ಮೈಳಲಾದೇವಿ ಕಾಲದಲ್ಲಿ ಯಶಸ್ವಿಮಂತ್ರಿಯಾಗಿ ಕಾರ್ಯನಿರ್ವಹಿಸಿದನು.[117]

ಹೀಗೆ ಅಧಿಕಾರ ನಿರ್ವಹಿಸುತ್ತಿರುವ ರಾಣಿಯರ ಕೈಕೆಳಗೆ ಸಾಮಂತ ಮಂಡಳೇಶ್ವರ ಮುಂತಾದ ಅಧಿಕಾರವರ್ಗಗಳು ಇರುತ್ತಿದ್ದವು. ಸೂಡಿಯ ಶಾಸನದಲ್ಲಿರುವುದನ್ನೆ ಗಮನಿಸಿದರೆ ಪೆರ್ಗಡೆ ನಾಗದೇವಯ್ಯ, ಸೇನಭೋವರೇವದಾಸಯ್ಯ, ಧರ್ಮಾಧ್ಯಕ್ಷ ಮಾಧವ, ಇವರುಗಳು ಕರಣವರ್ಗಕ್ಕೆ ಸಂಬಂಧಿಸಿದ ಅಧಿಕಾರಿಗಳೆಂದೂ ಸ್ಪಷ್ಟವಾಗುತ್ತದೆ. ರಾಜಕೀಯದಂತೆ ಧಾರ್ಮಿಕ ವಲಯಗಳಿಗೂ ಸೇರಿದಂತೆ, ಮಹತ್ವದ ಪ್ರಸಂಗಗಳಲ್ಲಿ ರಾಣಿ ಈ ಸಮಸ್ತ ಅಧಿಕಾರವರ್ಗದವರನ್ನು ಕೂಡಿಕೊಂಡು ಅನುಮತಿಯನ್ನು ಪಡೆದು ಕಾರ್ಯೋನ್ಮುಖಳಾಗುತ್ತಿದ್ದಳೆಂಬುದು ವಿದಿತವಾದ ಅಂಶ.

---

[112] ಎ.ಕ. v, ಅರಸಿಕೆರೆ, 50, ಕಣಿಕಟ್ಟಿ, ಕ್ರಿ.ಶ. 1200.

[113] ಎ.ಇ. iv, ನಂ–50, ಹೆಬ್ಬಾಳು ತಾ, ಶಿರಹಟ್ಟಿ, ಕ್ರಿ.ಶ. 975.

[114] ಐ.ಎ, 19, ಪುಟ–190, ಹೊನ್ನವಾಡ ತಾ, ಬಿಜಾಪುರ, ಕ್ರಿ.ಶ. 1054.

[115] ಎ.ಐ. ಎಸ್. ನಂ 17, ದಿಗ್ಗಾವ, ಕ್ರಿ.ಶ. 1107.

[116] ಎ.ಇ. xiii, ನಂ.28, ನರೇಂದ್ರ (ತಾ) ಧಾರವಾಡ, ಕ್ರಿ.ಶ. 1125.

[117] ದಾ.ಜಿತಾ. ಶಾಸೂ–65, ಸಿಂಗನಹಳ್ಳಿ (ತಾ) ಧಾರವಾಡ, ಕ್ರಿ.ಶ. 1123.

**ರಾಣಿಯರು ಮತ್ತು ಮಂತ್ರಿಗಳ ಸಂಬಂಧ**

ರಾಣಿಯರು ರಾಜಕಾರಣದಲ್ಲಿ ಆಡಳಿತಗಾರರಾಗಿದ್ದರೆಂದು ಸಾಧಿಸಿದ ಮೇಲೆ ಅವರ ಕೈಕೆಳಗೆ ಅಧೀನ ಅಧಿಕಾರಿಗಳ ವರ್ಗ ಮತ್ತು ಸಲಹೆ ಸೂಚನೆಗಳನ್ನು ಪಡೆಯಲು ಮತ್ತು ಸಾಮ್ರಾಜ್ಯವನ್ನು ಉತ್ತಮವಾಗಿ ಆಡಳಿತ ನಡೆಸಿಕೊಂಡು ಹೋಗಲು ಮಂತ್ರಿಗಳನ್ನು ನೇಮಕಮಾಡಿಕೊಂಡಿರುತ್ತಾರೆ ಎಂಬುದರಲ್ಲಿ ಸಂಶಯವಿಲ್ಲ. ತಮ್ಮ ಆಡಳಿತದ ಬಹು ಮುಖ್ಯವಾದ ಪ್ರಸಂಗಗಳ ಸಮಯದಲ್ಲಿ ಮಂತ್ರಿಗಳ ಸಲಹೆ ಮತ್ತು ಮಾರ್ಗದರ್ಶನಗಳನ್ನು ತೆಗೆದುಕೊಳ್ಳುತ್ತಿದ್ದರು. ಇದಕ್ಕೆ ನಮಗೆ ಹಲವಾರು ಉದಾಹರಣೆಗಳು ದೊರಕುತ್ತವೆ. ಹೆಚ್ಚಾಗಿ ರಾಜಕೀಯ, ಧಾರ್ಮಿಕ ವಿಷಯಗಳಲ್ಲಿ ರಾಜ್ಯಾಡಳಿತದ ರಾಣಿಯರು ಸಲಹೆಗಳನ್ನು ಅಪೇಕ್ಷಿಸುತ್ತಿದ್ದರು. ಚಾಲುಕ್ಯರ ಅಕ್ಕಾದೇವಿ ಸೊಂಡಿಯ ಅರ್ಕೇಶ್ವರ ದೇಗುಲದ ಪರಿಚಾರಕ ವರ್ಗಕ್ಕೆ ಮಂತ್ರಿಗಳ ಸಲಹೆ ಮೇರೆಗೆ ದತ್ತಿಬಿಟ್ಟುದ್ದುದ್ದನ್ನು ಗಮನಿಸಿದರೆ ಮಂತ್ರಿವರ್ಗದ ನಡುವೆ ಮತ್ತು ರಾಣಿಯ ನಡುವೆ ಉತ್ತಮ ಭಾಂದವ್ಯವಿದ್ದುದ್ದು ತಿಳಿದು ಬರುತ್ತದೆ. ಇದನ್ನು ಸೂಡಿಯ ಶಾಸನ ವಿವರಿಸುತ್ತದೆ.[118]

ತ್ರೈಲೋಕ್ಯ ಮಲ್ಲನ ಪಿರಿಯರಸಿ ಮೈಳಲಾದೇವಿ 'ಸೋಮಗ್ರಹಣ ಪರ್ವನಿಮಿತ್ತ' ಲಕ್ಷ ಹೋಮದ ಕಾಲಕ್ಕೆ ತನ್ನ ಮಂತ್ರಿ ಪಸಾಯಿತ ಮನೆ ವರ್ಗಡೆ ಮುಂತಾದವರ ಅನುಮತಿ ಪಡೆದು. ಹೊಂನವಾಡಿಯ ಸೋಮೇಶ್ವರ ದೇಗುಲಕ್ಕೆ ದತ್ತಿ ನೀಡಿದ ವಿಷಯ ಉಕ್ತವಾಗಿದೆ. ಭುವನೈಕ್ಯಮಲ್ಲನ ರಾಣಿ ಕಂಚಲಾಮಹಾದೇವಿ ಸಮಸ್ತ ಪ್ರಧಾನರನ್ನು ಒಳಗೊಂಡಂತೆ ಕುಂಕುಮ ಮಹಾದೇವಿ ಮಾಡಿಸಿದ ಆನೆಸಜ್ಜೆ ಬಸದಿಗೆ ದತ್ತಿಬಿಟ್ಟ ವಿಷಯವಿದೆ.[119] ಇದನ್ನು ಗಮನಿಸಿದರೆ ರಾಣಿಯರು ತಮ್ಮ ಮಂತ್ರಿಗಳೊಡನೆ ಉತ್ತಮ ಸಂಬಂಧಗಳನ್ನು ಹೊಂದುವುದರೊಂದಿಗೆ ರಾಜ್ಯಾಡಳಿತದಲ್ಲಿ ಯಶಸ್ವಿ ಆಡಳಿತ ರೂಪಿಸುವಲ್ಲಿ ನಿರತರಾಗಿರುತಿದ್ದರು ಎಂಬುದು ವ್ಯಕ್ತವಾಗುತ್ತದೆ.

**ರಾಣಿಯರ ಯುದ್ಧ ನೀತಿ**

ಪ್ರಾಚೀನ ರಾಜವಂಶಗಳು ಅಸ್ತಿತ್ವದಲ್ಲಿದ್ದಂತಹ ಸಮಯದಲ್ಲಿ ಯುದ್ಧ ಸರ್ವೇ ಸಾಮಾನ್ಯವಾದ ವಿಷಯವಾಗಿತ್ತು. ರಾಜರು ತಮ್ಮ ನೆರೆ ಹೊರೆಯ ಸಾಮ್ರಾಜ್ಯಗಳ ಮೇಲೆ, ದಾಳಿ

---

118 ಎ.ಇ. XV, ನಂ.6, ಸೂಡಿ,(ತಾ) ರೋಣ ಕ್ರಿ.ಶ. 1054.

119 S.I.I XX ನಂ. 46, ಗುಡಿಗೇರಿ (ತಾ) ಶಿರಹಟ್ಟಿಕ್ರಿ.ಶ. 1072.

ನಡೆಸಿ ತಮ್ಮ ಶತ್ರುಗಳನ್ನು ಸದೆಬಡಿಯುತ್ತಿದ್ದರು. ಇದು ಸಹಜವೇ ವೀರತ್ವಕ್ಕೆ, ಪೌರುಷಕ್ಕೆ ಹೆಸರಾಗಿದ್ದ ಪುರುಷಶಕ್ತಿಯ ರಾಜರು ರಣರಂಗವನ್ನು ಪ್ರವೇಶಿಸಿ ಸಾಮ್ರಾಜ್ಯಕ್ಕಾಗಿ ಹೋರಾಡಿ ಜಯಗಳಿಸುತ್ತಿದ್ದರು. ಇಲ್ಲವೇ ಹೋರಾಡಿ ವೀರಸ್ವರ್ಗವೆನ್ನೇರುತ್ತಿದ್ದರು. ಹಾಗೆಯೇ ರಾಜರ ಪತ್ನಿಯರು ಅಂದರೆ ರಾಣಿಯರು ಸಹ ಸ್ವತಂತ್ರವಾಗಿ ಆಡಳಿತ ನಿರ್ವಹಿಸುತ್ತಿದ್ದ ಸಂದರ್ಭಗಳಲ್ಲಿ, ರಾಜನೊಂದಿಗಿನ ಕೂಡಿಕೆ ಆಡಳಿತದ ಸಮಯಗಳಲ್ಲಿಯೂ ಸಹ ರಣರಂಗ ಪ್ರವೇಶ ಮಾಡುತ್ತಿದ್ದರು.

ರಾಣಿಯರು ಸ್ವತಂತ್ರವಾಗಿ ಆಡಳಿತ ನಿರ್ವಹಿಸುತ್ತಿದ್ದ ಸಂದರ್ಭಗಳಲ್ಲಿ ಸಾಮಾನ್ಯವಾಗಿ ವೈರಿಗಳು ಸ್ವಲ್ಪ ಹೆಚ್ಚಾಗಿಯೇ ಅವರ ಪ್ರದೇಶಗಳ ಮೇಲೆ ದಾಳಿ ನಡೆಸುತ್ತಿದ್ದರು. ಇಂತಹ ಸಂದಿಗ್ಧ ಸನ್ನಿವೇಶಗಳಲ್ಲಿ ಆಯಾ ಪ್ರದೇಶಗಳ ರಾಣಿಯರೇ ತಮ್ಮ ರಾಜ್ಯದ ರಕ್ಷಣೆಗಾಗಿ ರಾಜರಿಗೂ ಏನೂ ಕಡಿಮೆ ಇಲ್ಲದಂತೆ ಕೈಯಲ್ಲಿ ಖಡ್ಗ ಹಿಡಿದು, ಪುರುಷ ವೇಷಧರಿಸಿ, ರಣರಂಗವನ್ನು ಪ್ರವೇಶ ಮಾಡುತ್ತಿದ್ದರು. ಹೀಗೆ ಪುರುಷ ವೇಷಧಾರಿಯಾಗಿ ಖಡ್ಗ ಹಿಡಿದು ಭೀಕರ ರಣರಂಗವನ್ನು ಪ್ರವೇಶಿಸಿ ರಾಜ ರಣರಂಗ ನೀತಿಯನ್ನು ಸ್ಥಾಪಿಸಿದ ರಾಣಿಯರ ಸಾಲಿಗೆ ಪ್ರಾಚೀನ ಕರ್ನಾಟಕವನ್ನಾಳಿದ ರಾಜಮನೆತನಗಳಲ್ಲಿನ ರಾಣಿಯರ ಸಂಖ್ಯೆ ತೀರ ವಿರಳ. ಕೆಲವೇ ಕೆಲವರು ಮಾತ್ರ ಅವರಲ್ಲಿ ರಣಭೈರವಿ, ಗುಣದಬೆಡಂಗಿ, ಎಂದು ಬಿರುದಾಂಕಿತಳಾದ ತ್ರಿಭುವನ ಮಲ್ಲನ ಅರಸಿ ಶ್ರೀಮನ್ ಅಕ್ಕಾದೇವಿ ಕಿಸುಕಾಡು 70ರ ರಾಣಿ, ಹೊಯ್ಸಳ ವೀರ ಬಲ್ಲಾಳನ ರಾಣಿ ಬಮ್ಮಲಾದೇವಿ, ಉಮಾದೇವಿ ಮತ್ತು ಚೋಳಮಹಾದೇವಿಯರು ಪ್ರಮುಖವಾಗಿ ಕಂಡು ಬರುತ್ತಾರೆ.

ವಿಜಯನಗರದ ಶ್ರೀಕೃಷ್ಣದೇವರಾಯನ ರಾಣಿಯರಾದ ತಿರುಮಲಾದೇವಿ, ಜಗನ್ಮೋಹಿನಿ, ಚಿನ್ನಲಾದೇವಿ, ಸಂಗಮನ ರಾಣಿ, ಹರಿಮಾ, ರಾಣಿಯರು ಪ್ರಮುಖರಾಗಿದ್ದಾರೆ. ಅಕ್ಕಾದೇವಿ ರಣರಂಗದಲ್ಲಿ ರಣಚಂಡಿಯಂತೆ ವರ್ತಿಸುತ್ತಿದ್ದಳೆಂಬುದನ್ನು ಶಾಸನಗಳು ಬಹು ರಸವತ್ತಾಗಿ ವರ್ಣಿಸಿವೆ.

"ಗುಣದ ಬೆಡಂಗಿಯೆನಲ್ ಸ
ದ್ಗುಣಮಂ ನೆಗಳ್ದೇವಾಕ್ಯೆಯೆನೆ ಸೂನೃತಮಂ
ರಣ ಭೈರವಿಯೆನ ಶೌರ್ಯದ
ಗುಣಮನದೇನೆಂದು ಬಣ್ಣಿಪಂ ನೃಪಸುತೆಯೊ॥
ಅವಿನಮ್ರಾರಿ ನೃಪಾಳಕ ಪ್ರಳಯ ಸಂಪಾದಕ್ಷಮೋಚ್ಚಂಡ ಬೈ

ರವಿ ತಾನಾಗಿಯು ಮೆಯ್ದೆ ಶಾಂತತರರೂಪಾನ್ವಿತೆ ನಿರ್ಭತ್ಸನಾ
ರವ ಸಿಂಹಾಗ್ರಜೆಯಾಗಿಯುಂ ಮದಗಜೋದ್ಯದ್ಯಾನೆಯೆಂದಂದು ಧಾ
ತವಿಚಿತ್ರಂ ನೆಗಳ್ದೇಕವಾಕ್ಯೆಯ ಚರಿತ್ರಂ ಭೂರಿ ಭೂಚಕ್ರದೊಳ್."

ಎಂದು ಎಫಿಗ್ರಫಿಯಾ ಇಂಡಿಕಾದ ಹದಿನೈದನೇ ಸಂಪುಟದಲ್ಲಿ ಆರನೇ ನಂಬರ್‌ನ ಸೂಡಿ ತಾಲ್ಲೂಕಿನ ರೋಣದ ಕ್ರಿ.ಶ. 1022ರ ಶಾಸನ ವರ್ಣಿಸಿದೆ. ಇದನ್ನು ಗಮನಿಸಿದರೆ ಅಕ್ಕಾದೇವಿ ಯಾವುದೋ ಯುದ್ಧ ಪ್ರಸಂಗದಲ್ಲಿ ಭಾಗವಹಿಸಿ ರಣಭೈರವಿ, ಉಚ್ಚಂಡಭೈರವಿ ಎಂಬ ಬಿರುದು ಪಡೆದಂತೆ ಕಂಡು ಬರುತ್ತದೆ. ಇವಳು ಪ್ರತ್ಯಕ್ಷ ರಣರಂಗ ದರ್ಶನ ಮಾಡಿದ ಮಹಿಳೆ ಎಂಬ ಭಾವನೆ ದಟ್ಟವಾದರೂ ಯುದ್ಧ ನಿರ್ವಹಣೆಯ ಬಗ್ಗೆ ಪ್ರತ್ಯಕ್ಷ ಉಲ್ಲೇಖಗಳು ಸಿಗುವುದಿಲ್ಲ.

ಆಡಳಿತದ ನಿರ್ವಹಣೆಯಂತಹ ಬಹುಪ್ರಮುಖ ವಿಷಯಗಳಲ್ಲಿ ರಾಣಿಯರು ಸ್ವಂತ್ರವಾಗಿ ವಿಚಾರಿಸಿ ಯೋಗ್ಯ ನಿರ್ಣಯ ಕೈಗೊಳ್ಳುವುದು, ಅವಶ್ಯವಿತ್ತು. ಯುದ್ಧದಂತಹ ಪ್ರಸಂಗದಲ್ಲಿ ಆಯಾ ಗ್ರಾಮಗಳ ಬಹುಭಾಗಗಳು ನಾಶವಾಗುತಿದ್ದವು. ರಾಣಿಯರುಗಳೇ ನಾಶವಾಗಿದ್ದ ಗ್ರಾಮಗಳನ್ನು ಸರಿಪಡಿಸುತ್ತಿದ್ದರು. ಇದು ರಾಣಿಯರು ಮಂತ್ರಿಗಳ, ಮನೆವರ್ಗಡೆ (ಅಧೀನ ಅಧಿಕಾರಿಗಳ) ಸಲಹೆ ಸೂಚನೆಗಳನ್ನು ಬದಿಗೊತ್ತಿ ಸ್ವತಂತ್ರವಾಗಿ ಯುದ್ಧ ಕೈಗೊಂಡು ಇಂತಹ ವಿಪತ್ತುಗಳಲ್ಲಿ ಸಿಲುಕುತ್ತಿದ್ದ ಬಗೆಯನ್ನು ತಿಳಿಯಬಹುದು. ಆತುರದ ನಿರ್ಣಯಗಳನ್ನು ಕೈಗೊಂಡು ಪಶ್ಚಾತಾಪ ಪಟ್ಟ ಪ್ರಸಂಗಗಳು ಇವೆ. ಇದಕ್ಕೆ ತಕ್ಕ ನಿದರ್ಶನವೆಂದರೆ ಎಫಿಗ್ರಫಿಯಾ ಕರ್ನಾಟಕದ ಐದನೇ ಭಾಗದ ಚನ್ನರಾಯಪಟ್ಟಣದಲ್ಲಿನ ಶಾಸನ ಸಂಖ್ಯೆ 205ರ ಕೆಂಬಾಳು ಶಾಸನ ಇದು 'ಚೋಳಿಕರ ಪ್ರಗಟ್ಟಕದಿಂ ಕೆಟ್ಟ ಸಮ್ಮಂದಿ'ಯಿಂದ ಎಂಬ ವಿಷಯ ಸೂಡಿಯ ಬಹುಭಾಗ ಯುದ್ಧಕ್ಕೆ ಸಿಲುಕಿ ನಾಶವಾದಾಗ ಅದನ್ನು 'ಪುನರ್ಬರಣ ಮಾಡಿಕೊಟ್ಟಳೆಂದು' ತಿಳಿಸಿದೆ. ಇಡೀ ಕಿಸುಕಾಡು 70ಕ್ಕೆ ಅನೇಕಾನೇಕ ಸುಂಕಗಳನ್ನು ಬಿಟ್ಟುಕೊಟ್ಟು ಅನೇಕ ನಿಬಂಧನೆಗಳನ್ನು ಹೇರಿದ ವಿಷಯವನ್ನು ಶಾಸನದಿಂದ ತಿಳಿಯಬಹುದಾಗಿದೆ. ಚೋಳರ ದಾಳಿಗಳಿಂದ ಮೇಲೆ ಹೇಳಿದ ಜನರು ಬಹಳಷ್ಟು ನಷ್ಟಕ್ಕೆ ಒಳಗಾಗಿದ್ದರೆಂದು ಕಾಣುತ್ತದೆ.

ಹೀಗೆ ಅವರ ಆಸ್ತಿಯನ್ನು ಅವರಿಗೆ ಹಿಂದಕ್ಕೆ ಕೊಡಿಸಿಕೊಟ್ಟು ಅಕ್ಕಾದೇವಿಯು ಒಂದು ಆಜ್ಞೆಯನ್ನು ಹೊರಡಿಸುತ್ತಾಳೆ. ಇಡೀ ಕಿಸುಕಾಡು 70ಕ್ಕೆ ಸುಂಕವನ್ನು ಬಿಟ್ಟುಕೊಟ್ಟಂತೆ ಪಟ್ಟಣದಲ್ಲಿ ಏನಾದರೂ ಅನ್ಯಾಯ ನಡೆದರೆ ಅದಕ್ಕೆ ತಳವಾರನು ಹೊಣೆ, ಮತ್ತು ಅವನು ಆ ನಷ್ಟವನ್ನು

ತುಂಬಿಕೊಡಬೇಕು. ತಂದೆಯ ದೋಷ ಮಗನನ್ನು, ಮಗನ ದೋಷ ತಂದೆಯನ್ನು ಹೊಂದುವುದಿಲ್ಲ. 'ಅಂಚಲ್ ವಿಡಿವಂ' ಹಗೆ, ಕೆಟ್ಟಮನುಷ್ಯ– ಇವರನ್ನು ಅಂಗಡಿಯ ತಡಿಕೆಯ ಕೆಳಗೆ ಎಂದರೆ ಅವರ ಅಪರಾಧದ ಸ್ಥಳದಲ್ಲಿಯೇ ಇರಿದರೆ ದಂಡವಾಗಲೀ, ದೋಷವಾಗಲಿ ಇಲ್ಲ. ಇವರನ್ನು ಬಿಟ್ಟು ಬೇರೆಯವರನ್ನು ಇರಿದರೆ ಅದಕ್ಕೆ ತಕ್ಕ ದಂಡವನ್ನು ತೆರಬೇಕು ಎಂದು ಹೇಳಿದೆ. ಈಕೆಯ ಸಮಸ್ತ ವಿಷಯವನ್ನು ಗಮನಿಸಿದರೆ ರಾಣಿಯ ಸ್ವತಂತ್ರ ಯುದ್ಧ ರಣರಂಗದ ಬಗ್ಗೆ ಅರಿವಾಗುತ್ತದೆ.

ಚಾಲುಕ್ಯ ರಾಣಿಯರು ತಮ್ಮ ಪತಿಯೊಂದಿಗೆ ದಿಗ್ವಿಜಯಗಳನ್ನು ಪಾಲ್ಗೊಳ್ಳುತ್ತಿದ್ದುದ್ದನ್ನು ಇಲ್ಲಿ ಸ್ಮರಿಸಬಹುದು. ಹೊಯ್ಸಳ ಸಾಮ್ರಾಜ್ಯದಲ್ಲಿಯೂ ರಾಣಿಯರು ನೇರ ಯುದ್ಧದಲ್ಲಿ ಪಾಲ್ಗೊಂಡಂತೆ ಸಾಧ್ಯತೆಗಳಿವೆ. ವಿಜಯನಗರ ಸಾಮ್ರಾಜ್ಯ ಕಾಲದ ಶಿಲ್ಪಗಳನ್ನು ಕೂಲಂಕುಷವಾಗಿ ಅವಲೋಕಿಸಿದಾಗ ಕುದುರೆ ಸವಾರಿ ಗೊತ್ತಿದ್ದುದಲ್ಲದೆ, ಆನೆ ಸವಾರಿ ಮತ್ತು ಒಂಟೆ ಸವಾರಿ ಸಹ ಗೊತ್ತಿತ್ತು. ಎಂಬುದು ತಿಳಿಯುತ್ತದೆ. ಹಜಾರ ರಾಮ ದೇವಾಲಯದ ಪ್ರಕಾರದ ಮೇಲಿನ ಒಂದು ಶಿಲ್ಪದಲ್ಲಿ ಮಹಿಳೆ ಕುದುರೆಯ ಮೇಲೆ ಕುಳಿತಿದ್ದಾಳೆ. ಕುದುರೆಯ ಮುಂದಿರುವ ಮತ್ತೊಬ್ಬ ಮಹಿಳೆ ಉದ್ದವಾದ ಭರ್ಜಿಯನ್ನು ಹಿಡಿದಿದ್ದಾಳೆ. ಅಲ್ಲಿರುವ ಮತ್ತೊಂದು ಶಿಲ್ಪದಲ್ಲಿ ಆನೆಗಳ ಸಾಲು ಇವೆ. ಪ್ರತಿಯೊಂದು ಆನೆಯ ಮೇಲೆ ಒಬ್ಬ ಪುರುಷ ಮತ್ತು ಅವನ ಹಿಂದುಗಡೆ ಮಹಿಳೆ ಕುಳಿತಿದ್ದಾರೆ. ಈ ಶಿಲ್ಪಗಳಿಂದ ಮಹಿಳೆಯರು ಒಳ್ಳೆಯ ಸವಾರರಾಗಿದ್ದರೆಂಬುದು ತಿಳಿದುಬರುತ್ತದೆ. ಬೆಂಗಳೂರಿನ ವಸ್ತು ಸಂಗ್ರಹಾಲಯದಲ್ಲಿರುವ ಒಂದು ಶಿಲ್ಪದಲ್ಲಿ ಮಹಿಳೆಯರು ಯುದ್ಧರಂಗಕ್ಕೆ ಹೋಗುವ ದೃಶ್ಯವಿದೆ.

ವಿಜಯನಗರಕ್ಕೆ ಭೇಟಿ ನೀಡಿದ ಪೋರ್ಚುಗೀಸ್ ಪ್ರವಾಸಿ ನ್ಯೂನೀಜ್‌ನು ಮಹಿಳೆಯರಿಗೆ ಮಲ್ಲಯುದ್ಧ ಗೊತ್ತಿತೆಂದು ತಿಳಿಸಿದ್ದಾನೆ. ಶಿವಮೊಗ್ಗ ಜಿಲ್ಲೆಯಲ್ಲಿನ ಶಿಕಾರಿಪುರದ ಕ್ರಿ.ಶ. 1446ರ ಶಾಸನವು (ವೀರಗಲ್ಲು) ಈ ಅಂಶವನ್ನು ದೃಢೀಕರಿಸುತ್ತದೆ. ನಾಗಗೌಡನ ಮಗ ಮಾದಿಗೌಡ ಎಂಬಾತನು ಕುಸ್ತಿಯಾಡುತ್ತಿರುವಾಗಲೇ ಮರಣಹೊಂದಿ ಸ್ವರ್ಗಸ್ತನಾದಾಗ ಅವನ ಮಗಳು ಹರಿಯಕ್ಕ ತನ್ನ ತಂದೆಯನ್ನು ಕೊಂದ ಕುಸ್ತಿಪಟುಗಳೊಂದಿಗೆ ಕಾದಾಟ ನಡೆಸಿ ಆಕೆಯು ಮರಣಹೊಂದಿದ ವಿಷಯ ತಿಳಿಸುತ್ತದೆ. ಈ ವೀರಗಲ್ಲು ಹರಿಯಕ್ಕ ಎಡಗೈಯಲ್ಲಿ ಅವನ ಜುಟ್ಟುಹಿಡಿದು ಬಲಗೈಯಲ್ಲಿಯ ಖಡ್ಗದಿಂದ ಅವನನ್ನು ಇರಿಯುತ್ತಿದ್ದಾಳೆ. ಹರಿಯಕ್ಕ ವಿಜಯನಗರ ಕಾಲದಲ್ಲಿ ಪ್ರಖ್ಯಾತ ಕುಸ್ತಿಪಟುವಾಗಿದ್ದಳು. ಈ ಅಂಶಗಳು ಅರಮನೆಯ ವರ್ಗದ ಮಹಿಳೆಯರ ಯುದ್ಧ ನೀತಿಗಳನ್ನು ರೂಪಿಸುವಲ್ಲಿ ನೆರವಾಗಿವೆ.

ವಿಜಯನಗರ ಕಾಲದಲ್ಲಿ ರಾಣಿಯರು ಪತಿಯ ಜೊತೆ ರಣರಂಗಕ್ಕೆ ತೆರಳಿ ವಿಜಯದ ನೆನಪಿಗಾಗಿ ಧಾರ್ಮಿಕ ಕಾರ್ಯಗಳನ್ನು ನಡೆಸಿದ್ದಾರೆ ಈ ವಿಷಯಗಳನ್ನು ವಿಜಯನಗಕ್ಕೆ ಭೇಟಿನೀಡಿದ ನಿಕಲೋಕಾಂಟಿ, ಅಬ್ದುಲ್ ರಜಾಕ್, ನಿಕಿಟಿ, ಬಾರ್ಬೊಸಾ, ಫೆಯಾಸ್, ನ್ಯೂನಿಸ್ ಮತ್ತು ಸೀಸರ್ ರಾಯಭಾರಿಗಳು ತಮ್ಮ ಬರವಣಿಗೆಯಲ್ಲಿ ದಾಖಲಿಸಿದ್ದಾರೆ. ಒಟ್ಟಾರೆ ರಾಜನ ಯಶಸ್ವಿಗೆ ಆಡಳಿತದಲ್ಲಿ ರಾಣಿಯರು ಸಮ ಬೆಂಬಲವನ್ನು ನೀಡಿ ರಾಜ್ಯದ ಸಂವರ್ಧನೆಯಲ್ಲಿ ತಮ್ಮನ್ನು ತೊಡಗಿಸಿಕೊಳ್ಳುತ್ತಿದ್ದರೆಂಬುದು ಅಷ್ಟೇ ಸತ್ಯ.

### 3.2 ಸಾಮಾಜಿಕ ಕ್ಷೇತ್ರದಲ್ಲಿ ರಾಣಿಯರ ಪಾತ್ರ.

ರಾಣಿಯರು ಸಾಮಾಜಿಕ ಕ್ಷೇತ್ರದಲ್ಲಿ ಕೃಷಿಗೆ, ನೀರಾವರಿಗೆ, ವಾಣಿಜ್ಯ ವ್ಯಾಪಾರಕ್ಕೆ ಮತ್ತು ಇತರೆ ಮೂಲಭೂತ ಸೌಕರ್ಯಗಳ ನಿರ್ಮಾಣಕಾರ್ಯಗಳಲ್ಲಿ ಭಾಗಿಯಾಗಿದ್ದರು ಪುಣ್ಯಾರ್ಜನೆಗಾಗಿ ರಾಜರು, ಶ್ರೀಮಂತರು, ಉದಾರವಾಗಿ ದಾನ–ದತ್ತಿಗಳನ್ನು ಬಿಟ್ಟುಕೊಟ್ಟಿರುವಂತೆಯೇ ರಾಣಿಯರು ಸ್ವತಃ ಕಾಳಜಿವಹಿಸಿ ಸಾರ್ವಜನಿಕ ಕಾರ್ಯಗಳನ್ನು ನಿರ್ವಹಿಸಿದ ನಿದರ್ಶನಗಳನ್ನು ಕಾಣಬಹುದು.

1) ಕೆರೆ, ಕಾಲುವೆ, ಬಾವಿಗಳ ನಿರ್ಮಾಣ 2) ವಾಣಿಜ್ಯ ಸಂತೆಗಳ ನಿರ್ಮಾಣ 3) ಅನ್ನಸತ್ರಗಳು ಮತ್ತು ವಿಶ್ರಾಂತ ಗೃಹಗಳ ನಿರ್ಮಾಣ ಕಾರ್ಯಗಳಲ್ಲಿ ರಾಣಿಯರ ಪಾತ್ರ ಬಹುಮಹತ್ತರವಾದದ್ದು.

ಸುಗ್ಗಿಯಬ್ಬರಸಿ ಎಂಬ ರಾಣಿ ಒಬ್ಬಳು 'ಸವಣನಬಳಲಿ' ನಲ್ಲಿ 12 ಮತ್ತರು (ಎಕರೆ) ಭೂಮಿಯನ್ನು ಬಿಟ್ಟುಕೊಟ್ಟಿದ್ದಾಳೆ.[120] ಬಿಳಲಿ ಎಂದರೆ ಗೋಮಾಳವೆಂದು ಡಾ. ಎಂ. ಚಿದಾನಂದ ಮೂರ್ತಿಯವರು ತಮ್ಮ ಮಹಾಪ್ರಬಂಧ ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನದಲ್ಲಿ ತಿಳಿಸಿದ್ದಾರೆ. ಉನ್ನತ ವರ್ಗದ ಮಹಿಳೆಯರಿಗಿಂತ ಸಾಮಾನ್ಯವರ್ಗದ ಮಹಿಳೆಯರು ವೃತ್ತಿ, ಕಸುಬುಗಳಲ್ಲಿ ಪಾಲ್ಗೊಳ್ಳುತ್ತಿದ್ದು ಅವರಿಗೆ ಅಗತ್ಯ ಸೌಲಭ್ಯಗಳನ್ನು ಸೌಕರ್ಯಗಳನ್ನು ರಾಣಿಯರು ನೀಡುತ್ತಿದ್ದರೆಂಬುದಕ್ಕೆ ಈ ಭೂದಾನವನ್ನು ನಿದರ್ಶನವನ್ನಾಗಿ ನೀಡಬಹುದು.

ಹೊಯ್ಸಳರ ವೀರಬಲ್ಲಾಳನ ರಾಣಿ ಅಭಿನವ ಕೇತಲದೇವಿ ಬುಧವಾರ ಸಂತೆಯನ್ನು ನೆರವೇರಿಸಬೇಕೆಂದು ಮುಮ್ಮರಿ ದಂಡಕ್ಕೆ ತಿಳಿಸಲಾಗಿದೆ. ಅವಳು 'ನನ್ನಿ ಕಂಬವ ಪ್ರತಿಷ್ಠಿಸಿ'

---

[120] ಎ.ಕ. VII, sorb, 233, ಕ್ರಿ.ಶ. 1139.

ಸಂತೆಯನ್ನು ನೆರವೇರಿಸಿದುದು ಕುಂದವಾಡ ಶಾಸನದಲ್ಲಿದೆ.[121] ಇದರಿಂದ ರಾಣಿಯರು ಸಹ ವ್ಯಾಪಾರಕ್ಕೆ ಸಂಬಂಧಿಸಿದಂತೆ, ರೂಪು ರೇಷೆಯನ್ನು ಯೋಜಿಸುತ್ತಿದ್ದರೆಂಬುದು ವ್ಯಕ್ತವಾಗುತ್ತದೆ. ಆರನೇ ವಿಕ್ರಮಾದಿತ್ಯನ ರಾಣಿ ಮಲ್ಲಣ್ಣದೇವಿಯ ಮನೆಯಲ್ಲಿ ವಜ್ರದ ನಿಯೋಗದ ಬಗ್ಗೆ ಉಲ್ಲೇಖಗಳು ಇವೆ.

ಇನ್ನು ದಾನಗಳಲ್ಲಿ ಜಲದಾನ ಮಹತ್ವಪೂರ್ಣವಾದುದ್ದು. ಇದನ್ನು ಪೂರೈಸುವ ಸಲುವಾಗಿ ತಟಾಕಗಳನ್ನು ನಿರ್ಮಾಣ ಮಾಡುವುದು. ದೇವಾಲಯಗಳ ನಿರ್ಮಾಣದೊಂದಿಗೆ ತಲೆಯೆತ್ತುತ್ತಿದ್ದ ತಟಾಕಗಳು ಒಂದು ದೃಷ್ಟಿಯಲ್ಲಿ ಧರ್ಮ ಕಾರ್ಯವೆನಿಸುತ್ತಿದ್ದರೂ, ಇನ್ನೊಂದು ದೃಷ್ಟಿಯಿಂದ ಸಾರ್ವಜನಿಕ ಕಾರ್ಯವೆನಿಸುತ್ತಿತ್ತು. ಶೈವಧರ್ಮದೊಂದಿಗೆ ಈ ಪದ್ಧತಿ ಬೆಳೆದು ಬಂದರೂ ಈ ವಿಷಯವಾಗಿ ಅನ್ಯ ಧರ್ಮಗಳ ಕಾರ್ಯಗಳನ್ನು ಮರೆಯುವಂತಿಲ್ಲ. ಕೃತಕ ನೀರಾವರಿ ವ್ಯವಸೆಯನ್ನು ಸಮುದ್ರ–ಕೆರೆ–ಸರೋವರ–ತಟಾಕ–ಕೊಳ–ಕುಂಟೆ–ಡೋಣಿ ಬಾವಿ ಎಂಬ ಉತ್ತರ ಪದದೊಂದಿಗೆ ಕರೆಯಲಾಗುತ್ತಿತ್ತು. ತಮ್ಮ ಹೆಸರನ್ನು ಚಿರಸ್ಥಾಯಿಗೊಳಿಸಲು ಕೆಲವು ವೇಳೆ ಮರಣ ಹೊಂದಿದ ತಮ್ಮ ಹಿರಿಯರ ಹಾಗೂ ಪ್ರಿಯವ್ಯಕ್ತಿಗಳ ಸ್ಮಾರಕವಾಗಿ ಕೆರೆ ಮತ್ತು ಬಾವಿ ನಿರ್ಮಾಣ ಕಾರ್ಯಗಳನ್ನು ಕೈಗೊಳ್ಳುತ್ತಿದ್ದುದುಂಟು ಉನ್ನತ ವರ್ಗದ ರಾಜಮನೆತನದ ವ್ಯಕ್ತಿಗಳು ಒಬ್ಬೊಬ್ಬರೇ ನಿಂತು ಸ್ವತಂತ್ರವಾಗಿ ಈ ಕಾರ್ಯ ಪೂರೈಸುತ್ತಿದ್ದರು. ಸಾಮಾನ್ಯವಾಗಿ ಎಲ್ಲರಿಗೂ ಸಮಾನವಾದ ಎಲ್ಲಾ ಧರ್ಮಗಳಿಗೂ ಒತ್ತಿ ಹೇಳುವ ದಾನ, ಕೆರೆಯನ್ನು ಕಟ್ಟಿಸುವುದು. ದೇವಸ್ಥಾನಗಳನ್ನು ನಿರ್ಮಾಣಮಾಡುವ ಕಾರ್ಯಗಳಲ್ಲಿ ರಾಣಿಯರ ಪಾಲು ಇತ್ತು ಎಂಬುದನ್ನು ಶಾಸನಾದಿಗಳು ಉಲ್ಲೇಖಿಸಿವೆ.

ಚಟ್ಟಲಾದೇವಿ ಎಂಬ ರಾಣಿ 'ಧರ್ಮಂ ಪ್ರಾಣೀವ ಚಿಂತಯೇತ್' ಎಂಬುದನ್ನು ಸ್ಮರಿಸಿ, ಕೆರೆ, ಬಾವಿ, ದೇಗುಲ ಅರವಟಿಕೆಗಳನ್ನು ಮಾಡಿಸಿದ್ದಾಳೆ. ಅಲ್ಲದೇ ಸಾರ್ವಜನಿಕ ಉದ್ಯಾನವೆಂದು ಕರೆಯಬಹುದಾದ, ಆರಾಮವನ್ನು ಸಹ ನಿರ್ಮಿಸಿದ್ದಾಳೆ.[122] ಶಾಂತಲಾದೇವಿ, ಶಾಂತಿ ಸಮುದ್ರವನ್ನು,[123] ಮೇಚಲದೇವಿ, ಮೇಚಲ ಸಮುದ್ರ[124]ವನ್ನು, ದೀವಳಬ್ಬ ರಚಿಸಿದ ದೀವಳಬ್ಬಾ

---

[121] ಎ.ಕ XI, ದಾವಣಗೆರೆ, 105, ಕುಂದವಾಡ, ಕ್ರಿ.ಶ. 1218.

[122] ಎ.ಕ VII, ನಗರ. ಶಾ.ಸಂ 35, ಕ್ರಿ.ಶ. 1077.

[123] ಎ.ಕ V, ಚನ್ನರಾಯಪಟ್ಟಣ, 161, ಬಾಗೂರು, ಕ್ರಿ.ಶ. 1181.

[124] ಎ.ಕ v. ಮುಂಜರಾಬಾದ್, 18, ಹಾಲೇಬೇಲೂರು, ಕ್ರಿ.ಶ. 1095.

ಸಮುದ್ರವನ್ನು,[125] ಭೀಮಲೆ ನಾಯಕಿತಿ ತನ್ನ ಹೆಸರಿನ ಭೀಮ ಸಮುದ್ರ[126]ಗಳು ಈ ದೃಷ್ಟಿಯಿಂದ ಪ್ರಮುಖವಾಗಿವೆ.

ದೀವಳಬ್ಬರಸಿ ನೊಳಂಬರ ಪೊಳಲ್ಚೋರನ ರಾಣಿಯಾಗಿದ್ದು ಆವನಿ ಶಾಸನ ಆಕೆ ನಿರ್ಮಿಸಿದ ದಿವಳಾಬ್ಬಸಮುದ್ರವನ್ನು ಹಾಗೂ ದೇವಸ್ಥಾನವನ್ನು ನಿರ್ಮಿಸಿ ನೀಡಿದ ದತ್ತಿಯನ್ನು ಈ ರೀತಿ ವರ್ಣಿಸಿದೆ.

*'ವಿದಿತಂ ಲೋಕಕ್ಕೆ ಮುನ್ನಂ ರಘುಕುಳದಹನೋಗ್ರೇಷುವಿಂ, ಕಾಯ್ದು ತಿಣ್ಣಂ*
*ಕುದಿಗೊಣ್ಡಿಕ್ಕಿತ್ತಗಸ್ತ್ಯಯಂ ಕುಡಿಯುತು ಗುಳ್ಪನಿಂ ಕಟ್ಟು ಪಟ್ಟಿ*
*ಳ್ಳಿ ದಿನ್ತಪ್ಪದು ಪೆಂಪನ್ತಾಳ್ಡಿ ತೆನ್ದನ್ದರಿಯರೆ ಲವಣಾಲಬೋಧಿಯಂ*
*ಪೋಲಿಸಲ್ವೇಡಿಮವೆತ್ತಾ ನೆತ್ತ ಲೆಂಬನ್ದತಿ ಬಹುಳ ಒಳ ನಿವ್ವಳಬ್ಬಾ ಸಮುದ್ರಂ"*[127]

ಹಾಲೇಬೇಲೂರಿನಲ್ಲಿ ಮೇಚಲ ಸಮುದ್ರವನ್ನು ಮೇಚಲದೇವಿ ನಿರ್ಮಿಸಿದಳೆಂದು ಮುಂಜರಾಬಾದ್ ಶಾಸನ ಹೇಳುತ್ತದೆ. ಕದಂಬ ಜಯಸಿಂಹನ ರಾಣಿ ಮೊಚ್ಚಬ್ಬರಸಿ ಪತಿಯಿಂದ ಯಾರೊ ಮನ್ನಿಸದ ಯಾರಿಗೂ ಬೇಡವಾದ ಎಡೆಯನ್ನು ಕನ್ಯಾದಾನವಾಗಿ ಪಡೆದು ಆ ಕಲ್ಕಾಡನ್ನು ಸಮತಟ್ಟಾಗಿಸಿ ಪೊಲೆಯರಿಪ್ಪೆ ಆ ಕೇರಿಯಲ್ಲಿ ಮನೆ, ಕೆರೆ ಹಾಗೂ ತೋಟ ಮಾಡಿಸಿದಳೆಂದು ತಳಂಗೆರೆ ಶಾಸನವಿವರಿಸುತ್ತದೆ.[128]

ಭೂಜಬ್ಬರಸಿ ಭೂಜಬ್ಬೇಶ್ವರ ತಟಾಕ ನಿರ್ಮಿಸಿದ ಬಗ್ಗೆ ಉಲ್ಲೇಖ ಹೆಬ್ಬಾಳ ಶಾಸನದಲ್ಲಿದೆ.[129] ಸಾಂತಾರರ ರಾಣಿ ಚಟ್ಟಲಾದೇವಿ ಲೋಕ ಹಿತಕ್ಕೋಸ್ಕರ ಕೆರೆ, ಬಾವಿ, ಬಸದಿ ಹಾಗೂ ದೇಗುಲಗಳನ್ನು ನಿರ್ಮಿಸಿದ ಬಗ್ಗೆ ಹುಂಚ ಶಾಸನ ಈ ರೀತಿಯಾಗಿ ವರ್ಣಿಸಿದೆ.

---

125 ಎ.ಕ x, ಮುಳಬಾಗಿಲು, 38, ಆವನಿ, ಕ್ರಿ.ಶ. 890.
126 ಎ.ಕ xii, ತುಮಕೂರು, 9, ಕೈದಾಳ, ಕ್ರಿ.ಶ. 1151.
127 ಎ.ಕ, x, ಮುಳಬಾಗಿಲು 38, ಆವನಿ, ಕ್ರಿ.ಶ. 890.
128 ಎ. ಇ xxix, 29, ತಳಂಗೆರೆ (ತಾ) ಕಾಸರಗೋಡು, ಕ್ರಿ.ಶ. 1000.
129 ಎ.ಇ. iv, 50, ಹೆಬ್ಬಾಳು (ತಾ) ಶಿರಹಟ್ಟಿ, ಕ್ರಿ.ಶ. 975.

"ಕೆರೆ ಬಾವಿ ಬಸದಿ ದೇಗುಲ

ಮರವಂಟಿಕೆ ತೀರ್ಥ ಶತ್ರು ಮಾರದೆ ಮೊದಲಾ

ಗಲಿಕೆಯ ಧರ್ಮಾದಿಗಳು

ನೆರೆಮಾಡಿಸಿ ನೋನ್ತಳೆಸೆಕೆ ಚಟ್ಟಲದೇವಿ[130]"

ಹೊಯ್ಸಳ ಎರೆಯಂಗನ ರಾಣಿ 'ಕೈಕಟ್ಟೆ ಗಟ್ಟುವ ತೆರದಿಂ' ಸೊಸೆ ಊರಿನಲ್ಲಿ ಕೆರೆಯನ್ನು ನಿರ್ಮಿಸಿದ್ದಾಳೆ.[131] ಅಂದರೆ ಚಿಕ್ಕ ವಿಸ್ತೀರ್ಣದ ಕೆರೆಯ ನಿರ್ಮಾಣವನ್ನು ತಿಳಿಸುತ್ತದೆ.

ವಿಷ್ಣುವರ್ಧನನ ರಾಣಿ ಶಾಂತಲೆ ಶ್ರವಣಬೆಳಗೊಳದಲ್ಲಿ ಸವತಿ ಗಂಧವಾರಣ ಬಸದಿಗೆ ಎಳಸದ ಕಟ್ಟೆ ಕೆರೆಯನ್ನು ಕಟ್ಟಿಸಿಕೊಟ್ಟಿರುವಳು.[132] ವಿಜಯನಗರ ಸಾಮ್ರಾಟರುಗಳ ಕಾಲದಲ್ಲಿ ರಾಣಿಯರು ಸಹ ಸಾರ್ವಜನಿಕ ಕಾರ್ಯಗಳನ್ನು ನಿರ್ವಹಿಸುತ್ತಿದ್ದರೆಂಬುದಕ್ಕೆ ಸಾಕಷ್ಟು ದಾಖಲೆಗಳು ಇವೆ. ಸಂಗಮ ಮನೆತನದ ಬುಕ್ಕನ ರಾಣಿಯಾದ ಚೊಮ್ಮದೇವಿ, ಪೆನ್ನಗೊಂಡ ರಾಜ್ಯದ ಬುಕ್ಕರಾಯನ ಮಗಳು ಇವಳಿಗೆ ಪೆದುಮಲದೇವಿ ಎಂಬ ಹೆಸರು ಸಹ ಇದೆ. ಈಕೆ 1397ರಲ್ಲಿ ಪ್ರಜಾಕಲ್ಯಾಣಕ್ಕಾಗಿ ತಿರುಮಣಿಯೂರು ಎಂಬ ಗ್ರಾಮದಲ್ಲಿ ಒಂದು ಕೆರೆಗೆ ನೀರು ಹರಿದು ಬರಲು ಕಾಲುವೆಯನ್ನು ತೋಡಿಸಿಬೇಕೆಂದು ತನ್ನ ಮಂತ್ರಿಗಳಾದ ನಾಗರಾಜ ಮತ್ತು ಮಾಯಾನಯಾಗಿ ಗಳಿಗೆ ಕಾಲುವೆಯನ್ನು ತೊಡಿಸಲು ಆದೇಶಿಸಿ ಕಾಲುವೆ ನಿರ್ಮಾಣಕ್ಕಾಗಿ ನೂರಾ ಮುವತ್ತು ಗದ್ಯಾಣಗಳನ್ನು, ಬಂಗಾರದ ನಗಗಳನ್ನು ಜೊತೆಗೆ ತೂಬಿನ ಹತ್ತಿರ ಮನೆಯನ್ನು ನೀಡುವುದಾಗಿ ತಿಳಿಸಿದರು. ಕಾಲುವೆ ನಿರ್ಮಾಣ ವ್ಯವಸ್ಥಿತವಾಗಿ ಮಾಡಬೇಕು, ಕಾಲುವೆಯಲ್ಲಿ ನೀರು ಸರಾಗವಾಗಿ ಹರಿಯಬೇಕು ಸರಾಗವಾಗಿ ಹರಿಯದಿದ್ದರೆ ಮೇಲೆ ನೀಡಿದ ನಗ, ನಾಣ್ಯ ಮನೆಯನ್ನು ನೀಡುವುದಿಲ್ಲ ಎಂದು ಷರತ್ತು ಹಾಕುತ್ತಾಳೆ.

ಯುವರಾಣಿಯ ನಿರೂಪದಂತೆ ಮಂತ್ರಿಗಳು ಪೆದ್ದ ಭೈರವೋಜ ಮತ್ತು ಪಿನ್ನ ಎಂಬ ಇಬ್ಬರು ಅಧಿಕಾರಿಗಳಿಗೆ ಕೆಲಸವನ್ನು ವಹಿಸುತ್ತಾರೆ. ರಾಣಿಯ ಷರತ್ತಿನಂತೆ ಕಾಲುವೆಯ ನಿರ್ಮಾಣವನ್ನು ವ್ಯವಸ್ಥಿತವಾಗಿ ಮಾಡಿ ರಾಣಿಯಿಂದ ಬಹುಮಾನವನ್ನು ಪಡೆಯುತ್ತಾರೆ. ಈ ಕೆರೆಯ ನಿರ್ಮಾಣ

---

130 ಎ.ಕ. VIII, ನಗರ, ಶಾಸನ ಸಂಖ್ಯೆ, 35, ಕ್ರಿ.ಶ. 1077.

131 ಎ.ಕ. V, ಅರಸಿಕೆರೆ, 102, ಕಾಟಿಗೆರೆ, ಕ್ರಿ.ಶ. 1101.

132 ಎ.ಕ. II, ಶ್ರವಣಬೆಳಗೊಳ, ಶಾ.ಸಂ 132, ಕ್ರಿ.ಶ. 1123.

ಸಂಪೂರ್ಣವಾದ ಮೇಲೆ ಈ ಕೆರೆಯನ್ನು ಕೆಲವು ವಿಧಿವತ್ತಾದ ಧಾರ್ಮಿಕ ಆಚರಣೆಗಳ ನಂತರವೇ ಆ ಕೆರೆಯನ್ನು ಬಳಸಿಕೊಳ್ಳಲಾಗುತ್ತದೆಂದು ತಿಳಿಯಬಹುದು.[133] ಈ ಮೇಲಿನ ಅಂಶಗಳನ್ನು ಗಮನಿಸಿದಾಗ ರಾಣಿಯರು ತಮ್ಮ ಸೇವಾ ಕಾರ್ಯವನ್ನು ನಿರ್ವಹಿಸುವಾಗ ಕಾರ್ಯಗಳ ಬಗ್ಗೆ ಅವರಿಗೆ ಇದ್ದ ಕಾಳಜಿ ಎಷ್ಟಿತ್ತೆಂಬುದು ಸ್ಪಷ್ಟವಾಗುತ್ತದೆ.

ಸಾಳುವ ಮನೆತನದ ಪ್ರಮುಖ ರಾಣಿಯರಲ್ಲಿ ಒಬ್ಬಳಾದ ಶ್ರೀ ರಂಗಾಂಬಾದೇವಿ ನರಸಿಂಹನ ರಾಣಿಯಾಗಿದ್ದು ಈಕೆ ತನ್ನ ಅಲ್ಪಾವಧಿಯಲ್ಲಿ ಸಾರ್ವಜನಿಕ ಕಾರ್ಯಗಳನ್ನು ಮಾಡುತ್ತಿದ್ದಳೆಂದು ಅದಕ್ಕೆ ಆಧಾರವಾಗಿ ಆಕೆ ಕ್ರಿ.ಶ. 1466ರಲ್ಲಿ ದೇವಸ್ಥಾನದ ಒಂದು ಗ್ರಾಮದಲ್ಲಿ ಒಂದು ನೀರಾವರಿ ಕಾಲುವೆ ತೋಡಿಸಿದ ಅಂಶ ತಿಳಿದು ಬಂದಿದೆ.[134] ಉಲ್ಲೇಖಿತ ರಾಣಿಯೇ ಕ್ರಿ.ಶ. 1467ರಲ್ಲಿ ಶ್ರೀ ರಂಗಾಂಬಾದೇವಿಯಮ್ಮ ದೇವಸ್ಥಾನಕ್ಕೆ ಒಂದು ಹಳ್ಳಿಯನ್ನು, ನೀರಾವರಿ ಕಾಲುವೆಯನ್ನು, ಅಗೆಯಲು ದಾನ ಆದೇಶಿಸಿದಳು. ಇದೇ ಅವಧಿಯಲ್ಲಿ ಕಾಸಕ್ಕಾಲುವ್ಯೆ ಎಂಬ ಕಾಲುವೆಯನ್ನು ಮಾವಂದೂರುನಲ್ಲಿ ನಿರ್ಮಿಸಿದಳು. ಇದನ್ನು ಮಾವಂದೂರು ಬಳಿಯ ಚಿಲುಮೆಯಿಂದ ಜಮೀನುಗಳಿಗೆ ನೀರನ್ನು ಪೂರೈಸಲು ನಿರ್ಮಿಸಿದ್ದಳು.[135] ಈಕೆ ಕೆರೆ–ಕಾಲುವೆ ಅಭಿವೃದ್ಧಿಗಾಗಿ ಅನೇಕ ಸಾರ್ವಜನಿಕ ಕೆಲಸಗಳನ್ನು ಮಾಡಿರುವುದಲ್ಲದೆ ಕೃಷಿಗೆ ಹೆಚ್ಚು ಪ್ರೋತ್ಸಾಹವನ್ನು ನೀಡಿರುವುದು ಶ್ಲಾಘನೀಯವಾದ ವಿಷಯವಾಗಿದೆ.

ನಂತರ ತುಳುವ ಸಂತತಿಯ ಪ್ರಖ್ಯಾತ ಅರಸ ಶ್ರೀ ಕೃಷ್ಣದೇವರಾಯನು ತನ್ನ ತಾಯಿ ನಾಗಲಾದೇವಿಯ ಹೆಸರಿನಲ್ಲಿ ತನ್ನ ತಾಯಿಗೆ ಪುಣ್ಯವಾಗಲೆಂದು ಹಲವಾರು ದಾನ–ದತ್ತಿ ಕೊಡುಗೆಗಳನ್ನು ನೀಡಿದ್ದಾರೆ. ಹಾಗೆಯೇ ತನ್ನ ತಾಯಿಯ ಹೆಸರಿನಲ್ಲಿ ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲ್ಲೂಕಿನ ಗೌರಸಮುದ್ರ ಮತ್ತು ಮೊಳಕಾಲ್ಮೂರು ತಾಲ್ಲೂಕಿನಲ್ಲಿ ನಾಗಸಮುದ್ರವನ್ನು ನಿರ್ಮಿಸಿದ್ದಾನೆ.[136] ಇದು ನಾಗಲಾದೇವಿ ವಿಶೇಷ ಸ್ಥಾನ–ಮಾನ ಹೊಂದಿರುವುದಕ್ಕೆ ಆಕೆಯ ಹೆಸರಿನಲ್ಲಿರುವ ದಾನ–ದತ್ತಿಗಳೇ ಸಾಕ್ಷಿ. ಇಲ್ಲಿ ಕೃಷ್ಣ ದೇವರಾಯನು ತನ್ನ ತಾಯಿ ನಾಗಲಾದೇವಿಯ ಗೌರವಾರ್ಥವಾಗಿ ಅನೇಕ ದೇವಾಲಯಗಳು ಕೆರೆ, ಪಟ್ಟಣ, ಗ್ರಾಮ ಇತ್ಯಾದಿ ನಿರ್ಮಿಸಿರುವುದು

---

[133] ಸಿ.ಆರ್. ವಾಸುದೇವನ್, ***ಹಂಪಿ ಪರಿಸರದ ಕೆರೆಗಳು,*** ಪು–124, ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2001.

[134] ಡಾ.ಎ.ವಿ. ವೆಂಕಟರತ್ನಂ, ***ವಿಜಯನಗರ ಸಾಮ್ರಾಜ್ಯದಲ್ಲಿ ಸ್ಥಳೀಯ ಸರ್ಕಾರ,*** ಪು–167.

[135] ಸಿ.ಟಿ. ಎಂ. ಕೊಟ್ರಯ್ಯ, ***ವಿಜಯನಗರ ಸಾಮ್ರಾಜ್ಯದ ನೀರಾವರಿ ವ್ಯವಸ್ಥೆ,*** ಪು–86, 114, ಪ್ರಸಾರಂಗ, ಕನ್ನಡ, ವಿಶ್ವವಿದ್ಯಾಲಯ, ಹಂಪಿ, 2001.

[136] ಡಾ. ದೇವರಕೊಂಡಾರೆಡ್ಡಿ, ***ಕೊಪ್ಪಳ ಜಿಲ್ಲೆಯ ಶಾಸನಗಳು,*** ಪು–118, (ಸಂ–2) ಕನ್ನಡ ವಿಶ್ವವಿದ್ಯಾಲಯ, ಹಂಪಿ.1999,

ತಾಯಿಯ ಮೇಲಿನ ಗೌರವವನ್ನು ಸೂಚಿಸುತ್ತದೆ. ಇಲ್ಲಿ ನಾಗಲಾದೇವಿಯ ಪುತ್ರ ವಾತ್ಸಲ್ಯ ಹೆಚ್ಚು ಅರ್ಥಪೂರ್ಣವಾಗಿದೆ.

ಓಬಾಂಬೆ ನರಸನಾಯಕನ ತೃತೀಯ ರಾಣಿ ಇವರ ಮಗನೇ ಅಚ್ಯುತರಾಯ, ಈ ಅಚ್ಯುತರಾಯ ತನ್ನ ತಾಯಿ ಓಬಾಂಬಿಕೆಯ ಹೆಸರಿನಲ್ಲಿ ಓಬಾಂಬಿಕಾ ಎಂಬ ಹಳ್ಳಿಯನ್ನು ನಿರ್ಮಿಸಿದನು. ಅಲ್ಲಿಯೇ ಒಬಾಂಬಿಕಾ ಸಮುದ್ರ ಅಥವಾ ಓಬಮ್ಮನ ಸಮುದ್ರ ಎಂಬ ಸಮುದ್ರ ವನ್ನು ಕಟ್ಟಿಸಿದನು.[137]

ಅಂತಹದೇ ಮಹಾನ್ ಸಾರ್ವಜನಿಕ ಕಾರ್ಯಗಳಲ್ಲಿ ಒಂದಾದ ಸತ್ರ ಅರವಟಿಕೆಗಳ ನಿರ್ಮಾಣ ಕಾರ್ಯಗಳಲ್ಲೂ ರಾಣಿಯರ ಪಾಲು ಇತ್ತು. ಸತ್ರಗಳಲ್ಲಿ ಹಸಿದು ಬಂದವರಿಗೆ, ಆಹಾರ, ವಿಶ್ರಾಂತಿ ತೆಗೆದುಕೊಳ್ಳಲು ವಸತಿ ದೊರೆಯುತ್ತಿತ್ತು. ಅನ್ನದಾನದ ಮಹಿಮೆಯನ್ನು ಶಾಸನವೊಂದು ಈ ರೀತಿ ಕೊಂಡಾಡಿದೆ.

"ಅನ್ನಾತ್ಪರತರಂ ಲೋಕೇನ ಭತೋ ನಭವಿಷ್ಯತಿ
ಅನ್ನ ಮೂಲಂ ಭವೇತ್ಸರ್ವಂ ಸರ್ವಮನ್ನೇ ಪ್ರತಿಷ್ಠಿತಂ
ಅನ್ನದಃ ಪ್ರಾಣದಃ ಪ್ರೋಕ್ತ ಪ್ರಾಣದಶ್ಚಾಪಿ ಸರ್ವದಃ
ತಸ್ಮಾದನ್ನ ಪ್ರದಾನೇನ ಸರ್ವದಾನಫಲಂ ಲಭೇತ್[138]"

ಸರ್ವದಾನಗಳಲ್ಲಿ ಬಹುಮುಖ್ಯದಾನ ಅನ್ನದಾನ ಈ ದಾನ ಲೋಕದಲ್ಲೇ ಸರ್ವಶ್ರೇಷ್ಠ ಎಂಬ ಮಾತುಗಳಿಂದ ಪ್ರೇರಿತಳಾದ ಜಕ್ಕಿಯಬ್ಬೆ "ದಾನದೊಳನ್ನಮೆ ಸಾರಂ ದೀನನಾಥರ್ಗೆ ತುಷ್ಟಿದಾನಂ" ಎಂಬುದನ್ನು ತಿಳಿದು ಸತ್ರವೊಂದನ್ನು ಕಟ್ಟಿಸಲು ಅದಕ್ಕೆ ಭೂಮಿಯನ್ನು ದಾನವಾಗಿ ತಿಳಿದು ನೀಡಿದ್ದಾಳೆ.[139] ಮಾಂಡಳೀಕ ಬೂತಾರ್ಯನ ರಾಣಿ ಪದ್ಮಬ್ಬರಸಿಯು ತಾನು ಕಟ್ಟಿಸಿದ ಬಸದಿಗೆ ಹೊಂದಿಕೊಂಡಂತೆ ಒಂದು ದಾನ ಶಾಲೆಯನ್ನು ಕಟ್ಟಿಸಿದಳು[140] ಲಚ್ಚಿಯಬ್ಬರಸಿ, ರೇವಕಬ್ಬರಸಿಯರು

---

[137] ಸಿ.ಟಿ.ಎಂ. ಕೊಟ್ರಯ್ಯ, ***ವಿಜಯನಗರ ಸಾಮ್ರಾಜ್ಯದ ನೀರಾವರಿ ವ್ಯವಸ್ಥೆ,*** ಪು–106, ಪ್ರಸಾರಂಗ, ಕನ್ನಡ, 2001, ವಿಶ್ವವಿದ್ಯಾಲಯ, ಹಂಪಿ.

[138] ಎ.ಕ VII, ಶಿಕಾಪುರಿಪುರ, ಶಾ.ಸಂ 185, ಕ್ರಿ.ಶ. 1158.

[139] B.S.I. I –II- ಶಾ.ಸ. 137, ಕ್ರಿ.ಶ. 1092.

[140] B.K. I-I, ಶಾ.ಸಂ–38, ಕ್ರಿ.ಶ. 950

ಸಹ ಮಹಾ ಭೋಜನಕ್ಕೆ ದಾನ ನೀಡಿರುವುದನ್ನು ಕಾಣಬಹುದು. ಚಾಲುಕ್ಯರ ಕಾಲದ ರಾಣಿಯರು ಈ ರೀತಿಯ ಸಾರ್ವಜನಿಕ ಕೆಲಸಗಳಲ್ಲಿಹೆಚ್ಚಾಗಿಯೇ ತೊಡಗಿಸಿಕೊಂಡರು.

ತ್ರೈಲೋಕ್ಯಮಲ್ಲನ ಹಿರಿಯ ರಾಣಿ ಮೈಳಲದೇವಿ ಸಾರಂಗೇಶ್ವರ ದೇವರ ಸತ್ರಕ್ಕೆ ಸಿರಪುರ ಗ್ರಾಮವನ್ನು ಬಿಟ್ಟಿದಳು.[141] ಹಾಗೆಯೇ ಭುವನೈಕ್ಯಮಲ್ಲನ ರಾಣಿ ಕಂಚಲ ಮಹಾದೇವಿ ಮಲ್ಲಿಕಾರ್ಜುನ ದೇವರ ಸತ್ರಕ್ಕೆ ಶಿವಪುರ ಸತ್ರಕ್ಕೆ ದತ್ತಿಯನ್ನು ನೀಡಿ ತುಂಬುಮನದ ಸಹಾಯವನ್ನು ನೀಡಿದ್ದಾಳೆ.[142]

ವೀರನೊಳಂಬದೇವನ ರಾಣಿ ಮಾಳಲದೇವಿ, ಶಾಂತಾರನರಾಣಿ ಚಟ್ಟಲದೇವಿ ಮತ್ತು ತ್ರಿಭುವನ ಮಲ್ಲಿನ ರಾಣಿ ಕೇತಲದೇವಿಯರು ದೇವಾಲಯಗಳಿಗೆ ಹೊಂದಿಕೊಂಡಂತೆ ಸತ್ರ ನಿರ್ಮಾಣದಂತಹ ಸಾರ್ವಜನಿಕ ಸೇವಾ ಕಾರ್ಯಗಳನ್ನು ಮಾಡಿದ್ದಾರೆ.

ಹೀಗೆ ಪ್ರಾಚೀನ ಕಾಲದಲ್ಲಿ ರಾಣಿಯರು ಅದರಲ್ಲೂ ರಾಜಮನೆತನದ ರಾಣಿವಾಸದವರು ಸಾರ್ವಜನಿಕ ರಂಗದಲ್ಲಿ ಪ್ರವೇಶಿಸಿ ಸಾಮಾಜಿಕ ಸೇವಾ ಕಾರ್ಯಗಳನ್ನು ತುಂಬು ಹೃದಯದಿಂದ ಸಾರ್ವಜನಿಕರ ಏಳಿಗೆಗಾಗಿ ನಿರ್ಮಿಸಿರುವುದನ್ನು ಸ್ಮರಿಸಬಹುದು.

### ನೃತ್ಯ ಕಲಾರಂಗದಲ್ಲಿ ರಾಣಿಯರ ಸೇವೆ

ರಾಣಿಯರ ಬಿರುದು ವಿಶೇಷಣಗಳು ಅವರ ಕಲಾಪ್ರೌಢಿಮೆಯನ್ನು ವಿದ್ವತ್ತನ್ನು ಮತ್ತು ಪಾಂಡಿತ್ಯವನ್ನು ಸೂಚಿಸುತ್ತವೆ. ಇದರಿಂದ ಬಹಳಷ್ಟು ಸ್ತ್ರೀಯರು ಕಲಾವಿದೆಯರಾಗಿದ್ದರೆಂದು ತಿಳಿಯಬಹುದು. ಪ್ರಾಚೀನ ಕಾಲದಲ್ಲಿ ಸ್ತ್ರೀಯರಿಗೆ ಉನ್ನತವರ್ಗದವರಿಗೆ, ಶ್ರೀಮಂತ ವರ್ಗದವರಿಗೆ ಮತ್ತು ಇತರೆ ವರ್ಗದವರುಗಳಿಗೆ ಹೋಲಿಕೆ ಮಾಡಿನೋಡಿದಾಗ ಶಿಕ್ಷಣದಲ್ಲಿ ಸಮಾನತೆ ಇರಲಿಲ್ಲ. ಜೊತೆಗೆ ಸ್ತ್ರೀಯರು ವಿದ್ಯಾಭ್ಯಾಸದ ಜೊತೆಗೆ ನೃತ್ಯಕಲೆಗೆ ಹೆಚ್ಚು ಆಸಕ್ತಿ ತೋರುತ್ತಿದ್ದರು.

ಚಾಲುಕ್ಯ ಉದಯಾದಿತ್ಯನ ರಾಣಿ, ಲಚ್ಚಲಾದೇವಿಯ ನರ್ತನವನ್ನು "ಪೊಚ್ಚ ಪೊಸದೇಸೆ ಮಾರ್ಗದೊಳಚ್ಚರಿ ರಸಭಾವ ಮೊಜೆ ಬಹುವಿಧಗತಿಯೂ ಗದೊಳ್ ನಚ್ಚಧಿ ನಿರ್ಬ್ಬಾಣ

---

[141] ಎಸ್.ಐ.ಐ. ix I 119, ಕೊಟ್ಟಪಲ್ಲೆ (ತಾ) ನಂದಿಕೊಟಕೂರು ಕ್ರಿ.ಶ. 1058.

[142] ಎಸ್.ಐ.ಐ. ix, I – 134, ಶಿವಪುರ (ತಾ), ಸಂದಿಕೊಟಕೂರು ಕ್ರಿ.ಶ. 1069.

ಪಾತ್ರವೆಮಿಸಿದ ಪಾತ್ರದಗತಿಯೊಳ್ ವಳಿನ ನರ್ತನ" ಎಂದು ಶಿಕಾರಿಶಾಸನ ಬಣ್ಣಿಸಿದೆ.[143] ಅಂದರೆ ಈ ಶಾಸನ ಲಚ್ಚಲಾದೇವಿ ನೃತ್ಯಕಲೆಯಲ್ಲಿ ಪಾರಾಂಗತಳಾಗಿ ಅಮೋಘ ಕಲಾಸಿದ್ದಿಯನ್ನು ವರವಾಗಿ ಪಡೆದಿದ್ದಳೆಂದು ತಿಳಿಸುತ್ತದೆ.

ಗಂಗ ಪೆರ್ಮಾಡಿಯ ರಾಣಿ ಬಾಚಲದೇವಿಯನ್ನು 'ಅರಿಬಿರುದ ಪಾತ್ರಜಗದಳೆ' ಎಂದೂ 'ನೃತ್ಯ ವಿದ್ಯಾ ಪ್ರಭಾವ ಪ್ರಭುತ್ಯ ನಿರ್ಮ್ಮಳ ಯಶೋವಿಭಾಸಿನಿ.... ಸ್ಥಾನಪಾತ್ರ ಮುಖ ನಣ್ದನೆ ಪ್ರತಿ ಪಕ್ಷಗಾಯಕಾಗಾನ' ಎಂದೂ 'ಚತುರವಿದ್ಯಾ ವಿನೋದೆ' ಎಂದು ಬಹುವಿಧವಾಗಿ ಶಾಸನ ವರ್ಣಿಸಿದೆ. ಬಾಚಲದೇವಿ ತನ್ನ ನೃತ್ಯ ಕೌಶಲ್ಯವನ್ನು ಪ್ರದರ್ಶಿಸಿ ತನ್ನ ಗಂಡನಿಂದ 'ಪಾತ್ರಜಗದಳೆ' ಎಂಬ ಬಿರುದನ್ನು ಸಂಪಾದಿಸಿದಳು. ಎಂಬುದು ಆಲಹಳ್ಳಿಯ ಶಾಸನದಿಂದ[144] ತಿಳಿದುಬರುತ್ತದೆ.

ಶಿಕಾರಿಪುರದ ಶಾಸನದಲ್ಲಿ ಸಂಗೀತ ಪ್ರಸಂಗ ವಿವೇಕ ಚೂಡಾಮಣಿ 'ಪೊಚ್ಚ ಪೊಸ ದೇಸಿ ಮಾರ್ಗ್ಗದೊಳಚ್ಚರಿ ರಸಭಾವದೋಜು ಬಹುವಿಧಗತಿ ಯೊಲ್ ಗದೂಳ್ ನಚ್ಚಣಿ ನಿರ್ಬ್ಬಾಣ ಪಾತ್ರಮೆನಿನೆಟಿ ಪಾತ್ರದ ಗತಿಯೊಳ್ ವಳನ ನರ್ತ್ತನ' ಎಂಬ ಸಾಲುಗಳು ನೃತ್ಯಕ್ಕೆ ಮತ್ತು ಆ ಕಾಲದ ನೃತ್ಯ ಶೈಲಿಯ ಬಗ್ಗೆ ಅನೇಕ ಮಾಹಿತಿಗಳನ್ನೊದಗಿಸುತ್ತದೆ.[145]

ಶಾಸನದ ಮೊದಲ ಸಾಲು ಕಲ್ಯಾಣ ಚಾಲುಕ್ಯ ದೊರೆ ಒಂದನೇ ಸೋಮೇಶ್ವರನ ರಾಣಿ ಲಚ್ಚಲಾದೇವಿಗೆ ಇದ್ದ ಬಿರುದನ್ನು ಬಣ್ಣಿಸುತ್ತದೆ. ಆ ನಂತರದ ಸಾಲುಗಳಲ್ಲಿ ಉಲ್ಲೇಖವಾಗಿರುವ ವಿಷಯಗಳು ಕ್ರಿ.ಶ. ಹನ್ನೊಂದನೇ ಶತಮಾನದ ಹೊತ್ತಿಗೆ ನೃತ್ಯಕ್ಷೇತ್ರದಲ್ಲಿ ನರ್ತನ ಶೈಲಿಯಲ್ಲಿ ಕಂಡುಬರುತ್ತಿದ್ದ ಹೊಸ ಆವಿಷ್ಕಾರಗಳ ಮಾಹಿತಿಯನ್ನು ಒದಗಿಸುತ್ತದೆ.

ಕರ್ನಾಟಕದ ನೃತ್ಯ ಶೈಲಿಯನ್ನು ಶಿಲ್ಪಗಳ ಹಿನ್ನೆಲೆಯಲ್ಲಿ ಅಧ್ಯಯನ ನಡೆಸಿ ಗಮನಿಸಿದಾಗ ಕ್ರಿ.ಶ. ಸುಮಾರು ಒಂಭತ್ತನೇ ಶತಮಾನದವರೆವಿಗೂ ಸ್ಪಷ್ಟವಾಗಿ ನಾಟ್ಯಶಾಸ್ತ್ರದ ಹಿನ್ನೆಲೆಯಲ್ಲಿಯೇ ಬೆಳೆದು ಬಂದ ನೃತ್ಯ ಪದ್ದತಿಯು ಒಂಭತ್ತನೇ ಶತಮಾನದ ಕೊನೆಯ ಹೊತ್ತಿಗೆ ನಾಟ್ಯಶಾಸ್ತ್ರದ ಚೌಕಟ್ಟಿನಿಂದ ಹೊರಬರುತ್ತಾ, ಅಂದರೆ ಮಾರ್ಗ ಪದ್ಧತಿಯಿಂದ ಹೊರಬರುತ್ತಾ ಹೊಸ ಆವಿಷ್ಕಾರಗಳಿಗೆ ತನ್ನನ್ನು ತೆರೆದುಕೊಂಡು ಪ್ರಾಂತೀಯ ಶೈಲಿಗಳ ಬೆಳವಣಿಗೆಗೆ ಒತ್ತಾಸೆಯಾಗಿ ದೇಸೀ

143 ಎ.ಕ. VII, ಶಿಕಾರಿಪುರ, ಶಾ.ಸಂ 109, ಕ್ರಿ.ಶ. 1070.

144 ಎ.ಕ VII – 1 - ಶಾ.ಸಂ 67, ಕ್ರಿ.ಶ. 1113, (ಹಳೆ ಆವೃತ್ತಿ)

145 ಎ.ಕ VIII, ಶಿಕಾರಿಪುರ, ಶಾ.ಸಂ. 109, ಕ್ರಿ.ಶ. 1070, (ಹಳೆ ಆವೃತ್ತಿ)

ಪದ್ಧತಿ, ದೇಸಿ ನೃತ್ಯಗಳ ಪ್ರಚಲಿತಕ್ಕೆ ಪರ್ವಕಾಲವಾಗಿ ಪರಿಣಮಿಸಿತು. ಕ್ರಿ.ಶ. ಸುಮಾರು ಹನ್ನೊಂದು ಹಾಗೂ ಹನ್ನೆರಡನೇ ಶತಮಾನದ ಹೊತ್ತಿಗೆ ಸ್ಪಷ್ಟವಾಗಿ ನಾಟ್ಯ ಶಾಸ್ತ್ರಕ್ಕಿಂತ ಭಿನ್ನವಾಗಿ ಹೊಸ ಶೈಲಿಗಳು ರೂಢಿಗೆ ಬಂದಿದ್ದನ್ನು ಶಾಸ್ತ್ರ ಗ್ರಂಥಗಳು ಸಾಹಿತ್ಯ ಕೃತಿಗಳು, ಶಿಲ್ಪಗಳು ಸಾಕ್ಷಿಯಾಗಿ ಪ್ರಚುರಪಡಿಸುತ್ತವೆ. ಈ ಮನ್ವಂತರದ ಪರ್ವಕಾಲದಲ್ಲಿಯೇ ಹೊರಡಿಸಲಾಗಿರುವ ಈ ಶಾಸನದ ದಾಖಲೆ ಬಹಳ ಸ್ಪಷ್ಟವಾಗಿ ಹೊಸದಾಗಿ ಅಸ್ತಿತ್ವಕ್ಕೆ ಬರುತ್ತಿರುವ ದೇಸೀ ಪದ್ಧತಿಯೊಡನೆ ನಾಟ್ಯಶಾಸ್ತ್ರದ ಪ್ರಕಾರಗಳನ್ನು ಅಳವಡಿಸಿಕೊಂಡು ರಸ, ಭಾವಗಳನ್ನು ಬಹಳ ಲೀಲಾಜಾಲವಾಗಿ ಅನೇಕ ವಿಧವಾಗಿ ಪ್ರಸ್ತುತ ಪಡಿಸುತ್ತಾ ಎಲ್ಲರಲ್ಲಿ ಉತ್ತಮವಾದ ಹಾಗೂ 'ಲಕ್ಷಣ ನರ್ತಕ್ಕಿ' ಎಂದು ಹೆಸರು ಪಡೆದು ಒಬ್ಬ ಪ್ರಬುದ್ಧ ನರ್ತಕಿಯ ಸ್ಥಾನದಲ್ಲಿರುವ ಲಚ್ಚಲಾದೇವಿಯು ಅನೇಕ ಗತಿ ಬೇಧಗಳ ಸಹಾಯದಿಂದ ಛಲನ ನರ್ತನಗಳೆಂಬ ವಿವಿಧ ಭೇದಗಳನ್ನು ನರ್ತಿಸಿದಳೆಂದು ಶಾಸನ ಬಹುರಸವತ್ತಾಗಿ ವರ್ಣಿಸಿದೆ.

ಹೊಯ್ಸಳ ಸಾಮ್ರಾಜ್ಯದಲ್ಲಿ ಚಾಮಲದೇವಿ, ಪದುಮಲದೇವಿ ಹಾಗೂ ಬೊಪ್ಪಾದೇವಿಯರು ಹೊಯ್ಸಳರ ಮೊದಲನೆಯ ಬಲ್ಲಾಳನ ಮೂರು ಜನ ರಾಣಿಯರಾಗಿದ್ದು ಸಂಗೀತದಲ್ಲಿ ನೃತ್ಯಕಲೆಗಳಲ್ಲಿ ಪರಿಣಿತರಾಗಿದ್ದು 'ಮೂರು ರಾಯ ಕಟಕ ಪಾತ್ರ ಜಗದಳೆ' ಎಂದು ಹೆಸರು ಗಳಿಸಿದ್ದರು.[146] ಈ ಮೊದಲೇ ಉಲ್ಲೇಖಿತಳಾದ ಬಾಚಲದೇವಿ ನೃತ್ಯವಿದ್ಯಾಪ್ರಭಾವ, ಪ್ರಭೂತ ನಿರ್ಮ್ಮಳಯ ಶೋವಿಭಾಸಿನಿ, ಸ್ಥಾನಪಾತ್ರಮುಖ ಮಣ್ಡನೆ, ಪ್ರತಿಪಕ್ಷ ಗಾಯಕಾಗಾನ, ಮಾನಪರಿಖಂಡನೆ, ಚತುರವಿದ್ಯಾ ವಿನೋದೆ, ಅರಿಬಿರುದ ಪಾತ್ರ ಜಗದಳೆ, ಎಂಬ ಬಿರುದುಗಳನ್ನು ಸಂಪಾದಿಸಿದ್ದಳು.

"ಎರಗದರಾತಿ ಭೂಜರ ನಾಟಿಯೊಳಂಜಿಸುತಂ ನಿಜಾಂಪ್ರಿಗ
ಳ್ಗೆರಗಿ ಸುತಿರ್ಪ್ಪು ದರ್ಪ್ಪದ ಪೊಡ...... ಗಣ್ಡ ಪ್ಪುತ
ನ್ನೆರೆಯನ ನಾಟಕಂ ತನಗೆ ಗಂಗಮಹೀಭುಜನಂ ವಿಳಾಸದಿಂ
ಎರಗಿಸಿ..... ಭಾಗ್ಯಭರದುಂನತಿ ಬಾಚಲದೇವಿ ಗೊಪ್ಪುಗುಂ[147]

ಕಲ್ಯಾಣ ಚಾಲುಕ್ಯರ ನಂತರ ಹೊಯ್ಸಳ ವಂಶದ ಶಿಲ್ಪಗಳನ್ನು ಗಮನಿಸಿದಾಗ ಅವರ ಕಾಲದ ನೃತ್ಯಶೈಲಿಯನ್ನು ಮತ್ತು ನೃತ್ಯರಂಗವನ್ನು ಅರಿಯಬಹುದು. ಕರ್ನಾಟಕದ ನೃತ್ಯ ಕಲೆಯ ಇತಿಹಾಸದಲ್ಲಿ ಹೊಯ್ಸಳ ವಿಷ್ಣುವರ್ಧನನ ಪಟ್ಟದ ಮಹಿಷಿ ಶಾಂತಲೆಯ ಸ್ಥಾನ ಉನ್ನತವಾಗಿದೆ.

---

[146] ಎಸ್.ಐ.ಐ IX-I, 330, ಹೂವಿನ ಹಡಗಲಿ, ಕ್ರಿ.ಶ. 1212 ಮತ್ತು ಇತರೆ.

[147] ಸೌತ್ ಇಂಡಿಯನ್ ಇನ್ಸ್ಕ್ರಿಪ್ಸನ್ಸ್, ಭಾಗ IX. I ವಿಭಾಗದ ನಂ. 119ನೇ ಕೊಟ್ಟಪಲ್ಲೆ ತಾಲ್ಲೂಕಿನ, ನಂದಿಕೊಡಕೂರು ಕ್ರಿ.ಶ. 1058ರ ಶಾಸನ, ವಿವರಿಸಿದೆ.

ಶಾಂತಲೆಯನ್ನು 'ವಿಚಿತ್ರನರ್ತನ ಪಾತ್ರ ಶಿಖಾಮಣಿ'[148] ಎಂದೂ, ಭರತಾಗವು ತಿರುಳೆನಿಸಲು ಭಯಕ್ರಮ ನೃತ್ಯಂ ಶಾನ್ತಿದೇವಿಯೋಳ್ ಸೋಗಯಿಸುಗಂ ಎಂಬ ಸಾಲುಗಳು ಶಾಂತಲೆಯ ಮಾರ್ಗ ಮತ್ತು ದೇಸಿ ಪದ್ಧತಿಯ ವಿವಿಧ ನೃತ್ಯಗಳನ್ನು ಸುಕುಮಾರ, ಉದ್ಧತ ನೃತ್ಯಗಳನ್ನು ಬಹಳ ಲೀಲಾಜಾಲವಾಗಿ ಮಾಡುತ್ತಾ ನರ್ತಿಸುವ ನೃತ್ಯಗಳಿಗೆ ಸೊಗಸನ್ನು ನೀಡುವಂತಹ ಕಲಾವಿದೆಯಾಗಿದ್ದಳು ಎಂಬ ವಿವರಗಳು ದೊರಕುತ್ತವೆ.[149] ಬೇಲೂರಿನ ಅನೇಕ ಶಾಸನಗಳಲ್ಲಿ 'ಸಂಗೀತ ಸಂಗತ ಸರಸ್ವತಿ[150] ಗೀತ ವಾದ್ಯ ಸೂತ್ರಧಾರೆ'[151] ಎಂದು ವಿವಿಧ ಶಾಸನಗಳು ವಿವಿಧ ರೀತಿಯಾಗಿ ಆಕೆಯ ಸಂಗೀತ ಕಲೆಯ ಪಾಂಡಿತ್ಯವನ್ನು ಶಾಸನಗಳು ಬಣ್ಣಿಸಿವೆ.

"ಆ ನೆಗರ್ದ ವಿಷ್ಣುನ್ರಿಪನ ಮನೋನಯ ಪ್ರಿಯೆ ಚಳಾಕಿ ನಿಳಾಳಕಿ ಚಂದ್ರಾನನೆ ಕಾಮನ
ರತಿಯಲು ತಾನೆಣೆ ತೊಣೆ ಸರಿ ಸಮಾನೆ ಶಾಂತಲದೇವಿ॥
ಶಾಂತಲದೇವಿಯ ಗುಣಮಂ ಶಾಂತಲ ದೇವಿಯ ಸಮಸ್ತ ದಾನೋನ್ನತಿಯಂ
ಶಾಂತಲದೇವಿಯ ಶೀಳಮಚಿಂತ್ಯಂ
ಭುವನಯ್ಕ ಚಿಂತಾಮಣಿಯಂ॥ ಸ್ವಸ್ತ್ಯನವರತ ಪರಮ ಕಲ್ಯಾಣಾಭ್ಯುದಯ ಸತತ ಸಹಸ್ರಫಳ
ಭೋಗ ಭಾಗಿಣೀ ದ್ವಿತೀಯ ಲಕ್ಷ್ಮೀ ಸಮಾನೆಂಯುಂ ಸಕಳ ಕಳಾಗಮಾನೊನೆಯು
ರುಗ್ಮಿಣೀ ದೇವಿಯುಂ । ಪತಿಹಿತ ಸತ್ಯಭಾವೆಯುಂ । ವಿವೇಕಯ್ಯ ಬೃಹಸ್ಪತಿಯುಂ ಪ್ರತ್ಯುತ್ಪನ್ನ
ವಾಚಸ್ಪತಿಯುಂ ಮುನಿಜನ ವಿನೇಯ ಜನ ವನೀತೆಯುಂ ಪತಿಬ್ರತಾ ಪ್ರಭಾವ ಪ್ರಸಿದ್ಧ
ಶೀತೆಯುಂ ಸಕಳ ಮಂದಿ ಜನ ಚಿಂತಾಮಣಿಯುಂ । ಉದ್ವಿತ್ತ ಸವತಿ ಗಂಧವಾರಣೆಯುಂ
ಚತುಸ್ಸಮಯಂ ಸಮುದ್ದರಣ ಕಾರಣೆಯಂ ಗೀತವಾದ್ಯ ನೃತ್ಯ ಸೂತ್ರಧಾರೆಯುಂ
ಜನಸಮಯ ಸಮುದಿತ ಪ್ರಕಾರೆಯಂ" ಎಂದು ಬಣ್ಣಿಸಿದರೆ

ಇವಳ ನೈಪುಣ್ಯತೆಗೆ ಬಹುಮುಖ ಪ್ರತಿಭೆಗೆ ಮತ್ತೊಂದು ಶಾಸನ ಈ ರೀತಿ ವರ್ಣಿಸಿದೆ.

"ಸತತಂ ನೋಳ್ಪೊಡೆ ಲಕ್ಷ್ಮೀದೇವತೆ ರಣವ್ಯಾಪಾರದೊಳ್ ಖಳ್ಗದೇ
ವತೆ ಬಣ್ಣಿಂದಮೆ ಭೂಮಿದೇವತೆ ಜನಕ್ಕೆಲ್ಲಂದದಿಂ ಪುಣ್ಯದೇ

---

[148] ಎ.ಕ. IX (ಪರಿಷ್ಕೃತ) ಬೇಲೂರು, ಶಾ.ಸಂ 168, ಕ್ರಿ.ಶ. 1117.

[149] ಎ.ಕ IX (ಪರಿಷ್ಕೃತ) ಬೇಲೂರು, ಶಾ.ಸಂ. 96,

[150] ಎ.ಕ IX (ಪರಿಷ್ಕೃತ) ಬೇಲೂರು, ಶಾ.ಸಂ. 96.

[151] ಎ.ಕ II (ಪರಿಷ್ಕೃತ) ಚಿಕ್ಕಬೆಟ್ಟ, ಶ್ರವಣಬೆಳಗೊಳ, ಶಾ.ಸಂ. 176, ಕ್ರಿ.ಶ. 1131.

ವತೆ ವಾಗ್ದೇವತೆ ವಿದ್ಯೆಯೊಳ್ ಸಕಳ ಕಾರ್ಯೋದ್ಯೋಗದೊಳ್ ಮಂತ್ರದೇ,

ವತೆ ನಾಥಂಗನೆ ಶಾಂತಿದೇವಿಯನ ವಿನ್ನೇವಣ್ಣಿಪಂ ಬಣ್ಣಿಪಂ"[152]

ಈ ಎಲ್ಲ ಹಿನ್ನೆಲೆಯಲ್ಲಿ ವಿವೇಚಿಸಿದಾಗ ಶಾಂತಲೆ ಮತ್ತು ಆಕಾಲದ ನರ್ತಕಿಯರು ನಾಟ್ಯಶಾಸ್ತ್ರವಲ್ಲದೆ, ಆ ಕಾಲಕ್ಕೆ ಪ್ರಚಲಿತದಲ್ಲಿದ್ದ ಸಮಕಾಲೀನ ದೇಸೀ ಪದ್ಧತಿಗಳಲ್ಲಿ ಹೊಸ–ಹೊಸ ನೃತ್ಯಗಳನ್ನು ಮಾಡುತ್ತಿದ್ದರು. ಎಂಬುದು ಬಹಳ ಸ್ಪಷ್ಟವಾಗಿ ತಿಳಿದು ಬರುತ್ತದೆ. ಇದೇ ಮನೆತನಕ್ಕೆ ಸೇರಿದ ವೀರ ಬಲ್ಲಾಳನ ಮಡದಿ ರಾಣಿ ಬಮ್ಮಲಾದೇವಿ 'ಶಾಂತಲೆಯಂತೆ ತನ್ನ ಕಲಾಭಿರುಚಿಯನ್ನು ತೋರ್ಪಡಿಸಿದ್ದಾಳೆ. ಇವಳನ್ನು ವಿವೇಕೈಕ ಗ್ರಹಸ್ಪತಿ ಪ್ರತ್ಯುನ್ನ ವಾಚಸ್ಪತಿ ಗೀತವಾದ್ಯ ನೃತ್ಯ ಸೂತ್ರಧಾರೆ ಎಂದು ಹತ್ತಿ ಹಳ್ಳಿ ಶಾಸನ ಹೊಗಳಿದೆ.

ದಕ್ಷಿಣ ಭಾರತದಲ್ಲಿ ನೃತ್ಯಕಲೆ ವಿಜಯನಗರ ಅರಸರ ಕಾಲದಲ್ಲಿ ತುಳುವ ಅರಸರಲ್ಲಿ ಶ್ರೀಕೃಷ್ಣದೇವರಾಯ, ಅಚ್ಯುತರಾಯ ಹಾಗೂ ಸದಾಶಿವರಾಯರು ಹೆಚ್ಚು ಪ್ರೋತ್ಸಾಹ ನೀಡಿದ್ದರು. ಕೃಷ್ಣದೇವರಾಯನ ಕಾಲದಲ್ಲಿ ಸಂಗೀತ, ನೃತ್ಯ, ಕಲೆಗಳು ಉನ್ನತ ಶಿಖರವನ್ನು ಮುಟ್ಟಿತ್ತು. ನೃತ್ಯದ ಕುರಿತು ವಿದೇಶಿ ಪ್ರವಾಸಿಗರಾದ ಅಬ್ದುಲ್ ರಜಾಕ್, ಫೆಯಾಸ್, ನ್ಯೂನಿಜ್‌ರವರು ವಿವರಣೆ ಹಾಗೇ ಹಜಾರರಾಮಸ್ವಾಮಿ ದೇವಾಲಯ, ಮಹಾನವಮಿ ದಿಬ್ಬ ಇದರ ಗೋಡೆಗಳ ಮೇಲಿನ ಕೆತ್ತನೆಗಳಿಂದ, ಶಿಲ್ಪಗಳಿಂದ ತಿಳಿಯುತ್ತದೆ.[153]

ವಿಜಯನಗರ ಕಾಲದ ವಿಶೇಷವೆಂದರೆ ಬಾಲ್ಯದಿಂದಲೇ ಹೆಣ್ಣುಮಕ್ಕಳಿಗೆ ನೃತ್ಯದ ಶಿಕ್ಷಣ ನೀಡುತ್ತಿದ್ದರು. ವಿದೇಶಿ ಪ್ರವಾಸಿಗರಾದ ಫೆಯಾಸ್ ಅಂದಿನ ನಾಟ್ಯದ ಬಗ್ಗೆ ವಿವರಿಸುತ್ತಾ ರಾಣಿಯರು ಸಹ ನೃತ್ಯವನ್ನು ಬಹಿರಂಗವಾಗಿ ಮನರಂಜನೆಗಾಗಿ ನಾಟ್ಯ ಮಾಡುತ್ತಿದ್ದರೆಂದೂ ಜೊತೆಗೆ ನೃತ್ಯ ಕಲಿಕೆಯಲ್ಲಿ ಅವರ ಆಸಕ್ತಿಯನ್ನು ಕುರಿತು ವಿವರಿಸುತ್ತಾನೆ.[154] ಇದಕ್ಕಾಗಿಯೇ ಸಾರ್ವಜನಿಕ ನೃತ್ಯ ಪ್ರದರ್ಶನಗಳಲ್ಲದೇ ಅರಮನೆಯಲ್ಲಿಯೂ ಹಾಗೆಯೇ ನೃತ್ಯ ಮುಂತಾದ ಕಲಾಪ್ರದರ್ಶನಗಳನ್ನು ಪ್ರದರ್ಶಿಸುತ್ತಿದ್ದರೆಂದು ಜೊತೆಗೆ ರಾಣಿಯರುಗಳಿಗಾಗಿಯೇ ಅರಮನೆಯಲ್ಲಿ ಅನೇಕ ನಾಟ್ಯ ಕಲಾ ಶಾಲೆಗಳಿದ್ದವು. ಇವುಗಳನ್ನು 'ನರ್ತನ ಶಾಲೆ'ಎಂದು ಕರೆಯಲಾಗುತ್ತಿತ್ತು. ಅಂತಃಪುರದಲ್ಲಿ ಅನೇಕ

---

[152] ಎ.ಕ, ಶ್ರವಣಬೆಳಗೊಳ, 132,143,ಕ್ರಿ.ಶ.1123 ಮತ್ತು 1131.

[153] ಚೆನ್ನಕ್ಕ ಎಲಿಗಾರ, **ಪ್ರಾಚೀನ ಕರ್ನಾಟಕದ ರಾಣಿಯರು,** ಪು–14–15. ಚನ್ನಗಂಗ ಪ್ರಕಾಶನ, ಧಾರವಾಡ. 1987,

[154] ಎನ್, ಚಿನ್ನಸ್ವಾಮಿ ಸೋಸಲೆ, **ಸಾಮ್ರಾಜ್ಯ ಮತ್ತು ಸಂಸ್ಥಾನ,** ಪುಟ–92, ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.2004.

ನರ್ತನ ಭಂಗಿಯಲ್ಲಿರುವ ಮೂರ್ತಿಶಿಲ್ಪಗಳನ್ನು ನಿಲ್ಲಿಸುತ್ತಿದ್ದರು. ರಾಣಿಯರು ನೃತ್ಯದ ತರಬೇತಿ ಪಡೆಯುತ್ತಿದ್ದರು ಹಾಗೂ ವಿವಾಹದ ಮುನ್ನಾ ನೃತ್ಯ ಪ್ರದರ್ಶನ ನೀಡುತ್ತಿದ್ದರು ಎಂಬ ವಿಷಯ ಸಾಹಿತ್ಯಗಳಿಂದ ತಿಳಿದು ಬರುತ್ತದೆ. ಕೃಷ್ಣದೇವರಾಯನ ಕಿರಿಯ ರಾಣಿಯಾದ ಚಿನ್ನಾದೇವಿಯು ಹಂಪಿಯ ವಿರುಪಾಕ್ಷ ದೇವಸ್ಥಾನದ ಪ್ರಸಿದ್ದ ನರ್ತಕಿಯಾಗಿದ್ದಳು.

ಕೃಷ್ಣದೇವರಾಯನು ತನ್ನ ದೇವಾಲಯವಾದ ವಿಜಯ ವಿಠ್ಠಲದೇವಾಲಯ ಕಟ್ಟಿಸಿದ ನೆನಪಿಗಾಗಿ ಇಲ್ಲಿ ನೃತ್ಯ ಮಂಟಪವನ್ನು ನಿರ್ಮಿಸಿದನೆಂದು ಈ ನೃತ್ಯ ಮಂಟಪದಲ್ಲಿ ರಾಜ, ನಿತ್ಯ ನೃತ್ಯ ವೀಕ್ಷಣೆ ಮಾಡುತ್ತಿದ್ದರು. ಕೆಲವು ವಿಶೇಷವಾದ ಪೂಜಾ ಸಂದರ್ಭದಲ್ಲಿ ರಾಣಿಯಾದ ಚಿನ್ನಾದೇವಿ ತಿರುಮಲದೇವಿಯರು ಸಹ ರಾಜನ ಮನಸಂತೋಷಪಡಿಸಲು ನೃತ್ಯವನ್ನು ಮಾಡುತ್ತಿದ್ದರು ನೃತ್ಯಕ್ಕಾಗಲೇ ವಿಜಯ ವಿಠ್ಠಲದೇವಾಲಯವನ್ನು ರಾಣಿಯರ ಸಲುವಾಗಿಯೇ ನೃತ್ಯಮಂಟಪವನ್ನು ಕಟ್ಟಿಸಿದನೆಂಬ ಪ್ರತೀತಿ ಇದೆ. ತಿರುಮಲದೇವಿ, ಚಿನ್ನಾದೇವಿ, ಅಲ್ಲದೆ ಕೃಷ್ಣದೇವರಾಯನ ತಾಯಿಯಾದ ನಾಗಲಾದೇವಿಯೂ ಸಹ ವಿವಾಹವಾಗುವ ಪೂರ್ವದಲ್ಲಿ ನರ್ತನ, ನಾಟ್ಯ ಇನ್ನಿತರ ಬಹುವೈವಿಧ್ಯಮಯ ವ್ಯಕ್ತಿತ್ವವನ್ನು ಪಡೆದುಕೊಂಡಿದ್ದಳೆಂದು ತಿಳಿಸುವುದರಿಂದ ನಾಗಲಾದೇವಿಯು ಸಹ ಪ್ರಮುಖ ನರ್ತಕಿಯಾಗಿದ್ದಳೆಂದು ಅಭಿವ್ಯಕ್ತಪಡಲಾಗುತ್ತದೆ.[155] ನೃತ್ಯಕ್ಕಾಗಿಯೇ ಅಂದು ಅನೇಕ ಕೃತಿಗಳು ರಚನೆಗೊಂಡವು. ಅವುಗಳಲ್ಲಿ ಶ್ರೀಕೃಷ್ಣದೇವರಾಯನ 'ಜಾಂಬವತೀ ಕಲ್ಯಾಣ' ಪ್ರಮುಖವಾಗಿದೆ. ಇದು ಸಂಗೀತ ನಾಟ್ಯದ ಬಗ್ಗೆ ವಿವರಣೆ ನೀಡುತ್ತದೆ.[156] ಅಚ್ಚುತ ರಾಯನ 'ತಾಳ ಕಾಲ ವಾರಧಿಯು' ಆಧುನಿಕ ತಾಳದ ತತ್ವಗಳು ಇದರಲ್ಲಿವೆ. ಪೋಲೂಡಿ ಗೋವಿಂದ ಕವಿಯ 'ತಾಳದಶ ಪ್ರಾಣ ಧೀಪಿಕಾ' ಎಂಬ ಗ್ರಂಥವು ನಂಂತರದಾದರು ನೃತ್ಯದ ಬಗ್ಗೆ ಅಧಿಕೃತ ವಿಷಯವನ್ನು ತಿಳಿಸುತ್ತದೆ.

ವಿಜಯವಿಠ್ಠಲ ಸ್ವಾಮಿದೇವಾಲಯವನ್ನು ಕಟ್ಟಿಸಿ ಅಲ್ಲಿ 56 ಸಂಗೀತಕಂಬಗಳನ್ನು ನಿರ್ಮಿಸಿ ಆ ಕಂಬಗಳ ಮೂಲಕ ವಿವಿಧ ರೀತಿಯ ನಾದಸ್ವರಗಳನ್ನು ಹೊರಡಿಸಿರುವುದರಿಮದ ಇದನ್ನು ಸಂಗೀತ ಮಂಟಪವೆಂತಲೂ ಕರೆಯುತ್ತಾರೆ. ಶ್ರೀಕೃಷ್ಣರಾಯನ ರಾಣಿಯರಾದ ಚಿನ್ನಾದೇವಿ,

---

155 ಅದೇ, ಪು–91.

156 ಕೆ. ಮಹೇಶ, ***ಕೃಷ್ಣದೇವರಾಯನ ಕಾಲದ ವೈಷ್ಣವ ದೇವಾಲಯಗಳು,*** ಪು–143, (ಪಿಹೆಚ್.ಡಿ) ಕನ್ನಡ 2002, ವಿಶ್ವವಿದ್ಯಾಲಯ, ಹಂಪಿ, 2002.

ತಿರುಮಲಾದೇವಿಯರು ಸಂಗೀತದ ಪ್ರಮುಖ ವಿದ್ವಾಂಸೆಯರಾಗಿದ್ದರು. ಇವರು ಸಂಗೀತ ವಾದ್ಯಗಳಲ್ಲಿ ಜನಪ್ರಿಯವಾದ ವೀಣೆಯ ವಿದುಷಿಯರಾಗಿದ್ದರು ಎಂಬುದು ವಿಶೇಷ.

ತಿರುಮಲಾದೇವಿಯ ಮತ್ತು ಕೃಷ್ಣದೇವರಾಯನ ಮಗಳಾದ ತಿರುಮಲಾಂಬೆಯು ಸಹ ತನ್ನ ಕೃತಿಯಲ್ಲಿ ಅಭಿಪ್ರಾಯಪಟ್ಟಿರುವಂತೆ ರಾಯನು ತನ್ನ ಮಗಳೊಂದಿಗೆ ಸಮಯ ಕಳೆಯುವಾಗ ಮಗಳ ಚಿತ್ರಗಳನ್ನು ರಾಗ–ಲಾಪನೆಗಳನ್ನು ಮೆಚ್ಚುತ್ತಿದ್ದನೆಂದು ತಿಳಿಸಿರುವುದರಿಂದ ಈಕೆಯು ಸಂಗೀತಬಲ್ಲವಳಾಗಿದ್ದಳೆಂದು ತಿಳಿದುಬರುತ್ತದೆ.[157]

ವಿಜಯನಗರದ ಅರಸರ ಕಾಲದಲ್ಲಿ ಸಂಗೀತ ಮತ್ತು ನೃತ್ಯಗಳು ರಾಜಾಶ್ರಯ ಪಡೆದುಕೊಂಡಿದ್ದವು. ಆಸ್ಥಾನದಲ್ಲಿ ಸಂಗೀತಗಾರ್ತಿಯರು ಹಾಗೂ ನೃತ್ಯಗಾರ್ತಿಯರು ತುಂಬಿತುಳುಕುತ್ತಿದ್ದರೆಂದು ವಿದೇಶಿ ಪ್ರವಾಸಿಗರು ಹೇಳಿರುವುದು ಗಮನಾರ್ಹವಾಗಿದೆ. ಕೃಷ್ಣದೇವರಾಯನು ನಾಟ್ಯ ಸಂಗೀತಗಳೆರಡನ್ನೂ ರಾಘವೇಂದ್ರ ತೀರ್ಥರ ಪೂರ್ವಿಕನಾದ ಕೃಷ್ಣನಿಂದ ಅಭ್ಯಸಿದನೆಂದು ಸಾಹಿತ್ಯವು ತಿಳಿಸುತ್ತದೆ. ಅವನೇ ರಚಿಸಿರುವ ಸಂಸ್ಕೃತ ಗ್ರಂಥವಾಗಿರುವ ‘ಜಾಂಬವತೀ ಕಲ್ಯಾಣ ಸಂಗೀತ ಹಾಗೂ ನಾಟ್ಯದ ಬಗ್ಗೆ ಹೆಚ್ಚಿನ ಬೆಳಕನ್ನು ಚೆಲ್ಲುತ್ತದೆ.[158] ನೃತ್ಯವನ್ನು ರಾಜಕುಮಾರಿಯರು ಅಭ್ಯಾಸ ಮಾಡುತ್ತಿದ್ದರು. ಎಂಬ ವಿಷಯವನ್ನು ವಿವಿಧ ಶಿಲ್ಪಗಳಲ್ಲಿ ಗುರ್ತಿಸಬಹುದಾಗಿದೆ ಹಂಪಿಯ ಮಹಾನವಮಿ ದಿಬ್ಬ, ಹಜಾರರಾಮಸ್ವಾಮಿ ಮತ್ತು ಅಚ್ಯುತರಾಯ ದೇವಾಲಯಗಳ ಮೇಲೆ ಕಂಡುಬರುವ ಶಿಲ್ಪಗಳಲ್ಲಿ ನೃತ್ಯ ವೈಖರಿಯನ್ನು ಪ್ರತಿನಿಧಿಸುತ್ತವೆ.[159] ಭರತ ನಾಟ್ಯ ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ಪ್ರಮುಖ ನೃತ್ಯದ ಮಾರ್ಗದ ವಿಧವಾಗಿತ್ತು.

ತುಳುವ ವಂಶದ ಶ್ರೀಕೃಷ್ಣದೇವರಾಯನ ಪ್ರೀತಿ ಪಾತ್ರದ ಒಲುಮೆ ರಾಣಿಯಾಗಿದ್ದ ಚಿನ್ನಾದೇವಿ. ಸಮಕಾಲೀನ ಕವಿಯಾದ ಅಲ್ಲಸಾನಿ ಪೆದ್ದನ್ನನು ತನ್ನ ಮನುಚರಿತದಲ್ಲಿ ಚಿನ್ನಾದೇವಿ ಒಬ್ಬ ನರ್ತಕಿಯಾಗಿದ್ದಳೆಂದು, ಭುವನೈಕ್ಯ ಸುಂದರಿಯಾಗಿದ್ದಳೆಂದೂ ತಿಳಿಸಿದ್ದಾನೆ.[160] ಒಟ್ಟಾರೆ ಇಲ್ಲಿ ಗಮನಿಸಬೇಕಾದ ವಿಷಯವೆಂದರೆ ಕಲ್ಯಾಣಿ ಚಾಲುಕ್ಯ ಮನೆತನದಿಂದ ಉನ್ನತ ವರ್ಗದ ಕುಟುಂಬದ ಸ್ತ್ರೀಯರು ಸಂಪೂರ್ಣವಾಗಿ ಕಲೆ, ನೃತ್ಯ ವಿಶೇಷಣಗಳಲ್ಲಿ ತೊಡಗಿಸಿಕೊಂಡಿದ್ದರು. ಸಾಮಾನ್ಯ

---

[157] ಸರೋಜಿನಿ ಮಹಿಷಿ, ***ಕರ್ನಾಟಕದ ಕವಯಿತ್ರಿಯರು,*** ಪುಟ, ಕರ್ನಾಟಕದ ಸಹಕಾರಿ ಸಾಹಿತ್ಯ ಸಂಘ, ಧಾರವಾಡ. 1965,

[158] ವಿಜಯನಗರ ಅಧ್ಯಯನ, ಸಂ–13, ಪುಟ–381.

[159] ಅದೇ, ಸಂ–2, ಪು–8.

[160] ಕುಂ. ವೀರಭದ್ರಪ್ಪ, ***ಶ್ರೀ ಕೃಷ್ಣದೇವರಾಯ, ಪು–22–25.*** ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2001.

ವರ್ಗದ ಮಹಿಳೆಯರು ತಮ್ಮ ನೈಪುಣ್ಯತೆಯಿಂದ ಸ್ವಂತ ಬಲದ ಮೂಲಕ ಸಮಾಜದಲ್ಲಿ ಕಂಗೊಳಿಸುತ್ತಿದ್ದರು. ಇಂತಹ ವರ್ಗದಲ್ಲಿ ಬೆಳಕಿಗೆ ಬಂದ ಮೊದಲ ಸ್ತ್ರೀ 'ಸಾವಿ ನಿರ್ಮ್ಮಡಿ' ಈಕೆಯನ್ನು "ನಾಗಾರ್ಜುನಯ್ಯ ನಂದಿಂಗೆ-ಯಬ್ಬೆಯರ ಮಗಳು ಸಾಮಿನಿರ್ಮಡಿ ಸರ್ವಶಾಸ್ತ್ರ ಪ್ರಸಿದ್ಧಿ"ಎಂಬ ವಿಷಯವನ್ನು ಕ್ರಿ.ಶ. 900ರ ಶಾಸನ ತಿಳಿಸುತ್ತದೆ.[161]

ಹೀಗೆ ಸ್ತ್ರೀಯರ ವಿದ್ಯಾಭ್ಯಾಸವು ಮುಖ್ಯವಾಗಿ ಕಲೆಗಳ ಕಡೆ ಒಲಿದಿತ್ತೆಂದೂ, ಸಾಮಾನ್ಯವರ್ಗದ ಸ್ತ್ರೀಯರು ಸಾಮಾನ್ಯವಾಗಿ ಅವಿದ್ಯಾವಂತರಾಗಿಯೇ ಉಳಿಯುತ್ತಿದ್ದರೆಂದೂ ಸ್ಥೂಲವಾಗಿ ಹೇಳಲು ಸಾಧ್ಯವಾಗುತ್ತದೆ. ಸಾಮಾನ್ಯ ವರ್ಗದ ಸ್ತ್ರೀಯರಲ್ಲಿ ದೇವದಾಸಿಯರು, ಗೀತ, ನರ್ತನ ಮುಂತಾದ ಕಲೆಗಳಲ್ಲಿ ಪರಿಣಿತರಾಗುತ್ತಿದ್ದು ಈ ಮೂಲಕ ಕರ್ನಾಟಕದ ನೃತ್ಯ ಕಲಾ ರಂಗಕ್ಕೆ ವಿಶಿಷ್ಠವಾದ ಸೇವೆಯನ್ನು ನೀಡಿ ಸಾಮಾಜಿಕ ಕ್ಷೇತ್ರದಲ್ಲಿ ತಮ್ಮನ್ನು ಗುರುತಿಸಿಕೊಳ್ಳುವಲ್ಲಿ ಯಶಸ್ವಿಯಾಗಿದ್ದಾರೆ.

### 3.3 ಧಾರ್ಮಿಕ ಕ್ಷೇತ್ರದಲ್ಲಿ ರಾಣಿಯರು-ಅವರ ಕೊಡುಗೆಗಳು

ಕನ್ನಡ ನಾಡಿನ ಜನ ಪ್ರಾಚೀನಾದಿಯಿಂದಲೂ ಎಲ್ಲಾ ಧರ್ಮಗಳನ್ನು ಸ್ವಾಗತಿಸಿದ್ದಾರೆ. ಸಹನೆ, ಸಹಿಷ್ಣುತೆಗಳಿಂದ ಸ್ವೀಕರಿಸಿದ್ದಾರೆ. ಪ್ರಾಚೀನ ಕರ್ನಾಟಕದ ಇತಿಹಾಸವನ್ನು ಅವಲೋಕಿಸಿ ನೋಡಿದಾಗ ಚರಿತ್ರೆಯ ಕಾಲದಲ್ಲಿ, ನಂದರು, ಮೌರ್ಯರು, ಶಾತವಾಹನರು ಚುಟುಗಳು, ಬಾಣರು, ಅಳೂಪರು, ಸೇಂದ್ರಕರು, ನಳರು, ಪುನ್ನಾಟರು ಪಲ್ಲವರು, ಕದಂಬರು, ನೊಳಂಬರು, ಗಂಗರು, ಬಾದಾಮಿ ಚಾಲುಕ್ಯರು, ಕಲ್ಯಾಣ ಚಾಲುಕ್ಯರು, ಹೊಯ್ಸಳರು, ಸೇವುಣರು, ಕಳಚೂರಿಗಳು, ಚೋಳರು ಶಿಲಾಹಾರರು, ಸಾಂತಾರರು, ಸಾಳುವರು, ಗೋವೆಯ ಮತ್ತು ಹಾನಗಲ್ಲ ಕದಂಬರು, ಸಿಂದರು, ಗುತ್ತರು, ಸೇನಾರರು, ಸಾಳುವರು, ಚಂಗಾಳ್ವರು, ಕೊಂಗಾಳ್ವರು, ಪಾಂಡ್ಯರು, ವಿಜಯನಗರದವರು, ಮೈಸೂರಿನವರು ಇನ್ನಿತರ ಮನೆತನದವರು ರಾಜಕೀಯ ಮೇಲಾಟಗಳಲ್ಲಿ, ಕನ್ನಡ ನಾಡಿನ ವಿವಿಧ ಸೀಮೆಗಳನ್ನು ಕಾಲದಿಂದ ಕಾಲಕ್ಕೆ ತಮ್ಮ ಹಿಡಿತಕ್ಕೆ ಒಳಪಡಿಸಿಕೊಳ್ಳುತ್ತ ಹೋಗಿರುವುದು ಈ ನಾಡಿನ ಗಣ್ಯಗತ ಇತಿಹಾಸ. ಕನ್ನಡ ಮಾತೆಯನ್ನು ಸಾಮ್ರಾಜ್ಯ ಲಕ್ಷ್ಮಿಯಾಗಿ ಮೆರೆಸಿದ ಸತ್ವಶಾಲಿ ಜನತೆ ಕನ್ನಡ ನಾಡಿನ ಜನತೆ.[162]

---

[161] ಎ.ಕ X, ಬೌರಿಂಗ್ ಪೇಟೆ, ಶಾ.ಸಂ 65, ಕ್ರಿ.ಶ. 900.

[162] ಡಾ.ಟಿ.ವಿ. ವೆಂಕಟಾಚಲ ಶಾಸ್ತ್ರಿ, **ನಮ್ಮ ನಾಡು ಕರ್ನಾಟಕ,** ಪು-79.

ಪ್ರಾಚೀನ ಭಾರತೀಯ ತಾತ್ವಿಕ ಸಿದ್ಧಾಂತಗಳಲ್ಲಿ ಧರ್ಮವೆಂಬುದು ಆತ್ಮ.[163] ವಿಶಾಲ ಕರ್ನಾಟಕದಲ್ಲಿ ಬಾಳಿದ ಬದುಕಿದ ಸಕಲ ಧರ್ಮಗಳು ಆರಂಭದಿಂದ 16ನೆಯ ಶತಮಾನದವರೆಗೆ ಧರ್ಮ ಇತಿಹಾಸ ಸಂಸ್ಕೃತಿಯಲ್ಲಿ ಕಂಡುಬಂದ ಏಕತೆ ಸಾಮರಸ್ಯ ಗಮನಾರ್ಹವಾದುದ್ದು. ಪ್ರಾಚೀನ ರಾಜಮನೆತನಗಳು ಕೇವಲ ರಾಜಕೀಯಕ್ಕೆ ಮತ್ತು ಸಾಮ್ರಾಜ್ಯ ವಿಸ್ತರಣೆಗೆ, ಯುದ್ಧಗಳಿಗೆ ಮಾತ್ರ ಗಮನ ಕೊಡದೆ, ಸಾಂಸ್ಕೃತಿಕ ಪರಂಪರೆಯನ್ನು ಸಹ ಶ್ರೀಮಂತಗೊಳಿಸಿದರು ಎಂಬುದರಲ್ಲಿ ಉರುಳಿಲ್ಲ. ರಾಜಮನೆತನಗಳಲ್ಲಿನ ಒಂದು ಭಾಗವಾದ ರಾಣಿಯರೂ ಸಹ ತಮ್ಮ ಅಧಿಕಾರ, ಪ್ರಭಾವ ಮತ್ತು ಕೀರ್ತಿ ಆಕಾಂಕ್ಷೆಗಳಿಂದ ಧಾರ್ಮಿಕ ರಂಗವನ್ನು ಪ್ರವೇಶಿಸಿ ಧಾರ್ಮಿಕ ಕಾರ್ಯಗಳನ್ನು ನೆರವೇರಿಸಿರುವ ವಿವರಗಳನ್ನು ಕಾಣಬಹುದು. ರಾಣಿಯರ ಆಡಳಿತ, ಸಂತೃಪ್ತಿ ಮತ್ತು ಕೀರ್ತಿಕಾಂಕ್ಷೆಗಳೇ ಇವರನ್ನು ಧಾರ್ಮಿಕ ರಂಗಕ್ಕೆ ತೊಡಗಿಸಿಕೊಳ್ಳುವಂತೆ ಮಾಡಿ ಧರ್ಮಪ್ರೇಮಿಗಳನ್ನಾಗಿ ಮಾಡಿತ್ತು.

ಪ್ರಾಚೀನ ಕಾಲದಿಂದಲೂ ಮಹಿಳೆ ಕೌಟುಂಬಿಕ ಕ್ಷೇತ್ರವನ್ನು ಬಿಟ್ಟರೆ ಮಹಿಳೆ ಪಾದಾರ್ಪಣೆ ಮಾಡಬಹುದಿದ್ದ ಬಹಳ ಸರಳ ಮತ್ತು ವಿಶ್ವಾಸನೀಯ ಕ್ಷೇತ್ರವೆಂದರೆ ಧರ್ಮ. (ಧಾರ್ಮಿಕ ಕ್ಷೇತ್ರ.) ಧರ್ಮ ಸಂಸ್ಕೃತಿಯ ವಿಕಾಸದಲ್ಲಿ ಮಹತ್ತರ ಪಾತ್ರವಹಿಸಿದೆ. ಧರ್ಮ ಪ್ರಾರಂಭದಲ್ಲಿ ಮನುಕುಲದ ಸೂಚಕವಾಗಿದ್ದರೂ ಸಹ ನಂತರದಲ್ಲಿ ಮತ, ಪಂಥಗಳಾಗಿ ಹೊರಹೊಮ್ಮಿ ಬೆಳೆಯಿತು. ಈ ಕ್ಷೇತ್ರದಲ್ಲಿ ರಾಜಮನೆತನಗಳ ರಾಣಿಯರು ಮತ್ತು ಉನ್ನತ ವರ್ಗದ ಮಹಿಳೆಯರು ತಮ್ಮ ಅಗಾಧವಾದ ಸೇವೆಯನ್ನು ನೀಡುವುದರೊಂದಿಗೆ ತಮ್ಮ ಕೊಡುಗೆಗಳನ್ನು ದಾಖಲಿಸಿದ್ದಾರೆ.

ಧರ್ಮವೆಂದಾಗ ನಮಗೆ ನೆನಪಿಗೆ ಬರುವುದು ಜೈನಧರ್ಮ, ಬೌದ್ಧಧರ್ಮ, ಹಿಂದೂ ಧರ್ಮ, ವೈಷ್ಣವಧರ್ಮ ಮತ್ತು ವೈಧಿಕಧರ್ಮ. ಧರ್ಮವೆಂಬುದು ರೂಢಿ ಸಂಪ್ರದಾಯವೆಂಬುದೇ ನಮ್ಮ ಅಭಿಪ್ರಾಯ ಹಾಗಾಗಿ ಮೇಲಿನ ಧರ್ಮಗಳನ್ನು ಪ್ರಾಚೀನ ರಾಜಮನೆತನಗಳು ತಮ್ಮ ಆಡಳಿತಾವಧಿಯಲ್ಲಿ ಹಲವಾರು ಕಾರಣ ಸಂದರ್ಭಗಳಲ್ಲಿ ಪ್ರೋತ್ಸಾಹಿಸಿ ಬೆಳೆಸಿವೆ. ಈ ಪ್ರೋತ್ಸಾಹದಲ್ಲಿ ರಾಣಿಯರ ಪಾಲು ಹೆಚ್ಚಿನದು ಎಂಬುದನ್ನು ನಾವು ಮರೆಯುವಂತಿಲ್ಲ.

---

[163] ಡಾ. ಚೆನ್ನಕ್ಕ ಪಾವಟೆ, ಸಂಸ್ಕೃತಿ ಅಧ್ಯಯನ, ಪು–47.

ಮೇಲಿನ ಕಾರಣದಿಂದಾಗಿ ಧಾರ್ಮಿಕ ಕ್ಷೇತ್ರದಲ್ಲಿ ರಾಣಿಯರ ಕೊಡುಗೆಗಳನ್ನು ಈ ರೀತಿಯಾಗಿ ನೋಡಬಹುದಾಗಿದೆ.

1) ಜೈನಧರ್ಮಕ್ಕೆ ರಾಣಿಯರ ಕೊಡುಗೆಗಳು
2) ಬೌದ್ಧ ಧರ್ಮದ ಪೋಷಕರಾಗಿ ರಾಣಿಯರು
3) ಶೈವ ಧರ್ಮ ಮತ್ತು
4) ವೈಧಿಕ ಧರ್ಮದಲ್ಲಿ ರಾಣಿಯರು

**1) ಜೈನ ಧರ್ಮಕ್ಕೆ ರಾಣಿಯರ ಕೊಡುಗೆಗಳು.**

ಕರ್ನಾಟಕ ಪ್ರಾಚೀನ ಧರ್ಮಗಳಲ್ಲಿ ಅಹಿಂಸಾ ಪ್ರಧಾನವಾದ ಜೈನಧರ್ಮ ಪ್ರಮುಖವಾಗಿದೆ. ಕನ್ನಡ ನಾಡಿಗೂ, ಜೈನಧರ್ಮಕ್ಕೂ ಇರುವ ಸಂಬಂಧ ತುಂಬಾ ನಿಕಟವಾದದ್ದು ಮತ್ತು ನಿರಂತರವಾದದ್ದು. ಹೆಚ್ಚು ಕಡಿಮೆ ಕರ್ನಾಟಕದ ಇತಿಹಾಸವೆಂದರೆ ಜೈನಧರ್ಮದ ಇತಿಹಾಸವೆಂದೇ ಎಂಬುದು ಎಂದು ಕಮಲಾ ಹಂಪನ ಅವರು ಅಭಿಪ್ರಾಯಪಡುತ್ತಾರೆ.[164] ಜೈನಧರ್ಮ ಹಲವು ಶತಮಾನಗಳವರೆಗೆ ಕರ್ನಾಟಕದ ರಾಷ್ಟ್ರೀಯ ಧರ್ಮವಾಗಿತ್ತು. ಶಾಸನ ಕವಿಯೊಬ್ಬ ಕರ್ನಾಟಕ ದೇಶವನ್ನು, ಜೈನಧರ್ಮವನ್ನು ಹೀಗೆ ಪರಿಚಯಿಸುತ್ತಾನೆ.

'ಜಿನ ಧರ್ಮಾವಾಸಮಾದಿತ್ತಮಳ ವಿನಯದಾಗಾರ ಮಾದತ್ತು ಪದ್ಮಾ
ಸನ ಸಿರ್ಪಾ ಸದ್ಮಮಾದತ್ತೆತ್ತಿ ವಿಶದ ಯಶೋಧಾಮ ಮಾದತ್ತುವಿದ್ಯಾ
ಧನ ಜನ್ಮಸ್ಥಾನ ಮಾದತ್ತಸಮ ತರಳ ಗಂಭೀರ ಸದ್ಗೇಹ ಮಾದ
ತ್ತೆ ನಿಸಲ್ಕಿಂತುಳ್ಳ ನಾನಾ ಮಹಿಂಎಯೊಳೆಸೆಗುಂ ಚಾರು ಕರ್ನಾಟಕ ದೇಶಂ"[165]

ಅಂದರೆ ಚೆಲುವಾದ ಕನ್ನಡ ನಾಡು ಜೈನ ಧರ್ಮಕ್ಕೆ ಆವಾಸಸ್ಥಾನವಾಗಿದೆ ಎಂಬುದು ಈ ಪದ್ಯದ ಸಂಪೂರ್ಣ ಸಾರಾಂಶವಾಗಿದೆ.

---

[164] ಕಮಲಾ ಹಂಪನಾ, **ಕರ್ನಾಟಕದಲ್ಲಿ ಜೈನ ಧರ್ಮ, ಅವಲೋಕನ, ಕರ್ನಾಟಕ ಪರಂಪರೆ ಸಮೀಕ್ಷೆ** ಪು–163. 1985,
[165] ಅದೇ,

ಇಂತಹ ಮಹತ್ತರವಾದ ಜೈನಧರ್ಮಕ್ಕೆ ಹಲವಾರು ಪ್ರಾಚೀನ ರಾಜಮನೆತನಗಳು ಪ್ರೋತ್ಸಾಹ ನೀಡಿ. ಪುಷ್ಠಿನೀಡಿ ಸತ್ಕರಿಸಿವೆ. ಈ ರಾಜಮನತನಗಳಲ್ಲಿನ ರಾಣಿಯರೂ ಸಹ ಜೈನಧರ್ಮದಲ್ಲಿ ಬಹುಮುಖ್ಯ ಕೊಡುಗೆಗಳನ್ನು ನೀಡಿದ್ದಾರೆ. ಜೈನ ಸಂಪ್ರದಾಯಗಳಲ್ಲಿ ರಾಣಿಯರೂ ಹೆಚ್ಚಿನ ಗಮನ ನೀಡಿರಬಹುದಾದ ಅವಕಾಶವಿದೆ ಎಂಬುದು ನಮ್ಮ ಅಭಿಪ್ರಾಯ. ಬಹುಕಾಲದ ಹಿಂದೆಯೇ ಕರ್ನಾಟಕವನ್ನು ಪ್ರವೇಶಿಸಿದ ಜೈನಧರ್ಮದ ಪ್ರಥಮ ನೆಲೆ 'ದಕ್ಷಿಣ ಕಾಶಿ'ಯೆಂದೇ ಪ್ರಸಿದ್ಧಿಯಾಗಿರುವ ಶ್ರವಣ ಬೆಳಗೊಳ[166] ಈಗಾಗಲೇ ತಿಳಿದಿರುವಂತೆ ಜೈನಧರ್ಮಕ್ಕೆ ಹೆಚ್ಚಿನ ಒಲವನ್ನು ನೀಡಿರುವರು ಪ್ರಭುವರ್ಗದವರು ನಮ್ಮ ಅಧ್ಯಯನದ ಕಾಲಮಾನದ ಆರಂಭ. ಕಾಲಕ್ಕಾಗಿಯೇ ಕ್ರಿ.ಶ. ನಾಲ್ಕನೇ ಶತಮಾನದಲ್ಲಿ ಕದಂಬರು ಕರ್ನಾಟಕದಲ್ಲಿ ಆಳ್ವಿಕೆ ಮಾಡುವಾಗ ಜೈನಧರ್ಮ ಸಾಕಷ್ಟು ಪ್ರಚಲಿತದಲ್ಲಿತ್ತು ಎಂಬುದಾಗಿ ಹೇಳಲಾಗಿದೆ.

ಕದಂಬ ಮನೆತನದವರು ಜೈನಧರ್ಮಕ್ಕೆ ನೀಡಿರುವ ಕೊಡುಗೆಗಳನ್ನು ಅವಲೋಕಿಸಿದರೆ ನಿವೇದಿತವಾಗುತ್ತದೆ. ಕದಂಬ ಮನೆತನ ಜೈನಧರ್ಮಕ್ಕೆ ಸ್ವಲ್ಪ ಪ್ರೋತ್ಸಾಹ ನೀಡಿತು. ಇದನ್ನು ಹಲಸಿಯ ತಾಮ್ರ ಪಟದಲ್ಲಿನ[167] ಮಾಹಿತಿಗಳ ಅನ್ವಯ ಯುವರಾಜನಾಗಿದ್ದ ಕಕುಸ್ಥವರ್ಮ ಪಲಾಶಿಕೆಯಲ್ಲಿದ್ದಾಗ (ಹಲಸಿ) ಅರ್ಹಂತರಿಗೆ ಭೂಮಿಯನ್ನು ದಾನ ಮಾಡಿದ ವಿಷಯ[168] ಇನ್ನೊಂದು ತಾಮ್ರಪಟದಲ್ಲಿ ಮೃಗೇಶವರ್ಮ ತನ್ನ ತಂದೆ ಶಾಂತಿವರ್ಮನ ನೆನಪಿನಾರ್ಥ ಪಲಾಶಿಕಾದಲ್ಲಿಯೇ ಜಿನಾಲಯವನ್ನು ಕಟ್ಟಿಸಿದ್ದಾನೆ.[169] ಇವನು ಬೃತ್ಪರಲೂರಿನಲ್ಲಿದ್ದ ಚೈತ್ಯಾಲಯಕ್ಕೆ ಸುಣ್ಣ ಬಳಿಸಿ ಜೋರ್ಣೋದ್ದಾರ ಮಾಡಲು ದಾನ ನೀಡಿದ್ದಾನೆ.[170] ಹಲಸಿಯಲ್ಲಿ ನಿರ್ಮಿಸಿದಂತಹ ಜಿನಾಲಯದ ಬಸದಿಯಲ್ಲಿ ಪ್ರತಿ ಹುಣ್ಣಿಮೆಯ ದಿನದಂದು ಜಿನಾಭಿಷೇಕ ನಡೆಯುತ್ತಿತ್ತೆಂದು ಶಾಸನ ವಿವರಿಸಿದೆ. ಪ್ರತಿವರ್ಷ ನಡೆಸುವ ಅಷ್ಟಾಹ್ನಿಕ ಪೂಜೆಯ ಸಲುವಾಗಿ ಹರಿವರ್ಮನು ಈ ಬಸದಿಗೆ ದಾನ ನೀಡಿದ್ದಾನೆ.[171] ಇದರಿಂದಾಗಿ ಕ್ರಿ.ಶ. ಐದನೇ, ಆರನೆಯ ಶತಮಾನದಲ್ಲಿ ಹಲಸಿಗೆಯು ಒಂದು ಪ್ರಮುಖ ಜೈನ ಕ್ಷೇತ್ರವಾಗಿತ್ತೆಂದು, ಜೈನಧರ್ಮ ಇತರ ಧರ್ಮಗಳಿಗಿಂತ, ಹೆಚ್ಚಿನ ಅವಕಾಶ ಪಡೆದಿತ್ತು

---

166 ಶ್ರವಣ ಬೆಳಗೊಳದ ಹಿನ್ನೆಲೆಯನ್ನು, ಅಲ್ಲಿ ಲಭ್ಯವಿರುವ ಶಾಸನಗಳನ್ನು ಅವಲೋಕಿಸಿದಾಗ ಶ್ರವಣ ಬೆಳಗೊಳವನ್ನು ಜೈನರ ಕಾಶಿಯೆಂದು ಕರೆಯಬಹುದು ಇತಿಹಾಸಕಾರರು ಇದನ್ನೇ ಒಪ್ಪಿದ್ದಾರೆ.

167 Ind, Ant, vol. Vi, P.24

168 ಅದೇ,

169 ಬಾರಾ. ಗೋಪಾಲ್, **ಶಾಸನ ಸಂಗ್ರಹ,** 1983, ಪು–13

170 ಅದೇ, 8

171 ಅದೇ, 18

ಎಂಬುದನ್ನು ಅರಿಯಬಹುದಾಗಿದೆ. ರವಿವರ್ಮ ತನ್ನ ರಾಜಧಾನಿಯ ಬಳಿಯಲ್ಲಿಯೇ ಕಾಮ ಜಿನಾಲಯವನ್ನು ನಿರ್ಮಿಸಿದ್ದು[172] ಜೈನ ಧರ್ಮದ ಬೆಳವಣಿಗೆಯ ಮೇಲೆ ಬೆಳಕು ಚೆಲ್ಲುತ್ತದೆ.

ಗಂಗರಸರು ಜೈನ ಮತಕ್ಕೆ ಮೊದಲಿನಿಂದಲೂ ಪ್ರೋತ್ಸಾಹ ನೀಡಿದ್ದರೆನ್ನಲು ಒಂದನೇ ಮಾಧವನು ಪ್ರೋತ್ಸಾಹ ಶಿವಮೊಗ್ಗ ಜಿಲ್ಲೆಯ ಮಂದಲಿಯಲ್ಲಿ ಮರದ ಚೈತ್ಯಾಲಯವನ್ನು ನಿರ್ಮಿಸಿದ್ದನೆಂದು ಹೇಳುವ ಶಾಸನ[173] ಪ್ರಮುಖದಾಗಿದೆ. ಕೋಲಾರ ಜಿಲ್ಲೆಯ ತಾಮ್ರಶಾಸನವು – ಪೆರ್ಬೊಲ ಗ್ರಾಮದ ಅರ್ಹದಾಯತನಕ್ಕೆ ಮಾಧವ ವರ್ಮನು ಬಿಟ್ಟ ದಾನವನ್ನು ಉಲ್ಲೇಖಿಸಿದೆ.[174] ತಲಕಾಡಿನ ವಿಜಯ ಜಿನಾಲಯದ ಚಂದ್ರನಂದಿ ಭಟಾರಕರಿಗೆ ಕ್ರಿ.ಶ. ಐದನೇ ಶತಮಾನದಲ್ಲಿ ಅಕಾಲ ವರ್ಷನ ಕಾಲದಲ್ಲಿ ದಾನ ನೀಡಲಾಗಿದೆ.[175] ಕುಂದಾಚ್ಚಿಯು ನಿರ್ಗುಂದ ವಿಷಯದ ಶ್ರೀಪುರ ಗ್ರಾಮದಲ್ಲಿ ಲೋಕ ತಿಲಕ ಜಿನಾಲಯವನ್ನು ನಿರ್ಮಿಸಿದ್ದಾಳೆ.[176] ಕ್ರಿ.ಶ. ಎಂಟು, ಒಂಭತ್ತನೇ ಶತಮಾನದಲ್ಲಿ ಮಣ್ಣೆಯಲ್ಲಿ ಮಾರಸಿಂಹನ ಸೇನಾಪತಿ ಶ್ರೀ ವಿಜಯನೂ[177] ಶ್ರವಣಬೆಳಗೊಳದಲ್ಲಿ ಗಂಗರ ದೊರೆ ಶಿವಮಾರನೂ, ಜಿನಾಲಯಗಳನ್ನು ಮಾಡಿಸಿದ್ದಾರೆ.[178] ಆದರೆ ಗಂಗರು ಕಟ್ಟಿಸಿರುವ ಹೆಚ್ಚಿನ ಬಸದಿಗಳು ಮಣ್ಣಿನ ರಚನೆಗಳಾಗಿದ್ದು ಮೂಲ ಸ್ವರೂಪದಲ್ಲಿ ಉಳಿದುಕೊಂಡಿಲ್ಲ ಹೆಚ್ಚು ಕಡಿಮೆ ಅವಸಾನದ ಹಂತದಲ್ಲಿವೆ.

ಬಾದಾಮಿ ಚಾಲುಕ್ಯರು ಆರನೇ ಶತಮಾನದಲ್ಲಿ ಜೈನಧರ್ಮಕ್ಕೆ ಪ್ರೋತ್ಸಾಹವನ್ನಿತ್ತದ್ದರು. ಅವರ ಕಾಲದ ಬಸದಿಗಳೆಲ್ಲವೂ ಕಲ್ಲಿನಲ್ಲಿ ಇಮ್ಮಡಿ ಪುಲಿಕೇಶಿಯ ಕಾಲದಲ್ಲಿ ನಿರ್ಮಿತವಾದ ಬಾದಾಮಿ ಚಾಲುಕ್ಯರ ಬಾದಾಮಿಯ ನಾಲ್ಕನೆಯ ಗುಹೆ–ಜೈನಗುಹಾಲಯ, ರವಿಕೀರ್ತಿ ಐಹೊಳೆಯಲ್ಲಿ ನಿರ್ಮಿಸಿರುವ ಮೆಗುತಿ ಜಿನಾಲಯ, ಐಹೊಳೆಯ ಮೀನ ಬಸದಿಗಳನ್ನು ಅವಲೋಕಿಸಿದರೆ ಜೈನ ಸಂಪ್ರದಾಯವನ್ನು ಅರಿಯಬಹುದು. ಕ್ರಿ.ಶ.ದಲ್ಲಿ ಕರ್ನಾಟಕವನ್ನಾಳುತ್ತಿದ್ದ ಗಂಗರಸರೂ ಉತ್ತರ ಕರ್ನಾಟಕವನ್ನಾಳುತ್ತಿದ್ದ ರಾಷ್ಟ್ರಕೂಟರೂ, ನೀಡಿದ್ದ ರಾಜಾಶ್ರಯದ ಫಲವಾಗಿ

---

[172] **ಕನ್ನಡ ವಿಷಯ ವಿಶ್ವಕೋಶ, ಕರ್ನಾಟಕ ಪರಿಷ್ಕೃತ** ಸಂ–1, 2005, ಪು–216.

[173] ಎ.ಕ IIX ಶಿಕಾರಿಪುರ ಸಂಖ್ಯೆ–4

[174] ಕೆ.ವಿ. ರಮೇಶ, 1984, ಶಾ.ಸಂ. 10

[175] ಅದೇ, –17

[176] ಎ.ಕ VII ನಾಗಮಂಗಲ, ಸಂ–149.

[177] ಡಾ.ಕೆ. ವಸಂತಲಕ್ಷ್ಮಿ, **ಹಾಸನಜಿಲ್ಲೆಯ ಹೊಯ್ಸಳರ ಬಸದಿಗಳು,** ಪು–17. ಸುಮುಖ ಪ್ರಕಾಶನ, ಬೆಂಗಳೂರು, 2006.

[178] ಅದೇ,

ಕರ್ನಾಟದಲ್ಲಿ ಅನೇಕ ಬಸದಿಗಳು ಜೈನಧರ್ಮದ ಫಲವಾಗಿ ಬೆಳೆದುಬಂದಿವೆ. ಗಂಗವಾಡಿಯಲ್ಲಿ ಶ್ರವಣ ಬೆಳಗೊಳ, ಕಂಬದಹಳ್ಳಿ, ಸಾಣೇನಹಳ್ಳಿ, ಹಳೇಬೆಳಗೊಳ, ಮಲೆಯೂರು, ಕೆಲಸೂರು, ಮಣ್ಣೆ, ಅರೆತಿಪ್ಪೂರು, ಗೋಪಿನಾಥ ಗುಡ್ಡ ಮೊದಲಾದೆಡೆಯಲ್ಲಿ ಕಾಣಸಿಗುವ ಬಸದಿಗಳು ಅಥವಾ ಜೈನಧರ್ಮದ ಸಂಕೇತಗಳು ಗಮನಾರ್ಹವಾದವುಗಳು, ಎಲ್ಲೋರದ ಛೋಟ ಕೈಲಾಸ, ಜಗನ್ನಾಥ ಸಭೆ, ಬಂಕಾಪುರದ ಚೆವ್ವಿಸ್ ತೀರ್ಥಂಕರರ ಜಿನಾಲಯ ಮಾನ್ಯಕೇಟದ ಮಹಾವೀರ ಬಸದಿಗಳು ರಾಷ್ಟ್ರಕೂಟರ ಕಾಲದಲ್ಲಿ ಪ್ರಸಿದ್ಧ ಜೈನ ಕ್ಷೇತ್ರಗಳು.

ಕ್ರಿ.ಶ. ಒಂಬತ್ತು ಮತ್ತು ಹತ್ತನೇ ಶತಮಾನಗಳಲ್ಲಿ ಕೊಲ್ಲಾಪುರ, ರಾಯಬಾಗ್, ಹಲಸಿ, ಅಣ್ಣಿಕೇರಿ, ಸೌಂದತ್ತಿ, ಹುಳ್ಳೂರು, ಜೇವೂರು, ಸೇಡಂ, ನವಲಗುಂದ, ಮೊದಲಾದೆಡೆಗಳಲ್ಲಿ ಜಿನ ಮುನಿಗಳು ನೆಲೆಸಿದ್ದು ಇವು ಜಿನಧರ್ಮದ ಪ್ರಮುಖ ಕ್ಷೇತ್ರಗಳಾಗಿದ್ದವು. ಬಳ್ಳಿಗಾವೆ, ಹುಂಚ, ಗೇರುಸೊಪ್ಪೆ, ಹನಸೋಗೆ, ಸಾಲಿಗ್ರಾಮ ಮೊದಲಾದವುಗಳು ಪ್ರಸಿದ್ಧ ಜೈನ ಕ್ಷೇತ್ರಗಳೇ ಶ್ರವಣಬೆಳಗೊಳವು ಹತ್ತನೇ ಶತಮಾನದ ಹೊತ್ತಿಗೆ ಪ್ರಸಿದ್ಧ ಜೈನಕ್ಷೇತ್ರವಾಗಿದ್ದು ಇಲ್ಲಿಯ ಶಾಸನವೊಂದು "ಗಂಗರಸ ಇವರ ಕಾಲದಲ್ಲಿ 'ಜೈನ ಮತವು ನಾಡ ಧರ್ಮವಾಗಿದ್ದು, ಎಲ್ಲೆಲ್ಲಿ ನೋಡಿದರೂ, ಜೈನ ಬಸದಿಗಳು ಕಾಣಿಸುತಿದ್ದವು" ಎಂದು ಬಣ್ಣಿಸಿದೆ.[179] ಹೊಯ್ಸಳರ ಕಾಲದಲ್ಲಿ 80ಕ್ಕೂ ಅಧಿಕ ಹೆಚ್ಚಿನ ಸಂಖ್ಯೆಯ ಜೈನ ಮತದ ಸ್ಮಾರಕಗಳನ್ನು ನಿರ್ಮಾಣ ಮಾಡಲಾಗಿತ್ತೆಂದು ತಿಳಿದುಬರುತ್ತದೆ. ಇಂದು ಕೆಲವೇ ಕೆಲವು ಸ್ಮಾರಕಗಳು ಮಾತ್ರ ಶಾಸನೋಕ್ತಗೊಂಡಿವೆ. ಹೀಗೆ ಸಿಂಹಣಂದ್ಯಾಚಾರ್ಯರ ಆಗಮನದಿಂದ ಗಂಗರ ಕಾಲದಲ್ಲಿ ಜೈನಧರ್ಮ ಸಮೃದ್ಧವಾಗಿ ಬೆಳೆಯುತ್ತಾ[180] ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣಿ ಚಾಲುಕ್ಯರುಗಳ ಕಾಲದಲ್ಲಿ ಬೆಳವಣಿಗೆಯನ್ನು ಕಂಡು 'ಹೊಯ್ಸಳರ ಕಾಲದಲ್ಲಿ ಶ್ರೀಮಂತಿಕೆಯನ್ನು ಹೊಂದಿಯೂ ಅವಸಾನಗೊಂಡಿತು.

ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಸಂಚರಿಸುತ್ತಲೇ ಇದ್ದ ಜೈನ ಸನ್ಯಾಸಿಗಳು, ಕಂತಿಯರೂ ಶ್ರಾವಕಿಯರು, ತಮ್ಮ ನೆಲೆಗಾಗಿ ಬಸದಿಗಳ ನಿರ್ಮಾಣ ಕಾರ್ಯಗಳಲ್ಲಿ ತೊಡಗಿದರು.

---

[179] ಎ.ಕ ii ಶ್ರವಣಬೆಳಗೊಳ, ಶಾ.ಸಂಖ್ಯೆ–80.

[180] ಎ.ಕ. ii ಶಿವಮೊಗ್ಗ, 4 ಕಲ್ಲೂರ ಗುಡ್ಡೆ, 1122.

ಇಂದು ಜೈನಧರ್ಮದ ಅಧ್ಯಯನಕ್ಕೆ ಇರುವಂತಹ ಆಧಾರಗಳಲ್ಲಿ ಬಸದಿಗಳು ಪ್ರಮುಖವಾದ ಆಧಾರಗಳು ಎನ್ನಬಹುದಾಗಿದೆ. ಜೈನಧರ್ಮವನ್ನು ತಮ್ಮ ಜೀವನದ ಅಂಗವನ್ನಾಗಿಸಿಕೊಂಡವರನ್ನು

- ಕಂತಿಯರು
- ಅಜ್ಜಿಯರು
- ಗುರುವಡಿಯವರು
- ಶ್ರಾವಕಿಯರು ಎಂದು ಕರೆಯಲಾಗುತ್ತದೆ.

ಈ ಕಂತಿಯರು ಕರ್ನಾಟಕದಲ್ಲಿ ಕಂಡುಬರುವಂತಹ ಜೈನ ಸನ್ಯಾಸಿನಿಯರು[181]. ಇವರನ್ನು ಕಂತಿಯರೆಂದೇ ಹೇಳಬಹುದು. ಸನ್ಯಾಸ ಸ್ವೀಕಾರದ ದ್ಯೋತಕವಾಗಿ ಕಂತಿ ಎಂಬ ವಿಶೇಷಣಗಳು ಬರುತ್ತಿದ್ದವು. ಕೆಲವೊಮ್ಮೆ ಮೂಲ ಹೆಸರಿನೊಂದಿಗೆ, ಬದಲಿಸಿದ ಹೆಸರುಗಳೊಂದಿಗೆ ಈ ವಿಶೇಷಣಗಳು ಬರುತ್ತಿದ್ದವು.* ಕಠೋರ ವ್ರತಗಳನ್ನು ಧರಿಸಿ ಮುನಿಗಳಂತೆ ಶ್ರವಣ ಸಂಘದ ಏಳಿಗೆಗೆ ಶ್ರಮಿಸಿ ಜೀವಿತಾಂತ್ಯದಲ್ಲಿ ಸಲ್ಲೇಖನದಿಂದ ಬಾಳನ್ನು ಸಾರ್ಥಕಗೊಳಿಸಿಕೊಂಡ ಕಂತಿಯರು ಜೈನಮತದಲ್ಲಿ ಮುನಿಗಳಷ್ಟೇ ಪೂಜನೀಯರಾಗಿದ್ದರು. ಹೊಯ್ಸಳರ ಕಾಲದಲ್ಲಿ ಜೈನ ಮುನಿಗಳಿಗಿದ್ದಷ್ಟೇ ಸ್ಥಾನಗೌರವಗಳು ಕಂತಿಯರಿಗೂ ಇರುತ್ತಿತ್ತೆಂದು ಹೇಳಬಹುದು. ಮಹಿಳೆಯರು ಕಂತಿಯರಾಗುವಲ್ಲಿ ಅವರ ಸ್ಥಾನಮಾನಗಳು ಮೇಲ್ಮಟ್ಟಕ್ಕೇರುತ್ತಿದ್ದವು. ಹಾಗೆಯೇ ಅವರುಗಳಿಗೆ ನಿರ್ಮಾಣವಾಗುತ್ತಿದ್ದ ಬಸದಿಗಳು ಸಾಮಾಜಿಕ ಪರಿಸರಗಳಿಗೆ ಒಂದು ವಿಶಿಷ್ಠ ಬದಲಾವಣೆಗೆ ಪ್ರಾಪ್ತವಾಗುತಿದ್ದವು, ಇವರು ವಾಸಿಸುವ ಮತ್ತು ಧರ್ಮಕ್ಷೇತ್ರಗಳಂತೆ ಇರುವ ಬಸದಿಗಳಿಗೆ ಉನ್ನತ ವರ್ಗದ ಮಹಿಳೆಯರು ಎನಿಸಿದ ರಾಜಮನೆತನದ ರಾಣಿಯರು ಧರ್ಮಗಳನ್ನು ಅನುಸರಿಸಿ ತಮ್ಮ ವೈಯುಕ್ತಿಕ ಮತ್ತು ರಾಜ್ಯ ಧರ್ಮವನ್ನಾಗಿ ಮಾಡಿಕೊಂಡು ಜೈನಧರ್ಮದ ಸನ್ಯಾಸಿನಿಯರುಗಳಿಗೆ ಪರೋಕ್ಷ ಮತ್ತು ಪ್ರತ್ಯಕ್ಷವಾಗಿ ದಾನ–ದತ್ತಿ–ಕೊಡುಗೆಗಳನ್ನು ನೀಡಿರುವುದನ್ನು ಆಧಾರಗಳಿಂದ ತಿಳಿಯಬಹುದಾಗಿದೆ.

---

[181] ಎ.ಕ. ii ಶ್ರವಣಬೆಳಗೊಳ

* ಹೆಚ್ಚಿನ ವಿವರಗಳಿಗೆ ನೋಡಿ ಡಾ. ಚೆನ್ನಕ್ಕ ಎಲಿಗಾರರವರ **ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ,** ಪು–103 ರಿಂದ 110. ಮತ್ತು ಡಾ. ಕೆ. ವಸಂತ ಲಕ್ಷ್ಮಿ **ಹಾಸನ ಜಿಲ್ಲೆಯ ಹೊಯ್ಸಳರ ಬಸದಿಗಳು,** ಪುಸಂ–21 ರಿಂದ 28.

**ಜೈನ ಧರ್ಮಕ್ಕೆ ರಾಣಿಯರು ನೀಡಿದ ದಾನ-ದತ್ತಿಗಳು**

ಬನವಾಸಿ ಕದಂಬ ಮನೆತನದಲ್ಲಿ ಜೈನಧರ್ಮ ಅಸ್ತಿತ್ವದಲ್ಲಿತ್ತೆಂದು ಹಲಸಿಯ ತಾಮ್ರಪಟಗಳಿಂದ ತಿಳಿಯಬಹುದಾದರೂ, ನಿರ್ದಿಷ್ಠವಾಗಿ ಮನೆತನದ ರಾಣಿಯರು, ರಾಣಿವರ್ಗದವರು ಜೈನಧರ್ಮಕ್ಕೆ ನೀಡಿದ ಕೊಡುಗೆಗಳ ಬಗ್ಗೆ ಶಾಸನಗಳು ಎಲ್ಲೂ ಬೆಳಕು ಬೀರಿಲ್ಲ. ಸಾಹಿತಿಕ ದಾಖಲೆಗಳು ಸಹ ಮೌನವಹಿಸಿವೆ.

ಗಂಗರ ಕಾಲದಲ್ಲಿ ಜೈನಧರ್ಮ ನಾಡಧರ್ಮವಾಗಿತ್ತು. ಅವನೀತ, ಮಾರಸಿಂಹ, ರಾಚಮಲ್ಲ, ಶಿವಮಾರ, ಮೊದಲಾದ ಗಂಗ ದೊರೆಗಳ ಆಶ್ರಯದಲ್ಲಿ, ಕರ್ನಾಟಕದಲ್ಲಿ ಜೈನಧರ್ಮ ನೆಲೆ ಊರಲು ಕಾರಣವಾಯಿತು. ಎಂದೆನ್ನಬಹುದು. ಇವರ ಕಾಲದಲ್ಲಿ ನೀರ್ಗುಂದ ವಿಷಯದ ಶ್ರೀಪುರ ಗ್ರಾಮದಲ್ಲಿ ಕುಂದಾಚಿಯು ಲೋಕತಿಲಕ ಜಿನಾಲಯವನ್ನು ನಿರ್ಮಿಸಿದ ಬಗ್ಗೆ ಶಾಸನದ ಉಲ್ಲೇಖವಿದೆ.[182]

ಚಾಲುಕ್ಯ ಅಕ್ಕಾದೇವಿಯು ವಿಕ್ರಮಪುರದ 'ಗೋಣದ ಬೆಡಂಗಿಯ' ಜಿನಾಲಯದಲ್ಲಿದ್ದ ರಿಷಿಯರ್ಗ್ಗಂ, ಅಜ್ಜಿಯರ್ಗ್ಗಂ ಆಹಾರ ದಾನಕ್ಕಂ, ಅಜ್ಜಿಯರ ಕಪ್ಪಡಕಂ ಭೂದಾನ ನೀಡಿದ್ದಾಳೆ.[183] ಪೊನ್ನವಾಡದ ತ್ರಿಭುವನತಿಲಕ ಚೈತ್ಯಾಲಯದ ರಿಷಿಯರ, ಅಜ್ಜಿಯರ ಆಹಾರ ದಾನಕ್ಕೆ ಚಾಂಕಿಮಯ್ಯನೆಂಬುವ ತ್ರೈಲೋಕ್ಯಮಲ್ಲ ಮತ್ತು ರಾಣಿ ಕೇತಲದೇವಿಯರ ಭಿನ್ನಪದ ಮೇರೆಗೆ ಮೂವತ್ತು ಗೇಣುಗಳೆಯಲ್ಲಿ ಮೂವತ್ತೈದು ಮತ್ತರು ಭೂಮಿ, ಒಂದು ಮತ್ತರು ತೋಟ ನಿವೇಶನಕ್ಕೆ ಭೂಮಿಯನ್ನು ಬಿಟ್ಟುಕೊಟ್ಟ ವಿಷಯ ಶಾಸನೋಕ್ತವಾಗಿದೆ.[184] ಅರಸಿಗಾವುಂಡಿ[185] ಎಂಬುವಳು ಹರಳಹಳ್ಳಿಯಲ್ಲಿ ತಾನು ಮಾಡಿಸಿದ ಜಿನಾಲಯಕ್ಕೆ 'ರಿಷಿಯರ್ಪ್ಪರಾಹಾರದಾನಕ್ಕಂ ಅಜ್ಜಿಯರಾಹಾರದಾನಕ್ಕಂ 'ನಾಲ್ಕುನೂರು ಮರದ ಅಡಿಕೆಯ ತೋಟ ಒಂದು ಮತ್ತರು ಗದ್ದೆ ಭೂಮಿ ಮೂರು ಮತ್ತರು ಎರೆ ಭೂಮಿಯನ್ನು ಧಾನವಾಗಿ ಬಿಟ್ಟಿದ್ದಾರೆ.

---

182 ಎ.ಕ Vii. ನಾಗಮಂಗಲ, 149.

183 ಎ.ಇ. xviii, ಗುಡಿಗೆರೆ ತಾಲ್ಲೂಕು, ಶಿರಹಟ್ಟಿ ಜಿಲ್ಲೆ, 173, (1076).

184 ಆಯ್, ಎ xix, ಹೊನ್ನವಾಡ (ತಾ) ಬಿಜಾಪುರ (ಜಿ) 193, (ಕ್ರಿ.ಶ. 1054)

185 ಎಸ್.ಆಯ್, ಆಯ್, xviii ನದೀಹರಳಹಳ್ಳಿ (ತಾ) ರಾಣಿಬೆನ್ನೂರು (ಜಿ)180 (ಕ್ರಿ.ಶ. 1168)

ಪೋಚಿಕಬ್ಬೆ ಎಂಬುವಳು ತನ್ನ ಸಮಸ್ತವನ್ನು ಜಿನಧರ್ಮಕ್ಕೆ ಮೀಸಲಿಟ್ಟು ಹಲವಾರು ಚೈತ್ಯಾಲಯಗಳನ್ನು ಮಾಡಿಸಿದ ಬಗ್ಗೆ ಶಾಸನ[186] ಈ ರೀತಿ ವಿವರಿಸಿದೆ. "ತನುವಚಿಜಿನಪತಿನುತಿಯಿಂದ ಧನಮಂಮನಿಜನ ತೃಪ್ತಿಯಿಂ ಸಫಳಮಿದಿಂ ನೆನಗೆಂಭೀ ನಂಬುಗೆಯೊಳ್ಮನಮಂ ಜಗದೊಳಗೆ ಪೋಚೀಕಬ್ಬೆಯೇ ನಿಮಿಪಳ್" ಎಂದು ತಿಳಿಸಿ ಈಕೆ ಸಲ್ಲೇಖನ ವ್ರತವನ್ನಾರಿಸಿದ ವಿವರಣೆಯನ್ನು ಇದೇ ಶಾಸನ ಸಂಪೂರ್ಣವಾಗಿ ವಿವರಿಸುತ್ತದೆ. "ಜಾಗಲಾ ದೇವಿ" ಸ್ವತಃ ಜಿನಭಕ್ತೆಯಾಗಿದ್ದು ಬಳ್ಳಿಗಾವೆಯಲ್ಲಿ "ಚಾಗೇಶ್ವರವೆಂಬ" 'ಶಿವದೇವಾಲಯ'ವನ್ನು ಕಟ್ಟಿಸಿ ಹಲವಾರು ಬ್ರಾಹ್ಮಣರಿಗೆ ದಾನಗಳನ್ನು ಮಾಡಿದಳೆಂಬ ಮಾಹಿತಿ ಶಾಸನೋಕ್ತ[187] ಹೀಗೆ ಉನ್ನತ ವರ್ಗದ ಮಹಿಳೆಯರು ಈ ರೀತಿಯಾಗಿ ಬಸದಿಗಳ ನಿರ್ಮಾಣ ಅದ ಆಡಳಿತ ವ್ಯವಸ್ಥೆಯಂತಹ ಬಹುಮೊತ್ತದ ಕಾರ್ಯವನ್ನು ನಿರ್ವಹಿಸುತ್ತಿದ್ದರು. ಒಂದರ್ಥದಲ್ಲಿ ಧರ್ಮಕ್ಷೇತ್ರಗಳಂತೆ ಮಾರ್ಪಡುವಲ್ಲಿ ಅವುಗಳ ಸಂಪೂರ್ಣ ಹೊಣೆಗಾರಿಕೆಯನ್ನು ಕೆಲವೊಮ್ಮೆ ಇವರೇ ನಿರ್ವಹಿಸಿಕೊಳ್ಳಬೇಕಾಗಿರುತ್ತಿತ್ತು ಎಂದು ಡಾ.ಚೆನ್ನಕ್ಕ ಎಲಿಗಾರ ರವರು ಅಭಿಪ್ರಾಯಪಟ್ಟರೆ[188] ಡಾ.ಕೆ. ವಸಂತ ಲಕ್ಷ್ಮಿರವರು "ಬಸದಿಗಳ ಹೊಣೆಗಾರಿಕೆಯನ್ನ ಕಂತಿಯರು ನೇರವಾಗಿ ಹೊತ್ತು ನಿರ್ವಹಿಸಿದ ಸನ್ನಿವೇಶವಾಗಲೀ ಮಹತ್ತರವಾದ ಘಟನೆಗಳಾಗಲೀ ಕಾಣಬರುವುದಿಲ್ಲ" ಎಂದಿದ್ದಾರೆ.[189]

ಕರ್ನಾಟಕ ಧಾರ್ಮಿಕ ಇತಿಹಾಸವನ್ನು ಅವಲೋಕಿಸುತ್ತಾ ಹೋದಂತೆ, ಈ ಕಾರ್ಯ ಅತ್ಯಂತ ಪ್ರಾಚೀನ ಕಾಲದಿಂದಲೂ ಆರಂಭವಾಗಿದೆ ಎಂಬುದು ತಿಳಿಯಬರುತ್ತದೆ. ಆದರೆ ಕದಂಬರ ಕಾಲದಿಂದ ಗಂಗರ ಕಾಲದವರೆಗೆ ಕೇವಲ ಸೀಮಿತವಾಗಿದ್ದ ಬಸದಿಗಳ ನಿರ್ಮಾಣ ಕಾರ್ಯ ಏಳನೆಯ ಅಂದರೆ ಬಾದಾಮಿ ಚಾಲುಕ್ಯರ ಕಾಲದಿಂದ ಹೆಚ್ಚಿನ ಬಸದಿಗಳು ನಿರ್ಮಾಣವಾಗಿರುವುದನ್ನು ಕಾಣಬಹುದು. ಬಾದಾಮಿ ಚಾಲುಕ್ಯರ ಮೂರನೆಯ ವಿಜಯಾದಿತ್ಯನ ಸಹೋದರಿ ಕುಂಕುಮ ಮಹಾದೇವಿ ಪುಲಿಗೆರೆಯಲ್ಲಿ "ಆನೆಸಜ್ಜೆ ಬಸದಿಯನ್ನ ನಿರ್ಮಾಣ ಮಾಡಿರುವುದು ಅತ್ಯಂತ ಪ್ರಾಚೀನವಾದುದ್ದಾಗಿದೆ."[190] ಇವಳು ಕಟ್ಟಿಸಿದ ಜಿನದೇಗುಲಕ್ಕೆ

---

[186] ಎ.ಕ ii ಶ್ರವಣ ಬೆಳಗೊಳ 118 (ಕ್ರಿ.ಶ. 1120)

[187] ಎ.ಕ Viii Nr.47, (ಕ್ರಿ.ಶ. 1062)

[188] ಡಾ. ಚೆನ್ನಕ್ಕ ಎಲಿಗಾರ, **ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ** ಪು–106. ಚೆನ್ನಗಂಗ ಪ್ರಕಾಶನ, ಧಾರವಾಡ, 1990.

[189] ಡಾ.ಕೆ. ವಸಂತ ಲಕ್ಷ್ಮಿ, **ಹಾಸನ ಜಿಲ್ಲೆಯ ಹೊಯ್ಸಳರ ಬಸದಿಗಳು** ಚೆನ್ನಗಂಗ ಪ್ರಕಾಶನ, ಧಾರವಾಡ, ಪು–202. 2006,

[190] ಎಸ್. ಆಯ್ ಆಯ್ xx, **ಗುಡಿಗೆರೆ ತಾಲ್ಲೂಕು, 46 (ಕ್ರಿ.ಶ. 1072)**

ವಿನಯಾದಿತ್ಯನನ್ನು ಒಳಗೊಂಡಂತೆ ಹಲವು ರಾಜರು, ದಾನ-ದತ್ತಿ ಧರ್ಮ ಕಾರ್ಯಗಳನ್ನು ನೀಡಿದ್ದಾರೆ.

ವಿನಯಾದಿತ್ಯ ತನ್ನ ಆಳ್ವಿಕೆಯ ಕಾಲದಲ್ಲಿ ಹಲವಾರು ಗ್ರಾಮಗಳನ್ನು ಮತ್ತು ಭೂಮಿಯನ್ನು ಕ್ರಿ.ಶ. 707ರಲ್ಲಿ ದಾನವಾಗಿತ್ತನು. ಕುಂಕುಮ ಮಹಾದೇವಿ ನಿರ್ಮಿಸಿದ ಪುಲಿಗೆರೆಯ ಜಿನಾಲಯವನ್ನು "ಆನೆಸಜ್ಜೆ ಬಸದಿ" ಎಂದು ಕರೆಯಲಾಗುತ್ತಿತ್ತೆಂದು ಹನ್ನೊಂದನೆಯ ಶತಮಾನದ ಶಾಸನವೊಂದು ಹೇಳಿದೆ.[191] ಈ ಲಕ್ಷ್ಮೇಶ್ವರದ ಜೈನರ ಮೂಲಸಂಘದ ಅಂದರೆ ದೇವಗಣ ಶಾಖೆಯ ಕೇಂದ್ರಸ್ಥಾನವಾಗಿತ್ತು ಎಂಬುದು ಸ್ಪಷ್ಟವಾದ ಮಾತು. ಇಲ್ಲಿ ಜೈನಧರ್ಮವನ್ನು ಸ್ವೀಕರಿಸಲು ಬಡವರೂ ಮುಂದಾಗುತ್ತಿದ್ದರು. ಕ್ರಿ.ಶ. ಹನ್ನೆರಡನೆ ಶತಮಾನದಲ್ಲಿಯೂ ಲಕ್ಷ್ಮೇಶ್ವರದಲ್ಲಿ ಹೊಸ-ಹೊಸ ಬಸದಿಗಳ ಕಟ್ಟಡ ಕೆಲಸ ನಡೆಯುತ್ತಿದ್ದರಿಂದ ಈ ಊರು ಜೈನರ ಕೇಂದ್ರಸ್ಥಾನವಾಗಿತ್ತು/ವಾಗಿ ತನ್ನ ಸ್ಥಾನವನ್ನು ಈ ಕಾಲದವರೆವಿಗೂ ಉಳಿಸಿಕೊಂಡು ಬಂದಿತ್ತು.

ಗಂಗಭೂತಯ್ಯ ಪೆರ್ಮಾಡಿಯ ರಾಣಿ ಪದ್ಮಬ್ಬರಸಿ ನರೇಗಲ್ಲದಲ್ಲಿಯೂ[192] ಮಹಾಸಾಮಂತ ಪಂದಿಗನ ಮಡದಿ ಜಕ್ಕಿಸುಂದರಿ ಕಾಕಂಬಾಳದಲ್ಲಿಯೂ ಬಸದಿಗಳನ್ನು ನಿರ್ಮಿಸಿದ್ದಾರೆ. ಬಸದಿಗಳನ್ನು ನಿರ್ಮಿಸಿರುವುದು ಅವರು ಜೈನಧರ್ಮಕ್ಕೆ ನೀಡಿದ ಪ್ರೋತ್ಸಾಹವನ್ನು ತೋರಿಸಲ್ಪಡುತ್ತದೆ. ಬಾದಾಮಿ ಚಾಲುಕ್ಯರನ್ನು ಪದಚ್ಯುತಿಗೊಳಿಸಿ ರಾಷ್ಟ್ರಕೂಟರು ರಾಜಕೀಯ ರಂಗವನ್ನು ಪ್ರವೇಶಿಸಿದರು. ಧ್ರುವನ ಆಳ್ವಿಕೆಯ ಕೊನೆಗಾಲಕ್ಕೆ ರಾಷ್ಟ್ರಕೂಟರ ಅಧಿಕಾರ ಅತ್ಯುಚ್ಚ ಸ್ಥಿತಿಯಲ್ಲಿತ್ತು. ಆಗ ರಾಷ್ಟ್ರಕೂಟರ ಶಕ್ತಿಯನ್ನು ಎದುರಿಸಬಲ್ಲ ಶಕ್ತಿ ಭಾರತದಲ್ಲಿ ಇರಲಿಲ್ಲವೆಂದೇ ಹೇಳಬಹುದು. ಅಮೋಘ ವರ್ಷನ ಕಾಲಕ್ಕಾಗಲೇ ರಾಷ್ಟ್ರಕೂಟ ಮನೆತನ ಪ್ರಬುದ್ಧಮಾನಕ್ಕೆ ಬಂದಿತ್ತು. ಇವರ ಕಾಲದ ಧರ್ಮ ವೈದಿಕಧರ್ಮ ಪ್ರಮುಖವಾಗಿದ್ದರೂ, ಜೈನಧರ್ಮ ಬಹಳವಾಗಿ ಜನಪ್ರಿಯವಾಗಿತ್ತು. ಕರ್ನಾಟಕದ ಜನಸಂಖ್ಯೆಯಲ್ಲಿ ಶೇಕಡಾ 30ರಷ್ಟಾದರೂ, ಜೈನರಿದ್ದಿರಬೇಕೆಂದು ಡಾ॥ ಆಲ್ತೇಕರ್‌ರವರು ಅಭಿಪ್ರಾಯಪಟ್ಟಿದ್ದಾರೆ.[193]

---

[191] ಶ್ರೀನಿವಾಸ ಪಾಡಿಗಾರ, **ಬಾದಾಮಿ ಚಾಲುಕ್ಯರು : ಧಾರ್ಮಿಕ ವ್ಯವಸ್ಥೆ, ಬಾದಾಮಿ ಚಾಲುಕ್ಯರು ಲೇಖನ ಸಂಪುಟ,** ಡಾ.ಎ. ಮುರಿಗೆಪ್ಪ (ಪ್ರ.ಸಂ) ಪು-173, ಪ್ರಸಾರಾಂಗ, ಹಂಪಿ, 2009,

[192] ಬಿ.ಕೆ. ಅಯ್ 1-I ನರೇಗಲ್ಲ ತಾಲ್ಲೂಕು 38 (ಕ್ರಿ.ಶ. 951)

ಎ.ಕೆ. xi – ಚಿತ್ರದುರ್ಗ, 74, ಬೇವಿನಹಳ್ಳಿ, (ಕ್ರಿ.ಶ. 968)

[193] ಸೂರ್ಯನಾಥ ಕಾಮತ್, **ಕರ್ನಾಟಕ ಇತಿಹಾಸ,** ಪು-65. 1992.

ಹತ್ತನೆಯ ಶತಮಾನದ ಉತ್ತರಾರ್ಧಕ್ಕೆ ರಾಷ್ಟ್ರಕೂಟರ ನಂತರ ಕಲ್ಯಾಣ ಚಾಲುಕ್ಯರ ತಲೆ ಎತ್ತಿದರು. ಈ ವೇಳೆಗಾಗಲೇ ಜೈನಧರ್ಮ ತನ್ನ ಪಥವನ್ನು ಬದಲಿಸಿತ್ತು. ಅಂದರೆ ರಾಜಾಶ್ರಯವನ್ನು ಹೊಂದಿದ್ದ ಈ ಜೈನಧರ್ಮ ಕಾಲಕ್ರಮೇಣ ಸಾಮಂತ-ಮಂಡಲಾದಿಪತಿಗಳ ಹೊಣೆಗಾರಿಕೆಗೆ ಬಂದಿತು. ಹತ್ತನೆಯ ಮತ್ತು ಹನ್ನೆರಡನೆಯ ಶತಮಾನಗಳಲ್ಲಿ ಕನ್ನಡ ನಾಡನ್ನು ಬೆಳಗಿದ ಇಬ್ಬರು ಮಹಿಳೆಯರು ಪ್ರಮುಖರು. ಇವರು ರಾಣಿಯರು ಅಲ್ಲದಿದ್ದರೂ ಕೂಡ ಜೈನಧರ್ಮದ ರತ್ನಗಳಂತೆ ಕಲ್ಯಾಣ ಚಾಲುಕ್ಯರ ಸಾಮ್ರಾಜ್ಯದಲ್ಲಿದ್ದರು. ಅವರೇ ದಾನಚಿಂತಾಮಣಿಯರಾದ ಅತ್ತಿಮಬ್ಬೆ ಮತ್ತು ಏಚಿಕಬ್ಬೆ.

ಅತ್ತಿಮಬ್ಬೆ ಹತ್ತನೆಯ ಶತಮಾನದ ಉತ್ತರಾರ್ದ ಮತ್ತು ಹನ್ನೊಂದನೆಯ ಶತಮಾನದ ಪೂರ್ವಾರ್ಧದಲ್ಲಿದ್ದ ಜೈನಶ್ರಾವಕಿಯವರು ಹಾಗೂ ಪ್ರಾಚೀನ ಕರ್ನಾಟಕದ ಸ್ತ್ರೀಯರಲ್ಲಿಯೇ ಅಗ್ರಗಣ್ಯರು. ಈಕೆ ರಾಜಮನೆತನದವಳಲ್ಲದಿದ್ದರೂ ಸಹ ಇವಳ ಅನೇಕ ಸಂಗತಿಗಳು ರನ್ನನ ಅಜಿತಪುರಾಣದಿಂದಲೂ, ಅವನೇ ಬರೆದಿರುವಂತಹ ಲಕ್ಕುಂಡಿಯ ಶಾಸನದಿಂದಲೂ, ಪೊನ್ನ ರಚಿಸಿರುವ ಶಾಂತಿಪುರಾಣದಿಂದಲೂ ತಿಳಿದು ಬರುತ್ತದೆ. ಅತ್ತಿಮಬ್ಬೆಯ ಅಜ್ಜ ನಾಗಮಯ್ಯ, ವೆಂಗಿಮಂಡಲದ ಕಮ್ಮೆನಾಡಿನ ಪುಂಗನೂರಿನ ಜೈನ ಬ್ರಾಹ್ಮಣ. ಇವನ ಮಕ್ಕಳೇ ಮಲ್ಲಪ್ಪಯ್ಯ ಮತ್ತು ಪೊನ್ನಮಯ್ಯ. ಇವರಲ್ಲಿ ಮಲ್ಲಪಯ್ಯ ಮತ್ತು ಅಪ್ಪಕಚ್ಚಿಯರ ಮಗಳೇ ಅತ್ತಿಮಬ್ಬೆ[194] ಅತ್ತಿಮಬ್ಬೆಯ ತಂಗಿ ಗುಂಡಮಬ್ಬೆ ಇವರಿಬ್ಬರನ್ನು ಚಾಲುಕ್ಯರ ಚಮೂಪತಿಯಾಗಿದ್ದ ನಾಗದೇವನಿಗೆ ವಿವಾಹಮಾಡಿದ್ದರು. ಅತ್ತಿಮಬ್ಬೆಗೆ ಅಣ್ಣಿಗದೇವನೆಂಬ ಕಿರಿಯ ವಯಸ್ಸಿನ ಅಪ್ರಾಪ್ತ ಮಗನಿದ್ದನು. ಅತ್ತಿಮಬ್ಬೆ ಮತ್ತು ಗುಂಡಮಬ್ಬೆಯರು ಯೌವ್ವನದಲ್ಲಿರಬೇಕಾದರೆ ಗಂಡ ನಾಗದೇವ ಸ್ವರ್ಗಸ್ಥಾನಾದ. ತಂಗಿ ಗಂಡಮಬ್ಬೆ ಸಕಲ ಮಹಾಸತೀತ್ವವನ್ನು ತನ್ನ ಅಕ್ಕನಿಗೆ ಪುತ್ರನಿದ್ದ ಕಾರಣ ನೀಡಿ ಚಿತೆಯೇರಿದಳು. ಪುತ್ರ ಪರಿಪಾಲನೆಗೆ ದೃಢಳಾಗಿ ನಿಂತ ಅತ್ತಿಮಬ್ಬೆ ಶ್ರಾವಕಿಯಾಗಿದ್ದುಕೊಂಡು ಜೈನಧರ್ಮದ ಕೀರ್ತಿ ಪತಾಕೆಯನ್ನಾಚರಿಸಿದಳು. ಈಕೆ ರನ್ನನಿಂದ ಅಜಿತಪುರಾಣವನ್ನು ಪಠಿಸಿದಳು. ಮಣಿ ಕನಕ ಖಚಿತವಾದ ಸಾವಿರದ ಐನೂರು ಜನಪ್ರತಿಮೆಗಳನ್ನು ಮಾಡಿಸಿ ದಾನ ಮಾಡಿದಳು.

[194] ಬಾಂಬೆ ಕರ್ನಾಟಕ ಇನ್ಸ್‌ಸ್ಕ್ರೀಪ್ಸನ್ ಸಂ-1, ಭಾಗ-1, ಸಂ52, ಪು-39-43

ಜೊತೆಗೆ ಶಾಂತಿಪುರಾಣದ ಸಾವಿರದ ಪ್ರತಿಮೆಗಳನ್ನು ಮಾಡಿಸಿ ಶಾಸ್ತ್ರದಾನವನ್ನು ಮಾಡಿಸಿದಳು.[195] ಲಕ್ಕುಂಡಿಯಲ್ಲಿ 1007ರಲ್ಲಿ ಒಂದು ಸುಂದರವಾದ ಬಸದಿಯನ್ನು ಕಟ್ಟಿಸಿದ್ದಾಳೆ.

ತನ್ನ ಜೀವಿತಾವಧಿಯಲ್ಲಿ ಅನೇಕ ಮಹಿಮೆಗಳನ್ನು ಮೆರೆದಿರುವ ಅತ್ತಿಮಬ್ಬೆ ನಿಜಕ್ಕೂ ರತ್ನಕಳಸ ಶಾಸನಗಳಲ್ಲಿ ಅತ್ತಿಮಬ್ಬೆಯನ್ನು "ದಾನಚಿಂತಾಮಣಿ" 'ಕಟಕಪವಿತ್ರೆ" "ಗುಣದಂಕಕಾರ್ತಿ" ಎಂಬ ಬಿರುದು ವಿಶೇಷಣಗಳು ಸಿಗುತ್ತವೆ.[196] ಹೀಗೆ ತನ್ನ ತಪಸ್ಸು, ನಿಷ್ಠೆ, ಔದಾರ್ಯ, ತ್ಯಾಗ, ಧರ್ಮಾನುರಾಗ, ಕಾವ್ಯಪ್ರೇಮ, ಇತ್ಯಾದಿಗಳಿಂದ ತನ್ನಕಾಲದ ಜನರ ಕಣ್ಣಲ್ಲಿ ಮಹಾನ್ ವ್ಯಕ್ತಿತ್ವವುಳ್ಳವಳಾಗಿದ್ದಾಳೆ. ಇವಳು ಮೆರೆದ ಪವಾಡಗಳನ್ನು ರನ್ನನೂ, ಮತ್ತು ಶಾಸನಗಳೂ ಕೊಂಡಾಡಿವೆ. ಇವಳಾದ ಮೇಲೆ ಹುಟ್ಟಿದ ಅನೇಕ ಶಾಸನಗಳಲ್ಲಿಯೂ ಬ್ರಹ್ಮ ಶಿವನ ಸಮಯ ಪರೀಕ್ಷೆಯಲ್ಲಿಯೂ, ಇವಳನ್ನು ಮನಸಾರೆ ಹೊಗಳಲಾಗಿದೆ. ಕನ್ನಡ ನಾಡಿನಲ್ಲಿ ಶೀಲ–ಅನಪಮಗುಣ ಔದಾರ್ಯ, ಅಭಿಮಾನಗಳಿಗೆ ಸಂಕೇತವಾಗಿ ಬಾಳಿದ ದಾನಚಿಂತಾಮಣಿ ಮುಂದಿನ ಜನಾಂಗದ ಮೇಲೆಯೂ ತನ್ನ ಪ್ರಭಾವವನ್ನು ಬೀರಿದ್ದಾಳೆ. ಇನ್ನು ಮತ್ತೊಬ್ಬ ಜಿನಪತಾಕೆ ಏಚಿಕಬ್ಬೆ[197] ಈಕೆ ಜೈನಧರ್ಮವನ್ನು ಅತ್ತಿ ಮಬ್ಬೆಯಂತೆಯೇ ಪೋಷಿಸಿ ಬೆಳೆಸಿದಳು. ಈಕೆ ಜೈನಧರ್ಮಕ್ಕೆ ದಾನವನ್ನು ಮಾಡುತ್ತಿದ್ದ ಬಗ್ಗೆ ಶಾಸನವೊಂದು ಈ ರೀತಿಯಾಗಿ ವರ್ಣಿಸಿದೆ. "ದಾನದೊಳಭಿಮಾನದೊಳ ಮಾನಿನಿ ಗಣಿಯಲ್ಲಿ ಸತಿಯ ಕೇನಾರ್ತ್ಥಿಯೆಂದು ಕುಡುವಳೆ ದಾನಮನೇತಬ್ಬೆಯತ್ತಿವು ಬ್ಬರಸೆಯವೋಲ್"[198] ಎಂದು ಪ್ರಸಂಶಿಸಿ ಜೈನಧರ್ಮದ ಸ್ಪೂರ್ತಿಯಾದ ಇವಳನ್ನು ದಾನ ಚಿಂತಾಮಣಿ ಅತ್ತಿಮಬ್ಬೆಗೆ ಹೋಲಿಸಲಾಗಿದೆ.

ಕ್ರಿ.ಶ. 1147ರ ಶಾಸನವೊಂದು 'ಬಾಚಲದೇವಿ'ಯನ್ನು 'ನೋತನಾತ್ತಿಯಬ್ಬೆ' ಎಂದು ಕರೆದಿದೆ.[199] ಇವಳು, ಶಾಸನದ ಪ್ರಕಾರ ಒಂದೇ ತಿಂಗಳಲ್ಲಿ ಬಸದಿಯ ದಕ್ಷಿಣದ ಪಟ್ಟಶಾಲೆಯನ್ನು ಮಾಡಿಸುತ್ತಾಳೆ. ಪ್ರಾಚೀನ ಕರ್ನಾಟಕದ ಸಾಮಾಜಿಕ ಇತಿಹಾಸದಲ್ಲಿ ಕೆಲವು ಸನ್ಯಾಸಿ ವರ್ಗದ ವ್ಯಕ್ತಿಗಳನ್ನು ಬಿಟ್ಟರೆ ಮುಂದಿನ ಪೀಳಿಗೆಯ ಮೇಲೆ ಇಷ್ಟು ಪ್ರಭಾವವನ್ನು ಬೀರಿದ ಅತ್ತಿಮಬ್ಬೆಯಂತಹ

---

[195] ಬಿ.ಕೆ. ಅಯ್ ಅದೇ.,

[196] ಅದೇ,

[197] ಎ.ಕ ii ಶ್ರವಣ ಬೆಳಗೊಳ384 (1135 AD)

[198] ಅದೇ,

[199] ಎ.ಕ viii, ನಗರ. 37, (ಕ್ರಿ.ಶ. 1147)

ವ್ಯಕ್ತಿಗಳು ಇಲ್ಲವೆಂದು ಹೇಳಬಹುದು. ತ್ರೈಲೋಕ್ಯಮಲ್ಲನ ಮಹಾಮಂಡಳೇಶ್ವರ ಚೌಂಡರಸನ ಹಿರಿಯ ಅರಸಿ ದೇಮಲದೇವಿ.[200] ಆರನೇ ವಿಕ್ರಮಾದಿತ್ಯನ ರಾಣಿಯರಲ್ಲಿ ಒಬ್ಬಳಾದ ಜಾಕಲದೇವಿ[201]ಯರು ಜೈನಧರ್ಮವನ್ನು ಪ್ರೋತ್ಸಾಹಿಸಿ ಬೆಳೆಸಿದ್ದಾರೆ.

ಚಾಲುಕ್ಯರ ಮಹಾಮಂಡಳೇಶ್ವರ ಸಾನ್ತಾರ ಮನೆತನ ಜೈನಧರ್ಮಕ್ಕೆ ಪ್ರಸಿದ್ಧವಾಗಿದೆ. ಈ ಮನೆತನದಲ್ಲಿ ಸಹಕಾರನೆಂಬವ ನರಮಾಂಸ ಬ್ರತನಾಗಲು ಜಿನದತ್ತನೆಂಬ ಅವನ ಮಗ ದಕ್ಷಿಣಾಭಿಮುಖವಾಗಿ ಒಂದು ಸಿಂಹರಥನೆಂಬ ದುಷ್ಟರಾಜನನ್ನು ಕೊಂದು ಜಿಕ್ಕಿಯಬ್ಬೆಯನ್ನಾಧರಿಸಿ ಆಕೆಯಿಂದ ಸಿಂಹಲಾಂಛನ ಪಡೆದು ಮುಂದೆ ಕಾಕಾಸುರನನ್ನು ಕೊಂದನು. ಪದ್ಮಾವತಿ ದೇವಿ ಮೆಚ್ಚಿ ಅವನಿಗೆ ಕನಕಪುರಮೆನಿಸಿದ ಪೊಂಬುಚ್ಚವನ್ನು ಆತನಿಗೆ ರಾಜಧಾನಿಯಾಗಿ ಬಿಟ್ಟುಕೊಟ್ಟಳು.[202] ಸಾನ್ತಾರರ ವಂಶಕ್ಕೆ ಸೇರಿದ ರಕ್ಕಸಗಂಗ ಪೆರ್ಮಾಡಿಯ ರಾಣಿ ಚಟ್ಟಲದೇವಿ "ಧರ್ಮ ಪ್ರಾಗೇವ ಚಿನ್ತಯೇತ್" ಎಂಬಂತೆ ಬಸದಿಯನ್ನು ನಿರ್ಮಿಸಿದ್ದಾಳೆ.[203] ಬಸದಿಗೆ ಅಸ್ತಿಭಾರ ಶಿಲೆ ಹಾಕಿಸುವ ಅಂದಿನ ಸಂಪ್ರದಾಯದಂತೆ ಚಟ್ಟಲದೇವಿ ಪೊಂಬುಚ್ಚದಲ್ಲಿ ಬಸದಿಯನ್ನು ನಿರ್ಮಿಸಿದ್ದಾಳೆ. ಬಸದಿಗೆ ಅಸ್ತಿಭಾರ ಶಿಲೆ ಹಾಕಿಸುವ ಅಂದಿನ ಸಂಪ್ರದಾಯದಂತೆ, ಚಟ್ಟಲದೇವಿ ಪೊಂಬುಚ್ಚದಲ್ಲಿ ಬಸದಿಯನ್ನು ನಿರ್ಮಿಸಲು ನಿಶ್ಚಯಿಸಿ ತಮ್ಮ ಗುರು ಶ್ರೇಯಾಂಸ ಪಂಡಿತರಿಂದ "ಸುಭಮೂಹೋರ್ತದೊಳಾ ಚಂದ್ರಾರ್ಕ ಸ್ಥಾಯಿಯಪ್ಪಂತು" ಎಂದು ಹುಂಚಶಾಸನ[204] ತಿಳಿಸುತ್ತದೆ. ವೀರಸಾನ್ತಾರನ ರಾಣಿಯೇ ಆದ ಚಾಗಲಾದೇವಿ ನೊಕ್ಕಿಯಬ್ಬೆ ಹೆಸರಿನ ಪದ್ಮಾವತಿ ಬಸದಿಯ ಮುಂದೆ 'ಮಕರ ತೋರಣ' ಮಾಡಿಸಿದಂತೆ ಉಲ್ಲೇಖವಿದೆ.[205]

ಬನವಾಸಿ ಕದಂಬ ಮನೆತನದ ಕೀರ್ತಿವರ್ಮನ ರಾಣಿ ಮಳಲಾದೇವಿ ಜಿನಬಸದಿಗೆ ಮಿಳರ್ವಪತಾಕೆ, ಮಕರ ತೋರಣ, ಮಾನಗಂಭ, ಚೈತ್ರಗೃಹಗಳನ್ನು ನೀಡುವುದರೊಂದಿಗೆ

---

[200] ಸೌತ್ ಇಂಡಿಯನ್ ಇನ್ಸ್‌ಸ್ಕ್ರಿಪ್ಸನ್ XV-11-47 – (ಕ್ರಿ.ಶ. 1151)

[201] ಡಾ.ಎಚ್.ಎಸ್. ಗೋಪಾಲರಾವ್, **ಕಲ್ಯಾಣಿ ಚಾಲುಕ್ಯರ ದೇವಾಲಯಗಳು ಒಂದು ಅಧ್ಯಯನ ಪಿಹೆಚ್.ಡಿ ನಿಬಂಧ** ಅಪ್ರಕಟಿತ, ಪು–194.

[202] ಎ.ಕ viii ನಗರ (ತಾ) 35, ಹೂಚ (ಜಿಲ್ಲೆ) (ಕ್ರಿ.ಶ. 1077)

[203] ಅದೇ

[204] ಎ.ಕ Viii ನಗರ 36, ಹುಂ, (ಕ್ರಿ.ಶ. 1077)

[205] ಅದೇ, 47.

ಜಿನಧರ್ಮಕ್ಕೆ ಪ್ರೋತ್ಸಾಹಿಸಿದಳೆಂದು ಶಾಸನ ತಿಳಿಸುತ್ತದೆ.[206] ಜೊತೆಗೆ ವಿದ್ಯಾಭಿಮಾನಿಯಾಗಿದ್ದ ಮಾಳಲಾದೇವಿ ಕುಪ್ಪಟೂರು ಅಗ್ರಹಾರದಲ್ಲಿ ಬ್ರಹ್ಮಜಿನಾಲಯವನ್ನು ಸ್ಥಾಪಿಸಿದಳು.[207] ಜೊತೆಗೆ ಆಚಾರ್ಯ ಮುನಿಗಳನ್ನು, ಋಷಿಗಳನ್ನು ಪೂಜಿಸಿದಳು. ವಟ್ಟಿಗೆಯನ್ನು (ವಿಶ್ರಾಂತಿ ಗೃಹ) ಇರಿಸಿದಳು. ವಿಪುಲವಾದ ದತ್ತಿಗಳನ್ನು ನೀಡಿದಳು. ಮಾಳಲಾದೇವಿಯ ಪೋಷಣೆಯಿಂದ ಕುಪ್ಪಟೂರು ಅಗ್ರಹಾರವು ವಿದ್ಯೆಯ ಕೇಂದ್ರವಾಗಿ ಬೆಳೆಗಿತು. ಇಲ್ಲಿ ಮಾಳಲಾದೇವಿ ವಿದ್ಯೆಯ ಜೊತೆಗೆ ಬ್ರಹ್ಮಜಿನಾಲಯವನ್ನು ಸ್ಥಾಪಿಸಿ ಜಿನಧರ್ಮಕ್ಕೆ ನೀಡಿದ ಕೊಡುಗೆ ಅಜರಾಮರ ಎಂಬುದನ್ನು ತಿಳಿಯಬಹುದು. ಅಷ್ಟೇ ಅಲ್ಲದೆ ಮಾಳಲಾ ದೇವಿ"ಜಿನಮತ ಶರದಿ" ಎಂಬ ಬಿರುದು ಪಡೆದಿದ್ದು ಕುಪ್ಪಟೂರಿನಲ್ಲಿ ಪಾರ್ಶ್ವನಾಥ, ಚೈತ್ಯಾಲಯವನ್ನು ನಿರ್ಮಿಸಿ ಅದಕ್ಕೆ ಬ್ರಹ್ಮಜಿನಾಲಯವೆಂದೇ ಹೆಸರಿಸಿ ನಿತ್ಯಪೂಜೆಗೆ ಸಿಡ್ಡಣಿವಳ್ಳಿಯನ್ನು ದತ್ತಿಯಾಗಿ ನೀಡಿದ್ದಾಳೆ.[208]ಇಲ್ಲಿ ಗಮನಿಸಬಹುದಾದ ವಿಷಯವೆಂದರೆ ಜೈನಧರ್ಮದ ಕೊಡುಗೆಗಳು ಹನ್ನೊಂದನೆಯ ಶತಮಾನಕ್ಕಾಗಲೆ ಶೈವಧರ್ಮದ ಆಚಾರ್ಯರ ಸಮ್ಮುಖದಲ್ಲಿ ನಡೆಯುತ್ತಿದ್ದದ್ದು ಇದನ್ನು ಚೆನ್ನಕ್ಕ ಎಲಿಗಾರರವರು ಸಹ ಗುರುತಿಸಿದ್ದಾರೆ.[209] ಅತ್ತಿಮಬ್ಬೆಯ ಲಕ್ಕುಂಡಿ ಜಿನಾಲಯದ ರಚನೆಯ ಕಾಲದಿಂದಲೇ ಈ ನಾಮ ನಿರ್ದೇಶನ ಜಾರಿಯಾಯಿತೆಂದು ಬಾವಿಸಬಹುದಾಗಿದೆ. ಇದಕ್ಕೆ ಉದಾಹರಣೆಯಾಗಿ ಲಚ್ಚಿಯಬ್ಬರಸಿ ಹೂಲಿಯ ಬಸದಿಗೆ ನೀಡಿದ ದಾನ[210] ಮತ್ತು ಮಾಳಲಾದೇವಿ ಕುಪ್ಪಟೂರಿನ ಬಸದಿಗೆ "ಅಶೇಷ ಮಹಾಜನಂಗಳು ಯಥೋಕ್ತ ವಿಧಿಯಿಂ ಪೂಜಿಸಿಯವರಿಂ ಬ್ರಹ್ಮಜಿನಾಲಯವೆಂದು ಪೆಸರಿಟ್ಟು ದತ್ತಿಕೊಟ್ಟಂತಹ ಸಂಗತಿಗಳು ಬಹುಮುಖ್ಯ ನಿದರ್ಶನಗಳಾಗಿವೆ."[211]

'ಅರಸನೋ ಬಹುವಲ್ಲಭಾ' ಎಂಬ ನಾಣ್ಣುಡಿಯಂತೆ ನಿದರ್ಶನನಾದ ಚಾಲುಕ್ಯರ ಆರನೇ ವಿಕ್ರಮಾದಿತ್ಯ ಇಲ್ಲಿಯವರೆವಿಗಿನ ದಾಖಲೆಗಳ ಪೈಕಿ ಇಪ್ಪತ್ತು ಜನ ರಾಣಿಯರನ್ನು ಹೊಂದಿದ್ದ

---

[206] ಎ.ಕ. VIII ಸೊರಬ 262, ಕಸವಳ್ಳಿ, (ಕ್ರಿ.ಶ. 1077)

[207] ಡಾ. ದೇಸಾಯಿ ಪಾಂಡುರಂಗರಾಯರು, **ಕನ್ನಡನಾಡಿನ ಮಿಂಚಿದ ಮಹಿಳೆಯರು,** ಪು–34–35. ಇತಿಹಾಸ ಸಂಶೋಧನಾ ಮಂಡಲ, ಧಾರವಾಡ, 2007–08.

[208] ಎ.ಕ viii ಸೊರಬ 262, ಕಸವಳ್ಳಿ (1077)

[209] ಡಾ. ಚೆನ್ನಕ್ಕ ಎಲಿಗಾರ, **ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ,** ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರ ವಾಡ, 1990.

[210] ಅದೇ, ಪು–117.

[211] ಎ.ಕ Viii ಸೊರಬ 262, ಕಸವಳ್ಳಿ (ಕ್ರಿ.ಶ. 107)

ಎಂಬುದು ಅವರಲ್ಲಿ "ಜಿನಗಂಧೋಧಕ ಪವಿತ್ರೀಕೃತೋತ್ತಮಾಂಗೆ" ಜಾಕಲಾದೇವಿ ಬಹು ಪ್ರಮುಖಳು.

"ಬ್ರತಮಂ ಚಾಳುಕ್ಯಕ್ಷಿತಿ

ಪತಿ ಕಿಡಿಸುವೆನೆಂದು ಪೂಣ್ಡಡಂ ಕಿಡಿಸದಡಂ

ಪ್ರತಿ ಪಾಳಿಸಿದೊಂದು ಮಹೋ

ನ್ನತಿ ಜಾಕಲದೇವಿಗೆಕ್ಕ ಲಾವಣಮಲ್ತೆ" ಎಂದೇ ಇಂಗಳಿಗೆ ಯ ಶಾಸನ[212] ಜಾಕಲಾದೇವಿಯನ್ನ ಕೊಂಡಾಡಿದೆ. ಈ ಜಾಕಲಾದೇವಿ "ಅರಲ್ಮೂನೂರರೊಳಗಣ ಇಂಗಳಿಗೆಯಲ್ಲಿ ತ್ರಿಭೋಗಾಭ್ಯನ್ತರ ಸಿದ್ದಿಯಿಂಟ ಆಳುತ್ತಲಿದ್ದಾಗ ಒಬ್ಬ ವಡ್ಡವ್ಯಾಪಾರಿ ಸುಂದರವಾದ ಮಾಹು ಮಾಣಿಕ್ಯದ ವಿಗ್ರಹವನ್ನು ಮಾರುತ್ತಿದ್ದದ್ದನ್ನು ನೋಡಿ ಇಷ್ಟಪಟ್ಟಾಗ ಆರನೇ ವಿಕ್ರಮಾದಿತ್ಯ ಜಾಕಲಾದೇವಿಗೆ "ಈ ಪ್ರತಿಮೆಯಂ ನಿನ್ನಾಳ್ಕೆಯೂರೊಳ್ಪಿನೇಯ ನಿಕಾಯಂ ಬಗೆಗೊಳ್ಪಿನಂ ನಿಲಿಸು" ಎಂದು ಹೇಳಿದ ವಿಷಯವನ್ನು ಗಮನಿಸಿದರೆ ಆಕೆ ರಾಜನ ಜೊತೆಯಲ್ಲಿ ಜೈನಬಿಂಬವನ್ನು ಪ್ರತಿಷ್ಠಾಪಿಸಿದ ಧರ್ಮದ ಪ್ರಗತಿಗೆ ನೀಡಿದ ಕೊಡುಗೆಯನ್ನು ತಿಳಿಯಬಹುದು. ರಾಜ ಜಿನಬಿಂಬವನ್ನು ಇಷ್ಟಪಟ್ಟ ಮೇಲೆ ತನ್ನ ರಾಣಿಗೆ ತನ್ನ ಆಳ್ವಿಕೆಯ ಪ್ರದೇಶದಲ್ಲಿ ಸ್ಥಾಪಿಸು ಎಂದು ಹೇಳಿರುವುದನ್ನು ಗಮನಿಸಿದರೆ, ಆಕೆ ಜೈನಧರ್ಮವನ್ನು ಸ್ವೀಕರಿಸಿರಲೇ ಬೇಕು ಎಂದು ಯೋಚಿಸಬಹುದಾಗಿದೆ.

"ಮಾಡಿದಪ್ಪೆನಿಂ ಜಿನಗೃಹಂಗಳ ನೆಂಬಿವರೀ ಪ್ರಕಾರದಿಂ

ಮಾಡಿಪುದಂತಿದತ್ತಿ ಪಡಿಚೆಂದಮಿಳಾವಳಯಕ್ಕೆ ನಲ್ಕೇನಾ

ಡಾಡಿಗಳುಂಬ ಮಪ್ಪ ಪರಿಶೋಭೆಗೆ ತಾಯ್ಮನೆಯಾಗೆಭಕ್ತಿಯಿಂ

ಮಾಡಿಸಿದಳ್ಳಯತ್ತಳೆಮ ನೋತ್ತರಿ ಪಂತು ಜಿನೇಂದ್ರಗೇಹಮಂ।"

ಎಂದು ಜಾಕಲಾದೇವಿ ಪತಿಯ ಆಜ್ಞೆಯಂತೆ ಇಂಗಳಗಿಯಲ್ಲಿ ಒಂದು ಜಿನಾಲಯವನ್ನು ಕಟ್ಟಿಸಿ, ಜಿನಬಿಂಬವನ್ನು ಆ ಜಿನಾಲಯದಲ್ಲಿ ಸ್ಥಾಪಿಸಿದಳು. ಇಂದಿಗೂ ಈ ದೇವಾಲಯದ ಅವಶೇಷವನ್ನು ಕಾಣಬಹುದು. ಆದರೆ ದೇವಾಲಯ ಹಾಳಾಗಿದ್ದರೂ, ಜಿನಬಿಂಬ ಮಾತ್ರ ಇಂದಿಗೂ

[212] ಡಾ. ದೇಸಾಯಿ ಪಾಂಡುರಂಗರಾಯರು, **ಕನ್ನಡ ನಾಡಿನ ಮಿಂಚಿದ ಮಹಿಳೆಯರು,** ಪು–114, ಇತಿಹಾಸ ಸಂಶೋಧನಾ ಮಂಡಲ ಧಾರವಾಡ, 2007–08.

ಇದ್ದು, ಜೈನ ಧರ್ಮದ ವೃತ್ತಾಂತವನ್ನು ಸಾರುತ್ತಲಿದೆ.[213] ಜಿನಾಲಯವನ್ನು ನಿರ್ಮಿಸಿದಲ್ಲದೇ ದೇವಾಲಯದ ನಿತ್ಯ ಪೂಜಾಧಿ ವಿಧಾನಗಳು ಸರಾಗವಾಗಿ ಸಾಗಲು ಉಚಿತವಾದ ತಳವೃತ್ತಿಯನ್ನು (ಭೂಮಿ) ಮತ್ತು ಬೇರೆ ದಾನಗಳನ್ನು ಮಾಡಿದಳು, ಧರ್ಮಗುರುಗಳಿಗೆ ಆ ಜಿನ ಬಸದಿಯನ್ನು ಬಿಟ್ಟುಕೊಟ್ಟಳು.

ಗಂಗ ಪೆರ್ಮಾಡಿಯ ಪಟ್ಟಮಹಾದೇವಿ 'ಬಾಚಲದೇವಿ "ಜಿನಶಾಸನ ಸಾಮ್ರಾಜ್ಯ ಯಶಳ್ವತಾಕೆ" ಎಂದೇ ಹೆಸರುಗೊಂಡಿದ್ದಳು. ಈಕೆ ಬನ್ನಿಕೆರೆಯಲ್ಲಿ ಪಾರ್ಶ್ವನಾಥ ಸ್ವಾಮಿಗೆ ಜಿನ ಗೃಹವನ್ನು ಕಟ್ಟಿಸಿ ಅದಕ್ಕೆ ಬೂದಂಗೆರೆ, ಬನ್ನಿಕೆರೆಯಲ್ಲಿ ಮೂರು ಮತ್ತರು ಗದ್ದೆ, ಒಂದು ಮತ್ತರು ತೋಟ ಎರಡು ಗಾಣಗಳನ್ನು ಬಿಟ್ಟುಕೊಟ್ಟಿದ್ದಾಳೆ.[214]

ಇನ್ನು ಹೊಯ್ಸಳರ ಕಾಲಕ್ಕೆ ಬಂದರೆ ಜೈನಧರ್ಮದ ಗುರುಗಳಾದ ಸುದತ್ತಾಚಾರ್ಯರಿಂದ ಹೊಯ್ಸಳ ಸಾಮ್ರಾಜ್ಯ ಸೃಷ್ಟಿಯಾಯಿತು. ಈ ಜೈನ ಗುರುಗಳ ಆಗಮನದಿಂದ ಹೊಯ್ಸಳ ಸಾಮ್ರಾಜ್ಯದಲ್ಲಿ ಜೈನ ಧರ್ಮ ಬೆಳೆದು ಹೆಮ್ಮರವಾಯಿತು. ಜೈನ ಆಚಾರ್ಯರು ಹೊಯ್ಸಳ ಸಾಮ್ರಾಟರನ್ನು ಆಶೀರ್ವದಿಸಿ ಅನುಗ್ರಹ ಪೂರ್ವಕವಾಗಿ ಉತ್ತೇಜನವಿತ್ತರು. ಹೊಯ್ಸಳರ ಕಾಲದಲ್ಲಿ ಜೈನಧರ್ಮದ ಹಿರಿಮೆಗೆ ಆಚಾರ್ಯರ ದೂರದರ್ಶಿತ್ವದ ವಿಚಾರ ಪರಿಣತಿಯೂ ಮುಖ್ಯ ಕಾರಣಗಳಾಗಿದ್ದವೆಂದು ನಾವು ಹೇಳಬಹುದು. ಹೊಯ್ಸಳರ ದೊರೆಗಳಲ್ಲಿ ಬಹುಮಂದಿ ಜೈನಧರ್ಮೀಯರುಗಳಾಗಿದ್ದರು. ಮತ್ತು ಅವರು ಜೈನ ದೇವಾಲಯಗಳ ಮತ್ತು ಜೈನ ಸಂಘ–ಸಂಸ್ಥೆಗಳ ಆಶ್ರಯದಾತರಾಗಿದ್ದು ಅವುಗಳ ಉಚ್ಛ್ರಾಯ ಸ್ಥಿತಿಗೆ ಬೇಕಾದ ಸಹಾಯ ದಾನ ಸಂಪತ್ತುಗಳನ್ನು ಉದಾರವಾಗಿ ಒದಗಿಸುತ್ತಿದ್ದರು. ದಕ್ಷಿಣ ಭಾರತದಲ್ಲಿ ಸರ್ವತ್ರ ಕಂಡುಬರುವ ಜೈನದೇವಾಲಯಗಳೂ, ಚೈತ್ಯಗಳೂ ತೀರ್ಥಂಕರರ ಪ್ರತಿಮೆಗಳು ಗುರುಗಳ ಸಮಾಧಿ ಸ್ಥಾನಗಳಾದ ನಿಶಿದ್ದೆಗಳೂ ಮತ್ತು ಶಾಸನಗಳು ಇವೆಲ್ಲವೂ ಹೊಯ್ಸಳರ ಕಾಲದಲ್ಲಿ ಜೈನಧರ್ಮವು ತುಂಬ ಜನಪ್ರಿಯ ಧರ್ಮವಾಗಿತ್ತು. ಹೊಯ್ಸಳ ಸಾಮ್ರಾಜ್ಯದ ಜನ್ಮಸ್ಥಳವು ಮೂಡಿಗೆರೆ ತಾಲ್ಲೂಕಿನ ಅಂಗಡಿ. ಈ ಸ್ಥಳಕ್ಕೆ ಹಿಂದೆ ಸೊಸೆವೂರು/ಶಶಕಪುರ ಎಂಬ ಹೆಸರು ಇತ್ತು. ಇದು ಜೈನಧರ್ಮದ ಭದ್ರವಾದ

---

[213] ಶಾ. ಸಾ.ಸಂ 44, ಇಂಗಳಗಿ (ತಾ) ಕಲುಬುರ್ಗಿ (ಜಿಲ್ಲೆ) (ಕ್ರಿ.ಶ. 1094)

[214] ಶಾ.ಸಾ.ಸಂ. 44 ಇಂಗಳಗಿ (ತಾ) ಕಲುಬುರ್ಗಿ(ಜಿಲ್ಲೆ) (ಕ್ರಿ.ಶ. 1094)

ನೆಲೆಯಾಗಿತ್ತು.[215] ಇಲ್ಲಿ ಜೈನಬಸದಿಗಳೂ ಕುಲದೇವತೆಯಾದ ಶ್ರೀ ಪದ್ಮಾವತಿ ದೇವಾಲಯವಿದೆ. ಜೈನಧರ್ಮಕ್ಕೆ ರಾಜವರ್ಗದವರು, ಜೈನಧರ್ಮವನ್ನು ಪ್ರೋತ್ಸಾಹಿಸಿದಂತೆ ರಾಣಿಯರೂ ಪ್ರೋತ್ಸಾಹಿಸಿ ಬೆಳೆಸಿದರು.

ಎರೆಯಂಗನ ಕಾಲದಲ್ಲಿ ಮರಿಯಾನೆ ದಂಡನಾಯಕನ ತಾಯಿ ಶಾಂತಲಾದೇವಿ ಸಿಂದಘಟ್ಟದಲ್ಲಿ "ಘನತರಕೂಟ ಕೋಟೆಯಂತ' ಪಾರ್ಶ್ವನಾಥ ಜಿನೇಶ್ವಂಗೇಹ" ಮಾಡಿಸಿ "ಜಿನ ಜನನಿ" ಎಂದೇ ಪ್ರಸಿದ್ಧಿಗೊಂಡಿದ್ದಾಳೆ.[216] ಇದೇ ಮನೆತನದಲ್ಲಿ ಹನ್ನೆರಡನೆಯ ಶತಮಾನದ ಪೂರ್ವಾರ್ಧದಲ್ಲಿ ಹೊಯ್ಸಳ ಸಾಮ್ರಾಜ್ಯವನ್ನು ಅಲಂಕರಿಸಿ ಕನ್ನಡ ನಾಡನ್ನು ಜೈನ ಧರ್ಮೀಯಳಾಗಿಯೇ ಬೆಳಗಿದ ರಾಣಿ/ಶ್ರಾವಕಿ ಜಿನಧರ್ಮದಾತೆ, ವಿಷ್ಣುವರ್ಧನನ ಪಟ್ಟದರಸಿ ಶಾಂತಲೆ ಇವಳು "ಬಲಿಪುರ ವರಕ್ಷೀರ ವಾರಾಶಿಜನಿತ ಕಮಳೆಯುಂ"[217] ಹುಟ್ಟಿದಳೆಂದು ಶಾಸನ ಹೇಳುತ್ತದೆ ಇದನ್ನು ವಿದ್ವಾಂಸರಾದ ಡಾ.ಎಂ. ಚಿದಾನಂದ ಮೂರ್ತಿರವರೂ ದಾಖಲಿಸಿದ್ದಾರೆ.[218] ಇವಳ ತಂದೆ ಶೈವಭಕ್ತನಾದ ಮಾರಸಿಂಗಯ್ಯ. ತಾಯಿ ಜಿನ ಭಕ್ತೆಯಾದ ಮಾಚಿಕಬ್ಬೆ ಇವಳ ತಂದೆ ಶೈವಭಕ್ತನಾದ ಮಾರಸಿಂಗಯ್ಯ ಕಟ್ಟಿಸಿದ "ಧರ್ಮೇಶ್ವರನ ದೇವಸ್ಥಾನಕ್ಕೆ ಬಿಟ್ಟುಕೊಟ್ಟ ದತ್ತಿಯ ವಿಷಯವು ಬಂದಿರುವ ಶಾಸನದಲ್ಲಿ ಶಾಂತಲೆಯನ್ನು ಬಹುವಿಧದಲ್ಲಿ ಹೊಗಳಿವೆ.

"ಧರ್ಮೇಶ್ವರ ವರಪ್ರಸಾದ ಪುತ್ರಿ"[219] ಎಂದು ಕರೆದಿದೆ. ಅಂದರೆ ಶಾಂತಲೆ ಧರ್ಮೇಶ್ವರ ದೇವರ ದಯೆಯಿಂದ ಜನಿಸಿದಳು ಎಂಬುದಾಗಿದೆ. ಈ ಒಂದು ಶಾಸನ ಹಾಸನ ತಾಲ್ಲೂಕಿನ ಗ್ರಾಮದಲ್ಲಿದೆ. ಇಲ್ಲಿ ಧರ್ಮೇಶ್ವರ ದೇವಸ್ಥಾನವಿದೆ. ಆಗಾಗಿ ಶಾಂತಲೆ ಜನಿಸಿದ್ದು ಈ ಧರ್ಮೇಶ್ವರ ದೇವರ ವರ ಪ್ರಸಾದದಿಂದ ಅಲ್ಲ "ಬಳ್ಳಿಗಾವೆಯಲ್ಲಿ ಧರ್ಮೇಶ್ವರ ದೇವರವರ ಪ್ರಸಾದದಿಂದ" ಇದಕ್ಕೆ ಶಾಸನಾಧಾರವಿದೆ.[220] ಇದನ್ನು ಡಾ.ಎಂ.ಚಿದಾನಂದ ಮೂರ್ತಿರವರು ತಮ್ಮ ನಿಬಂಧದಲ್ಲಿ

---

[215] ಎ.ಕ. VI. ಪು–13.

[216] ಎ.ಕ IV ನಗಮಂಗಲ 32, ಅಳೇಸಂದ್ರ (ಕ್ರಿ.ಶ.1103)

[217] ಎ.ಕ V ಬೇಲೂರು, 58, (ಕ್ರಿ.ಶ. 1117)

[218] ಡಾ.ಎಂ. ಚಿದಾನಂದ ಮೂರ್ತಿ, **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ,** ಪು–425, ಪ್ರಸಾರಾಂಗ, ಮೈಸೂರು ವಿ.ವಿ. 1965.

[219] ಎ.ಕ. V, ಹೊಳೆನರಸಿಪುರ, 116, ಕ್ರಿ.ಶ. 1123.

[220] ಎ.ಕ. XV, ಬೇಲೂರು, 257, ಕ್ರಿ.ಶ. 1140.

ದಾಖಲಿಸಿದ್ದಾರೆ.[221] ಬಳ್ಳಿಗಾವೆಯು ಅವಳ ತಾಯಿಯಾದ ಮಾಚಿಕಬ್ಬೆಯ ತವರೂರೆಂದೂ, ಮಾರಸಿಂಗಯ್ಯನ ಹುಟ್ಟೂರೆಂದು ತಿಳಿಯಬಹುದಾಗಿದೆ.

ಶಾಂತಲೆ ತನ್ನ ತಂದೆ–ತಾಯಿಯವರಿಗೆ ಒಬ್ಬಳೇ ಮಗಳಾದುದ್ದರಿಂದ ಬಾಲ್ಯದಲ್ಲಿ ಉತ್ತಮ ಶಿಕ್ಷಣ ದೊರೆತಿರಬಹುದಾದ ಅವಕಾಶಗಳಿದ್ದು, ಮುಂದೆ ಅವಳು ಹೊಯ್ಸಳ ವಿಷ್ಣುವರ್ಧನನ ಪಟ್ಟಮಹಿಷಿಯಾಗಿ[222] ಅವನ ಮನೋನಯನ ರಾಣಿಯಾದಳು. ಅವಳ ಕಲಾ ಪ್ರೌಢಿಮೆಯು ಅಸದೃಶವಾದುದ್ದು, ಪತಿಭಕ್ತಿಯೂ ಅಷ್ಟೇ. ವಿಷ್ಣುವರ್ಧನನ ಮತ್ತು ಶಾಂತಲೆಯವರ ಜೀವನವು ಆದರ್ಶದ ಚರಮ ಸೀಮೆಯನ್ನು ಮುಟ್ಟಿತ್ತು. ಅವಳ ಯಶಸ್ಸು ಎಲ್ಲಾ ಕಡೆ ಹರಡಿತ್ತು, ಎಂಬುದನ್ನು "ಯಶಃ ಪ್ರಸಂ ಪಾಂಡುರಿತ ದಿಕ್ಪಾಳ ಚೂಡಾಮಣಿಯು" ಎಂದು ಶಾಸನವೊಂದು ಹೊಗಳಿದೆ.[223] ಈಕೆ ರಾಜಕೀಯ, ಕಲೆ, ಧಾರ್ಮಿಕತೆಗಳ ಸಂಯುಕ್ತ ನೆಲೆ, ಶಾಂತಲೆ ಎಲ್ಲಾ ಧರ್ಮಗಳನ್ನು ಪ್ರೋತ್ಸಾಹಿಸಿದ್ದರೂ, ವಿಶೇಷ ಒಲವು ನೀಡಿದ್ದು ಮಾತ್ರ ಜೈನಧರ್ಮದ ಕಡೆ ಎಂಬುದರಲ್ಲಿ ಸಂದೇಹವಿಲ್ಲ. ಶಾಂತಲೆ ಎಲ್ಲಾ ಧರ್ಮಗಳನ್ನು ಪ್ರೋತ್ಸಾಹಿಸಿದ್ದರೂ, ವಿಶೇಷ ಒಲವು ನೀಡಿದ್ದು ಮತ್ರ ಜೈನಧರ್ಮದ ಕಡೆ ಎಂಬುದರಲ್ಲಿ ಸಂದೇಹವಿಲ್ಲ. ಶಾಂತಲೆ ಜೈನಧರ್ಮವನ್ನು ಉತ್ತುಂಗಮಟ್ಟಕ್ಕೇರಿಸಿದಳು, ಎಂಬುದಕ್ಕೆ ಶ್ರವಣಬೆಳಗೊಳದಲ್ಲಿನ ಶಾಸನಗಳೇ ಸಾಕ್ಷಿ. ಆಕೆಯ ಬಿರುದುಗಳೆಲ್ಲವು ಇದನ್ನೇ ಬೆಂಬಲಿಸುತ್ತದೆ.

ಮುನಿಜನವಿನೇಯ ಜನ–ವಿನೀತೆ, ಸಮ್ಯುಕ್ತ ಚೂಡಾಣಿ, ಚತುಸ್ಸಮಯ ಸಮುದ್ದರಣ ಕಾರಣಿ, ಜಿನಸಮಯ ಸಮುದಿತ ಪ್ರಕಾರೆ, ಜಿನಧರ್ಮನಿರ್ಮಳೆ, ಜಿನಧರ್ಮ ಕಥಾಕಥನ ಪ್ರಮೋಧ, ಜಿನಗಂಧೋದಕ ಪವಿತ್ರೀ, ಕೃತೋತ್ತಮಾಂಗೆ, ಮೊದಲಾದ ಶಾಸನೋಕ್ತ ಬಿರುದುಗಳು ಆಕೆಯ ಜಿನಧರ್ಮ ನಿಷ್ಠೆಗೆ ಸಾಕ್ಷಿಯಾಗಿವೆ. ಜೊತೆಗೆ ಶ್ರವಣಬೆಳಗೊಳದ ಬೆಳ್ಗೊಳ ತೀರ್ಥದಲ್ಲಿ ಸವತಿ ಗಂಧಾವರಣ ಬಸದಿ'ಯನ್ನು ನಿರ್ಮಿಸಿ ತನ್ನ ರಾಜವಲ್ಲಭ ವಿಷ್ಣುವರ್ಧನನ್ನು ಪ್ರಾರ್ಥಿಸಿ ಅಲ್ಲಿಯ ದೇವರ ಪೂಜೆಗೆ ಮತ್ತು ಆಹಾರ ದಾನಕ್ಕೋಸ್ಕರ ಕಲ್ಕಣಿನಾಡ ಮೊಟ್ಟದವಿಲೆ ಗ್ರಾಮವನ್ನು ತನ್ನ

---

[221] ಡಾ.ಎಂ. ಚಿದಾನಂದ ಮೂರ್ತಿ, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು–423, ಪ್ರಸಾರಾಂಗ, ಮೈಸೂರು ವಿ.ವಿ. 1965.

[222] ಎ.ಕ v, ಶ್ರವಣ ಬೆಳಗೊಳದ ಶಾಸನಗಳು.

[223] ಎ.ಕ. V, ಹೊಳೆನರಸೀಪುರ, 116, ಕ್ರಿ.ಶ 1123.

ಗುರು ಪ್ರಭಾಚಂದ್ರ ಸಿದ್ಧಾಂತ ಮುನಿಗಳಿಗೆ ಬಿಟ್ಟುಕೊಟ್ಟಿದ್ದಾಳೆ.[224] ಅದಕ್ಕೆ "ಸವತಿ ಗಂಧವಾರಣ ಜಿನಾಲಯ" ಎಂದು ಹೆಸರಿಸಿದ್ದಾಳೆ.[225] ಸವತಿ ಗಂಧವಾರಣ ಎಂಬುದು ಶಾಂತಲೆಯ ಬಿರುದು ವಿಶೇಷಣಗಳಲ್ಲಿ ಒಂದು ಆದರೆ ಇಲ್ಲಿ ಚರ್ಚಿಸಬಹುದಾದ ವಿಷಯವೆಂದರೆ ಆ ಹೆಸರು ಬರಲು ಕಾರಣವೇನೆಂಬುದು? "ಸವತಿ ಗಂಧವಾರಣೆ" ಎಂಬುದು ಬಿರುದು ವಿಶೇಷಣಕ್ಕೊಂದು ವಿವರಣೆಯನ್ನು ಹೀಗೂ ಕೊಡಬಹುದಾಗಿದೆ, "ರಾಜನೋ ಬಹುವಲ್ಲಭಾ" ಎಂಬ ಹೇಳಿಕೆಯನ್ನು ಹೊಯ್ಸಳ ದೊರೆಗಳು ಸಾರ್ಥಕಪಡಿಸಿಕೊಂಡಿದ್ದಾರೆ. ಆಗಾಗಿ ಒಂದೇ ಅರಮನೆಯಲ್ಲಿ ರಾಣಿಯರು ಬದುಕಬಹುದಾದ ಸನ್ನಿವೇಶಗಳು ಹೆಚ್ಚೆಂದು ಹೇಳುವುದು ಅನಾವಶ್ಯಕ. ಸವತಿ ಮತ್ಸರವನ್ನು ವಿಭಿನ್ನ ರೀತಿಯಲ್ಲಿ ವ್ಯಕ್ತಪಡಿಸುವಲ್ಲಿ ಆ ರಾಣಿವರ್ಗ ನೆಮ್ಮದಿ ಪಡೆದಂತಿದೆ. ಸವತಿ ಮತ್ಸರ ಎಲ್ಲ ರಾಣಿ ವರ್ಗಗಳಲ್ಲಿ ಕಂಡುಬರುವ ಸಹಜ ಪ್ರಕ್ರಿಯೆ. ಹೊಯ್ಸಳ ಕಾಲದ ಕನ್ನಡ ಶಾಸನಗಳು ಈ ಸವತಿ ಮಾತ್ಸರ್ಯದ ಬಹುಮುಖವನ್ನು ಪರಿಚಯಿಸಿವೆ.

ಬಿರುದಿನ ಬಿಂಕದಂಕದ ವಿಳಾಸಂ ಮೆರೆವ ಸವತಿಯರ ಮುಖದ ಕೈ "ಉದ್ವೃತ್ತ ಸವತಿಗಜಕೇಸರಿ" ಎಂಬ ವಿಭಿನ್ನ ರೀತಿಯ ಬಿರುದುಗಳು ಅವಳ ಸವತಿ ಮಾತ್ಸರ್ಯದ ಗರಿಬಿಚ್ಚಿಸಿ ನಿಂತಿವೆ. ಈ ರೀತಿಯ ವೈವಿಧ್ಯಪೂರ್ಣ ಹೆಸರುಗಳಿಂದ ತಮ್ಮನ್ನು ಕರೆದುಕೊಳ್ಳುವುದು, ಅವರಿಗೆ ಅಭಿಮಾನ ಸೂಚಕ ಪದಗಳೆನಿಸಿರಬೇಕು. ಅಥವಾ ರಾಜನ ಪ್ರೌಢಿಮೆಯನ್ನು ಹೆಚ್ಚಿಸುವ ಸಲುವಾಗಿರಬೇಕು. ಈ ರೀತಿ ಸಂಸಾರದಲ್ಲಿ ಪ್ರೀತಿ–ವಿಶ್ವಾಸಗಳ ಮುಖ ಒಂದಾದರೆ ಸಂಸಾರದ ಬಿಕ್ಕಟ್ಟಿನ ಪ್ರಸಂಗವನ್ನು ಸೂಚಿಸುವ ಬಹುಪತ್ನಿತ್ವದ ಪದ್ಧತಿ ಹೊಯ್ಸಳರಲ್ಲಿ ಹೆಚ್ಚಿನ ಸವತಿ ಮತ್ಸರಕ್ಕೆ ಎಡೆಮಾಡಿಕೊಟ್ಟಿದೆ. ಅವರು ತಮ್ಮನ್ನು, ತಮ್ಮ ಭಾವನೆಗಳನ್ನು ಕಲ್ಬರಹದಲ್ಲಿ ಒಡಮೂಡಿಸಿದುದು, ಸಮಕಾಲೀನ ಸಮಾಜದ ಮತ್ತು ಸಾಮಾಜಿಕ ಬದುಕಿನ ದೃಷ್ಠಿಯಿಂದ ಅತ್ಯಂತ ಅಪರೂಪದ ನಿದರ್ಶನಗಳೆನಸಿವೆ.[226]

ವಿಷ್ಣುವರ್ಧನನ ಅಂತಃಪುರದಲ್ಲಿ ಅನೇಕ ರಾಣಿಯರಿದ್ದರು ಅವರ ಮಧ್ಯೆ ಶಾಂತಲೆ ಬಾಳಬೇಕಾಯಿತು. ಸವತಿಯರ ಮಧ್ಯೆ ಇದ್ದರೂ, ಸವತಿ ಮತ್ಸರ ಇವಳಲ್ಲಿ ಇರಲಿಲ್ಲ ಎಂಬುದಕ್ಕೆ

---

[224] ಎ.ಕ. ii. **ಶ್ರವಣಬೆಳಗೊಳ,** 176(ಕ್ರಿ.ಶ. 1131)

[225] ಎ.ಕ. ii. **ಶ್ರವಣಬೆಳಗೊಳ,** 132 (ಕ್ರಿ.ಶ. 1123)

[226] ಡಾ. ಚೆನ್ನಕ್ಕ ಎಲಿಗಾರ, **ಪ್ರಾಚೀನ ಕರ್ನಾಟಕದ ರಾಣಿಯರು,** ಪು.102, ಪ್ರಸಾರಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, 1990.

ಅವಳಿಗಿದ್ದ "ಸವತಿ ಗಂಧವಾರಣೆ" ಎಂಬ ಬಿರುದೇ ಸಾಕ್ಷಿಯಾಗಿದೆ. ಅಂದರೆ ಶಾಂತಲೆ ವಿಷ್ಣುವರ್ಧನನ ಪ್ರತಿಸ್ಪರ್ಧಿ ಪತ್ನಿಯರ ನಡುವೆ ಇದ್ದಿರಬಹುದಾದ ಮತ್ಸರವನ್ನು ಆರಿಸಬಲ್ಲವಳಾಗಿದ್ದಳು ಎಂಬ ಅರ್ಥವನ್ನು ಈ ಬಿರುದು ಕೊಡುತ್ತದೆ. ಎಂದು ಹೇಳುವ ಪ್ರಯತ್ನ ನಮ್ಮದು. ಇಂತಹ ಸಹನೆ, ಸಹಿಷ್ಣುತೆ, ಸಹಬಾಳ್ವೆಯ ಸಾಂಸ್ಕೃತಿಕ ಮೌಲ್ಯಗಳನ್ನು ಪ್ರದರ್ಶಿಸುವ ಸಲುವಾಗಿಯೋ ಎಂಬಂತೆ ಒಂದು ಜೈನ ಬಸದಿಯನ್ನು ನಿರ್ಮಿಸಿ ಅದಕ್ಕೆ "ಸವತಿ ಗಂಧವಾರಣಿ" ಎಂದು ನಾಮಕರಣ ಮಾಡಿರಬಹುದು.

ಇಷ್ಟೇ ಅಲ್ಲದೇ ಎಳಸನ ಕಟ್ಟುವ ಕೆರೆಯಾಗಿ ಕಟ್ಟಿಸಿ ಸವತಿಗಂಧಹಸ್ತಿ ಬಸದಿಗೆ ಸರುಗಿಗಿ ದೇವಿಯರು ಜಿನಾಲಯಕ್ಕೆ ಬಿಟ್ಟರು ಎಂಬ ಉಲ್ಲೇಖವಿದೆ. ಸವತಿಗಂಧವಾರಣೆ ಬಸದಿಗೆ ಶಾಂತಲೆ, ಗಂಗಸಮುದ್ರದ ಕೆಳಗಿನ ನಡುಬಯಲಲ್ಲಿ 50 ಕೊಳಗ ಗದ್ದೆಯ ತೋಟವನ್ನು, 40 ಗದ್ಯಾಣ ಹೊನ್ನನಿಕೆ ಕಟ್ಟಿಸಿ ಚರುಗಿಗಂಗೆ ಎಳಸನ ಕಟ್ಟಮುಮಂನ್ನು ಗುರು ಚಂದ್ರರಿಗೆ ಬಿಟ್ಟುಕೊಟ ಮಾಹಿತಿ ಇದೆ.[227] ಇದರ ಜೊತೆಗೆ ತನ್ನ ಸಹೋದರನಾದ 'ದುದ್ದಮಲ್ಲ' ನೊಡನೆ' ದತ್ತಿಯನ್ನು ಸಹ ನೀಡಿದಳು.[228] ಕೊಪ್ಪಳದ ಶಾಸನವೊಂದು 'ಶಾಂತಲಾ ದೇವಿಯರ ಬಸದಿ' ಯೊಂದನ್ನು ಹೆಸರಿಸಿದೆ. ಬಹುಶಃ ಇದನ್ನು ಶಾಂತಲೆಯೇ ಕಟ್ಟಿಸಿರಬಹುದಾದ ಸನ್ನಿವೇಶಗಳಿವೆ.[229]

ಹಾಸನ ತಾಲ್ಲೂಕಿನ ಒಂದು ಗ್ರಾಮ ಮತ್ತು ಹೋಬಳಿ ಕೇಂದ್ರವಾದ ಶಾಂತಿಗ್ರಾಮ. ಇದು ಹಾಸನ–ಬೆಂಗಳೂರು ರಸ್ತೆಯಲ್ಲಿ ಹಾಸನದ ಪೂರ್ವಕ್ಕೆ 13 ಕಿ.ಮೀ ದೂರದಲ್ಲಿದೆ. ಇದನ್ನು ಹನ್ನೆರಡನೆಯ ಶತಮಾನದಲ್ಲಿ ವಿಷ್ಣುವರ್ಧನನ ರಾಣಿ ಶಾಂತಲೆ ಸ್ಥಾಪಿಸಿದಳೆಂದು ಶಾಸನಗಳಿಂದ ತಿಳಿದುಬರುತ್ತದೆ.[230] ಇಲ್ಲಿ ಒಂದು ಜೈನ ಬಸದಿ ಇದೆ. ಇದನ್ನು ರಾಣಿ ಶಾಂತಲೆಯೇ ಶಾಂತಿನಾಥನಿಗೆ ಅರ್ಪಿಸಿದ್ದಾಳೆ. ಇದನ್ನು ಒಬ್ಬ ವ್ಯಾಪಾರಿ ಸ್ಥಾಪಿಸಿದನೆಂದು ತಿಳಿದುಬರುತ್ತದೆ. ಈ ಬಸದಿಯಲ್ಲಿರುವ ಮೂಲ ವಿಗ್ರಹ ಮೂರು ಅಡಿ ಎತ್ತರವಿದ್ದು ಅಂದವಾದ ಸಿಂಬಿಯಾಕಾರದ ಪ್ರಭಾವಳಿಯನ್ನು ಹೊಂದಿದೆ. ವಿಗ್ರಹ ಮತ್ತು ಬಾಗಿಲುವಾಡದ ಮೇಲೆ ಹಾಸುಗಲ್ಲು ಬಿಟ್ಟು ಬಸದಿಯ ಉಳಿದ ಭಾಗ ಈಚೆಗೆ ಕಣಶಿಲೆಯಿಂದ ರಚಿತವಾಗಿದೆ. ಸ್ಥಳೀಯರ ಐತಿಹ್ಯದ ಪ್ರಕಾರ ಈ ಎಲ್ಲಾ

---

227 ಎ.ಕ.11 ಶ್ರವಣಬೆಳಗೊಳ, 176. (ಕ್ರಿ.ಶ. 1131)

228 **ಮೈಸೂರು ಆರ್ಕಿಯೋಲಾಜಿಕಲ್ ರಿಪೋರ್ಟ್ಸ್** – 1927–115, ಶ್ರವಣನ ಹಳ್ಳಿ, ತಾ (ಕೃಷ್ಣರಾಜ ಪೇಟೆ)

229 ಶಾಸನ ಪರಿಚಯ : ಕೊಪ್ಪಳ (ತಾ) ನಂ–18.

230 C.B. Seetharam – **Queen Shanthaladevi :** Quarterly Journal of the Mithic Society, Vol-38, P-143.

ದೇವಾಲಯಗಳನ್ನು ಶಾಂತಲೆಯೇ ಜೀರ್ಣೋದ್ಧಾರ ಮಾಡಿಸಿದ್ದಾಳೆಂದು ತಿಳಿದು ಬರುತ್ತದೆ. ಆದರೆ ಇದನ್ನು ನಂಬಲರ್ಹವಾದ ಲಿಖಿತ ದಾಖಲೆಗಳು ಅಲಭ್ಯವಾದ ಕಾರಣ ಇನ್ನು ಇವು ಪ್ರಶ್ನಾರ್ಥಕವಾಗಿಯೇ ಉಳಿದಿದೆ. ಶಾಂತಲೆಯು ಬಸದಿ ಕಟ್ಟಿಸಿದ ಕುರುಹಿಲ್ಲ. ಶಾಂತಲೆಯ ತಂದೆ ಹೆಗ್ಗಡೆ ಮಾರಸಿಂಗಮಯ್ಯನು ಧರ್ಮೇಶ್ವರ ದೇವಾಲಯವನ್ನು ಕಟ್ಟಿಸಿದ್ದಾನೆ.[231] ಈ ಗ್ರಾಮದಲ್ಲಿರುವ ಬಸದಿಯ ಅವಶೇಷದಿಂದ ಸುಮಾರು 11ನೇಯ ಶತಮಾನದಲ್ಲಿಯೇ ಇಲ್ಲಿ ಬಸದಿ ಇತ್ತೆಂದು ತಿಳಿಯುತ್ತದೆ. ಈ ಬಸದಿಯ ಶಾಸನವು ಮೂಲಸಂಘ ಪುಸ್ತಕಗಚ್ಛದ ಇಂಗಳೇಶ್ವರ ಬಳಿಯ ಹೊನ್ನಿಸೆಟ್ಟಿಯನ್ನು ಉಲ್ಲೇಖಿಸಿದೆ. ಈ ಬಸದಿಯು ಸುಪಾರ್ಶ್ವನಾಥ ಭಟಾರಕರದಾಗಿತ್ತೆಂದು ತಿಳಿಯುತ್ತದೆ.[232]

ಹೀಗೆ ಶಾಂತಲೆ ಕೊನೆಯ ತನಕ ಜೈನಧರ್ಮೀಯಳಾಗಿಯೇ ಜೈನಧರ್ಮದ ಉದ್ಧಾರಕ್ಕಾಗಿಯೇ ಶ್ರಮಿಸಿದಳು. ವಿಷ್ಣುವರ್ಧನ ಮಧ್ಯದಲ್ಲಿ 'ಜೈನಧರ್ಮವನ್ನು ಬಿಟ್ಟು' ಶ್ರೀರಾಮಾನುಜಾಚಾರ್ಯರ ಪ್ರಭಾವಕ್ಕೆ ಒಳಗಾಗಿ ವೈಷ್ಣವಧರ್ಮವನ್ನು ಸ್ವೀಕರಿಸಿದಾಗಲೂ, ಪಟ್ಟದರಸಿ ಶಾಂತಲೆ, ಜೈಧರ್ಮಿಯಳಾಗಿಯೇ ಉಳಿದಿದ್ದಳು. ಇದು ವ್ಯಕ್ತಿಸ್ವಾತಂತ್ರ್ಯವನ್ನು ಸೂಚಿಸುತ್ತದೆ ಮತ್ತು ರಾಜರು ರಾಣಿಯರ ಮೇಲೆ ಅಧಿಕಾರವನ್ನು ಬಲವಂತವಾಗಿ ಹೇರುತ್ತಿರಲಿಲ್ಲವೆಂದು ಇಲ್ಲಿ ತಿಳಿಯಬಹುದು.

ಇಷ್ಟೆಲ್ಲಾ ಜೈನಧರ್ಮದ ಪ್ರತೀಕಳಾಗಿದ್ದ ಶಾಂತಲಾದೇವಿ ಕ್ರಿ.ಶ. 1131ರಲ್ಲಿ ಶಿವಗಂಗೆಯಲ್ಲಿ 'ಜೈನಧರ್ಮದ ಪ್ರಮುಖ ವ್ರತವಾದ ಸಲ್ಲೇಖನ ವ್ರತವನ್ನು' ಸ್ವೀಕರಿಸಿ ಚೈತ್ರ ಮಾಸದ ಪಂಚಮಿಯ ದಿನದ ಸೋಮವಾರದಂದು ಸನ್ಯಸನ ವಿಧಿಯಿಂದ ಪ್ರಾಣವನ್ನು ತ್ಯಜಿಸಿದಳು. ಇದನ್ನು ಶಾಸನ ಹೀಗೆಂದು ಉಲ್ಲೇಖಿಸಿದೆ.

"ಅರಸಿ ಶಾನ್ತಲದೇವಿಯ ಮಹಿಮೆಯಂ ಬಣ್ಣಿಸಲು
ಬಕ್ಕುಮೆ ಭೂತದೊಳ್॥ ಸಕವರ್ಷ 1050 ಮಾಹೆ
ನೆಯ ವಿರೋಧಿ ಕ್ರಿತ್ಸವಂತ್ಸರದ ಚೈತ್ರಸುದ್ದ ಪಂಚ

[231] ಡಾ.ಕೆ. ವಸಂತಲಕ್ಷ್ಮಿ, **ಹಾಸನ ಜಿಲ್ಲೆಯ ಹೊಯ್ಸಳರ ಬಸದಿಗಳು**, ಪು–182. ಸಮುಖ ಪ್ರಕಾಶನ, ಬೆಂಗಳೂರು–2006.
[232] ಎ.ಕ VIII - **ಹಾಸನ** 169.

ಮೀ ಸೋಮವಾರದಂದು ಸಿವಗಂಗೆಯ ತೀರ್ಥದಲ ಮುಡವೆ

ಸ್ವರ್ಗತೆಯಾದಳು ॥ ಪ್ರಿ ॥[233]

ಈ ರೀತಿಯ ಸಾವು ಶಾಂತಲೆಗೆ ಕ್ಷಿಪ್ರಗತಿಯಲ್ಲಿ ಬಂದೊದಗಿದವುದಕ್ಕೆ ಕಾರಣಗಳು ಎನು? ಎಂಬುದು ಇನ್ನೂ ಅಸ್ಪಷ್ಟವಾದರೂ ಆಕೆ ಆತ್ಮಹತ್ಯೆಯನ್ನು ಮಾಡಿಕೊಂಡಳೆಂಬ ವಿಷಯವನ್ನು ಮೇಲೆ ತಿಳಿಸಿರುವ ಶಾಸನ ತೆಗೆದು ಹಾಕಿ ಧರ್ಮದ ವ್ರತವನ್ನು ಆಚರಿಸಿ ಮಡಿದಳೆಂದು ತಿಳಿಸಿದೆ.

ಹೀಗೆ ಶಾಂತಲೆ ಹೊಯ್ಸಳರ ಸಂಸ್ಕೃತಿಯನ್ನು ಪ್ರತಿನಿಧಿಸುವ ಅತ್ಯಂತ ಜನಪ್ರಿಯ ಉದಾಹರಣೆಯಾಗಿದ್ದಳೆಂದು ಹೇಳಿದರೆ ತಪ್ಪಾಗಲಾರದು. “ಯಥಾ ರಾಜ ತಥಾ ಪ್ರಜಾ” ಎಂಬ ಮಾತು ಸಂಸ್ಕೃತಿಯಲ್ಲಿ ಬರುತ್ತದೆ. ರಾಜ ಮತ್ತು ಅವನ ಕುಟುಂಬ ಸಮಸ್ತ ಪ್ರಜೆಗಳಿಗೆ ಮಾದರಿಯಾಗಬೇಕು. ಎಂಬುದು ಅಂದಿನ ಆದರ್ಶವಾಗಿತ್ತು. ಈ ದೃಷ್ಠಿಯಿಂದ ಹೊಯ್ಸಳ ವಿಷ್ಣುವರ್ಧನ ಮತ್ತು ಆತನ ಪಟ್ಟಮಹಿಷಿ ಶಾಂತಲೆಯ ಕುಟುಂಬ ಜೀವನ ಅಂದಿನ ಸಾಂಸ್ಕೃತಿಕ ವಲಯದಲ್ಲಿ ಮಾದರಿಯಾಗಿತ್ತೆಂದು ಮೂಲಗಳಿಂದ ತಿಳಿಯಬಹುದು. ಶಾಂತಲೆ ಆ ಕಾಲಕ್ಕೆ ಸಂಸ್ಕೃತಿಯ ಅನೇಕ ಪ್ರಕಾರಗಳಲ್ಲಿ ಸಾಕಷ್ಟು ಶಿಕ್ಷಣವನ್ನು ಪಡೆದುಕೊಂಡಿದ್ದ ಉದಾರ ಹೃದಯದ ರಾಣಿಯೆನಿಸಿದ್ದಳು. ಭರತನಾಟ್ಯ, ಸಂಗೀತ, ಧರ್ಮ, ಕಲೆ, ಸಾಹಿತ್ಯಗಳಲ್ಲಿ ಆಕೆ ಸಾಕಷ್ಟು ಜ್ಞಾನ ಹೊಂದಿದ್ದಳು. ರಾಜಧಾನಿಯ ದೇವಾಲಯಗಳಲ್ಲಿ ನೃತ್ಯ ಪ್ರದರ್ಶನಗಳನ್ನು ನೀಡುತ್ತಿದ್ದುದಲ್ಲದೇ ಸಂಗೀತ ಕಛೇರಿಗಳನ್ನು ನಡೆಸುತ್ತಿದ್ದಳು ಕರೆಯಲಾಗಿದೆ.[234]

ಶಾಂತಲೇ ಶ್ರೇಷ್ಠ ನಾಟ್ಯ ಕಲೆಯಲ್ಲಿ ಪಾರಂಗತಳಾಗಿದ್ದರಿಂದ ಅವಳನ್ನು ನಾಟ್ಯಸರಸ್ವತಿ, ಗಾನ ಸರಸ್ವತಿ ಎಂದು ವಿಮರ್ಶಕರು ಹೊಗಳಿದ್ದಾರೆ. ಇಂತಹ ಶಾಂತಲೇ, ಶಿವಗಂಗೆಯಲ್ಲಿ ಜೈನ ಸಂಪ್ರದಾಯದ ‘ಸಲ್ಲೇಖನ ವ್ರತ’ವನ್ನು ಕೈಗೊಂಡು ತನ್ನ ಭೌತಿಕ ದೇಹವನ್ನು ತ್ಯಜಿಸಿದಳೆಂದು ಶ್ರವಣಬೆಳಗೊಳದ ಶಾಸನ ಉಲ್ಲೇಖಿಸಿರುವುದನ್ನು ಗಮನಿಸಬಹುದಾಗಿದೆ.[235] ಸಲ್ಲೇಖನ ವ್ರತವೆಂಬುದು ಜೈನ ಸಂಪ್ರದಾಯದಲ್ಲಿ ಇರುವ ಒಂದು ಕಠಿಣವಾದ ವ್ರತಾಚರಣೆ ದೇಹವನ್ನು ಜೀವದಿಂದ ಸ್ವ–ಇಚ್ಛೆಯ ಮೂಲಕ ಹಂತವಾಗಿ ಬೇರ್ಪಡಿಸಿ ಸಾವನ್ನಪ್ಪುವುದೇ ಈ ವ್ರತದ ಉದ್ದೇಶ.

---

[233] ಎ.ಕ. II **ಶ್ರವಣ ಬೆಳಗೊಳ** 129, (ಕ್ರಿ.ಶ. 1120).

[234] ಡಾ.ಎಸ್.ಕೆ. ಶಿವಣ್ಣ, **ಹೊಯ್ಸಳ ಕಾಲದ ಸಂಸ್ಕೃತಿ, ಹೊಯ್ಸಳ ಸಂಪದ** 1996, ಪು–27.

[235] ಎ.ಕ 11 ಶ್ರವಣಬೆಳಗೊಳ 2009, (ಕ್ರಿ.ಶ. 1120)

ಇಲ್ಲಿ ಶಾಂತಲೆ ಯಾವ ಕಾರಣಕ್ಕಾಗಿ ಸಲ್ಲೇಖನ ವ್ರತದ ಮೂಲಕ ದೇಹಾರ್ಪಣೆ ಮಾಡಿದಳೆಂಬುದನ್ನು ತಿಳಿದುಕೊಳ್ಳಬೇಕು. ವಿಷ್ಣುವರ್ಧನನ ಪಟ್ಟಮಹಿಷಿಯಾಗಿದ್ದು ಹೊಯ್ಸಳ ಸಿಂಹಾಸನದ ಅಧಿಪತ್ಯೆಯಾಗಬೇಕಿದ್ದ ಶಾಂತಲೆ, ಲಕ್ಷ್ಮೀದೇವಿಯನ್ನು ಪಟ್ಟಮಹಿಷಿಯ ಸ್ಥಾನಕ್ಕೆ ಸೂಚಿಸಿ ಶಿವಗಂಗೆಯಲ್ಲಿ ಮುಡಿಪಿದಳು.

ಹೀಗೆ ಹೊಯ್ಸಳರ ಕಾಲದಲ್ಲಿ ಜೈನಧರ್ಮಕ್ಕೆ ರಾಜಮನೆತನದವರುಗಳಿಂದ ಪ್ರೋತ್ಸಾಹ ದೊರೆಯಿತು. ಅಂತೆಯೇ ಅವರ ಮಂತ್ರಿಗಳು, ದಂಡನಾಯಕರುಗಳು ಮತ್ತು ಅವರ ರಾಣಿಯರುಗಳಿಂದಲೂ ಸಹ ಜಿನಧರ್ಮ ಮತ್ತಷ್ಟು ಪ್ರೌಢವಾಯಿತು.

ಪೋಚಿಕಬ್ಬೆ ಅಥವಾ ಪೋಚಲಾದೇವಿ, ಬಾಣಗಬ್ಬೆ, ದೇವಿಯಕ್ಕ, ಹೊಯ್ಸಳರ ರಾಜಶ್ರೇಷ್ಠಳಾದ ಪೊಯ್ಸಳಸೆಟ್ಟಿ ಮತ್ತು ನೇಮಿಸೆಟ್ಟಿಯರ ತಾಯಂದಿರಾದ ಮಾಚಿಕಬ್ಬೆ ಮತ್ತು ಶಾಂತಿಕಬ್ಬೆ, ನಾಲಿಕಬ್ಬೆ, ಕಾಳಿಯಕ್ಕ, ಸುಗ್ಗಿಯಬ್ಬರಸಿ, ವಿಕ್ರಮ ಶಾಂತಾರನ ತಾಯಿ ಚಟ್ಟಲಾದೇವಿ, ಅಚಿಯಕ್ಕ, ಅಳಿಯಾದೇವಿ, ಚಟ್ಟಿಯಬ್ಬರಸಿ ಇವರುಗಳೆಲ್ಲಾ ಸಾಮಾನ್ಯ ವರ್ಗದವರಲ್ಲ ಬದಲಾಗಿ ರಾಜಮನೆತನದಲ್ಲಿನ ಆಡಳಿತ ಘಟಕವಾದ, ರಾಜಾಶ್ರಯದಲ್ಲಿದ್ದ ಮಂತ್ರಿಗಳು ಮತ್ತು ಅಧಿಕಾರ ವರ್ಗದವರುಗಳ ರಾಣಿಯರೆಂದೇ ಕರೆಯಬಹುದಾದ ಮಹಿಳೆಯರು. ಇವರು ತಮ್ಮ ಜೀವನದುದ್ದಕ್ಕೂ, ಧರ್ಮಕಾರ್ಯಗಳಲ್ಲಿ ಆಸಕ್ತಿವಹಿಸಿದ್ದರು.

ಇನ್ನು ವಿಜಯನಗರ ಸಾಮ್ರಾಜ್ಯ ಹಿಂದೂ ಧರ್ಮದ ರಕ್ಷಣೆಗಾಗಿ ಇಸ್ಲಾಂ ಧಾಳಿಗಳಿಂದ ಆದ ಅನಾಹುತವನ್ನು ತಡೆಯುವುದಕ್ಕಾಗಿ ವಿಜಯನಗರ ಸ್ಥಾಪನೆಯಾಯಿತೆಂಬುದು ಜನಜನಿತವಾದ ವಿಷಯ. ಧರ್ಮ ವೈಶಾಲ್ಯತೆಯನ್ನು ಮೆರೆದವರು ವಿಜಯನಗರದ ಅರಸರು. ಇದು ಅವರ ಆಡಳಿತದ ಪರಮಧ್ಯೇಯವೂ ಆಗಿತ್ತು. ಆದರೂ ಅವರ ವೈಯುಕ್ತಿಕ ಧರ್ಮಾಚರಣೆಗಳು ವಿಭಿನ್ನವಾಗಿರುವುದನ್ನು ನಾವು ಅಧ್ಯಯನಗಳಿಂದ ತಿಳಿಯಬಹುದು.

ಜೈನಧರ್ಮ ಅರಸರ ಬೆಂಬಲವನ್ನು ಉಳಿಸಿಕೊಂಡಿದ್ದ ಧರ್ಮವಾಗಿದ್ದು ವಿಜಯನಗರದಲ್ಲಿ ಜೈನ ಧರ್ಮವನ್ನು ಅಧ್ಯಯನ ಮಾಡಲು ಸ್ಮಾರಕಗಳು, ಶಾಸನಗಳು, ಶಿಲ್ಪಗಳು ಮತ್ತು ಸಾಹಿತ್ಯಗಳು ಆಧಾರಗಳಾಗಿವೆ. ವಿಜಯನಗರದಲ್ಲಿ ಸುಮಾರು ಹತ್ತು ಬಸದಿಗಳನ್ನು, ಕೆಲವು ಹಾಳುಬಿದ್ದ ಬಸದಿಗಳನ್ನು ಮತ್ತು ಶಿಲ್ಪಗಳನ್ನು ನೋಡಬಹುದು. ಗಾಣಗಿತ್ತಿಯ ಬಸದಿ, ಪಾರ್ಶ್ವನಾಥ ಬಸದಿ,

ಶಿವದೇವಾಲಯದ ಹತ್ತಿರವಿರುವ ಬಸದಿ, ಹೆಂಡಮಾರೋ ಗುಂಡಿನ ಹತ್ತಿರವಿರುವ ಬಸದಿ, ಸೋಮವಾರದ ಬಾಗಿಲ ಹತ್ತಿರಿರುವ ಬಸದಿ, ಕಡಿರಾಮಪುರ ಹತ್ತಿರವಿರುವ ಬಸದಿ, ಆನೆಗೊಂದಿಯ ಬಸದಿ, ಮತ್ತು ಗವಿರಂಗನಾಥ ದೇವಾಲಯದ ಹತ್ತಿರವಿರುವ ನಿಷಧಿಗಳು ಹಾಗೂ ಶಿಲ್ಪಗಳು ವಿಜಯನಗರದಲ್ಲಿ ಜೈನಧರ್ಮವನ್ನು ಎತ್ತಿ ಹಿಡಿದಿವೆ.

ಸುಮಾರು ಅರವತ್ತು ಶಾಸನಗಳು ಜೈನಧರ್ಮಕ್ಕೆ ಸಂಬಂಧಪಟ್ಟಂತೆ ಇವೆ. ಆದರೆ ರಾಜಧಾನಿಯಲ್ಲಿ ಸುಮಾರು ಹತ್ತು ಶಾಸನಗಳನ್ನು ಕಾಣಬಹುದು. ಇವೆಲ್ಲವುಗಳು ಅರಸರು ಮತ್ತು ಅರಸಿಯರು ಜೈನಧರ್ಮಕ್ಕೆ ಕೊಟ್ಟ ಪ್ರೋತ್ಸಾಹವನ್ನು ಬೆಳವಣಿಗೆಯ ಬಗ್ಗೆ ತಿಳಿಸುತ್ತವೆ.

ಎರಡನೇ ದೇವರಾಯನ ರಾಣಿಯಾದ 'ಭೀಮಾದೇವಿಯು' ಶ್ರವಣಬೆಳಗೊಳದಲ್ಲಿ ಶಾಂತಿನಾಥನ ವಿಗ್ರಹವನ್ನು ಪ್ರತಿಷ್ಠಾಪನೆ ಮಾಡಿದ್ದನ್ನು 'ಶ್ರವಣಬೆಳಗೊಳದ ಮುಂಗಾಯಿ ಶಾಸನವು ತಿಳಿಸುತ್ತದೆ.[236]

ಭಟ್ಕಳದ ರಾಣಿ ವೀರಾಂಬ ಕಲ್ಲು ಬಸದಿಯಲ್ಲಿ 24 ತೀರ್ಥಂಕರರ ಕಂದುಕಂಚಿನ ಮೂರ್ತಿಗಳನ್ನು ಮಾಡಿಸಿ ಪ್ರತಿಷ್ಠೆ ಮಾಡಿಸಿದ್ದಾಳೆ, ಎಂಬುದನ್ನು 1530ರ ಶಿಲಾಶಾಸನ ತಿಳಿಸುತ್ತದೆ.[237] ಅಧಿಕಾರಿ ಅಲ್ಲಪ್ಪ ದಂಡನಾಯಕನ ಭಾಮಿಕಿ–ದಣ್ಣಾಯಕಿ ಹಾಗೂ ಚಾಯವ್ವೆ–ದಣ್ಣಾಯಕಿ ಎಂಬ ಇಬ್ಬರು ಮಡದಿಯರು ತೆರಕಣಾಂಬಿಯಲ್ಲಿ ಗೋಪಿನಾಥ ದೇವರನ್ನು ಪ್ರತಿಷ್ಠಾಪನೆ ಮಾಡಿದ್ದಾರೆ.[238] ಬುಕ್ಕವ್ವೆ ಸಂಗಮವಂಶದ ಪ್ರಮುಖ ರಾಣಿ. ಈಕೆ 2ನೇ ಹರಿಹರನ ರಾಣಿ ಕ್ರಿ.ಶ. 1397ರ ಶಾಸನದಲ್ಲಿ ಈಕೆಯ ಉಲ್ಲೇಖವಿದೆ.[239] ಈಕೆ ಹಲವಾರು ದಾನದತ್ತಿಗಳನ್ನು ನೀಡಿರುವುದು ಹಲವು ಶಾಸನಗಳಿಂದ ಸ್ಪಷ್ಟಪಡುತ್ತದೆ. ಕ್ರಿ.ಶ. 1397ರ ಶಾಸನದಲ್ಲಿ ವೀರ ಹರಿಹರನ ರಾಣಿಯಾದ ಬುಕ್ಕವ್ವೆಯು ತನ್ನ ಗುರು ಭಾಸ್ಕರ ದೇವಯ್ಯನಿಗೆ ಪುಣ್ಯವಾಗಲೆಂದು ಜಡೆಯ ಶಂಕರ ದೇವರ ಮುಂದೆ ಧೀಪಮಾಲೆ ಕಂಬವನ್ನು ಮಾಡಿಸಿದ್ದನ್ನು ಉಲ್ಲೇಖಿಸುತ್ತದೆ.[240] ಇದಲ್ಲದೆ ಬುಕ್ಕವ್ವೆಯು ದಂಡನಾಯಕನಾದ

---

236 ಎ.ಕ ii (ಪರಿಷ್ಕೃತ) ಶ್ರವಬೆಳಗೊಳ, ಶಾ.ಸಂ 467.ಕ್ರಿ.ಶ. 1410

237 ಆರಿಸೌ ಎಂ.ಇ., 1965, ಸಂ–366.

238 ಎ.ಕ. IV. ಚಾಮರಾಜನಗರ, ಶಾ.ಸಂ. 93, ಪು–23.

239 ಸೂರ್ಯನಾರಾಯಣ ರಾವ್, (ಅನು), ಬಾಲಸುಬ್ರಹ್ಮಣ್ಯ, **ಮರೆಯಲಾಗದ ಮಹಾ ಸಾಮ್ರಾಜ್ಯ ವಿಜಯನಗರ**, ಪು–260, ಹಂಪಿ, ಕವಿ.ವಿ.2000.

240 ಅದೇ,

ಈರುಗಪ್ಪನು 1397ರಲ್ಲಿ ರಾಜಧಾನಿಯಲ್ಲಿ ಕಟ್ಟಿಸಿದ ಬಸದಿಗೆ ಉದಾರದಾನ ಕೊಟ್ಟಿದ್ದಾಗಿ ತಿಳಿಯುತ್ತದೆ.[241] ಸಂಗಮ ವಂಶದ 1ನೇ ದೇವರಾಯನ ರಾಣಿ ಭಿಮಾದೇವಿ ಶ್ರವಣಬೆಳಗೊಳದ ಪಂಡಿತಾಚಾರ್ಯರ ಶಿಷ್ಯೆಯಾಗಿದ್ದಳು. ಮುಂಗಾಯಿ ಬಸ್ತಿಯಲ್ಲಿ ಶಾಂತಿ ತೀರ್ಥಂಕರ ಬಿಂಬದ ಮೇಲ್ ಶ್ರೀಮತ್ಪಚಿಂತಾಚಾರ್ಯಗುಡಿ ದೇವರಾಯ ಮಹಾರಾಯರ ರಾಣಿ ಭೀಮಾದೇವಿ ಮಾಡಿಸಿದ ಶಾಸ್ತ್ರಿನಾಥ ಸ್ವಾಮಿಶ್ರೀ...... ಎಂಬ ಶಾಸನವಿದ್ದು ಇದು ಭೀಮಾದೇವಿ ಶ್ರವಣಬೆಳಗೊಳಕ್ಕೆ ತೀರ್ಥದರ್ಶನಕ್ಕಾಗಿ ಬಂದದ್ದು ಸ್ಪಷ್ಟವಾಗುತ್ತವೆ. ಈ ಬಸದಿಗೆ 'ತ್ರಿಭುವನ ಚೂಡಾಮಣಿ ಬಸ್ತಿಯೆಂದು' ಹೆಸರೂ ಸಹ ಇದೆ. ರಾಜ ದೇವರಾಯ ಅನೇಕ ಜೈನಗುರುಗಳಿಗೆ ಉದಾರವಾಗಿ ದಾನಕೊಟ್ಟಿದ್ದ ಉಲ್ಲೇಖಗಳಿವೆ.[242]

ವಿಜಯನಗರ ಕಾಲದಲ್ಲಿ ಜೈನಧರ್ಮದ ಜನಸಂಖ್ಯೆ ಕ್ಷೀಣಿಸಿತು. ಧರ್ಮದ ಚೌಕಟ್ಟಿಗೆ ಒಳಪಟ್ಟ ಜೈನಧರ್ಮೀಯರು ಜೈನಧರ್ಮವನ್ನು ಹೆಚ್ಚು ಜನಪ್ರಿಯಗೊಳಿಸಿದರು. ಜನಪ್ರಿಯಗೊಳಿಸಲು ಪ್ರಯತ್ನಿಸಿದರು. ಜೈನ ಧರ್ಮಕ್ಕೂ ರಾಜರುಗಳು ಉದಾರವಾದ ದಾನ–ದತ್ತಿಗಳನ್ನು ನೀಡಿದರು. ವಿಜಯನಗರದ ಅರಸರ ಸಾಮಂತರು ಜೈನಧರ್ಮವನ್ನು ಪ್ರೋತ್ಸಾಹಿಸಿದರು. ಡಾ. ಶ್ರೀಕಂಠಯ್ಯನವರು ಅಭಿಪ್ರಾಯ ಪಡುವಂತೆ ನಾಲ್ಕು ವರ್ಣಗಳ ಒಂದು ಹಳೆಯ ಚೌಕಟ್ಟಿನ ಹೊರಗಿದ್ದರೂ ವಿಜಯನಗರದ ಇತಿಹಾಸದಲ್ಲಿ ಧರ್ಮ ಮತ್ತು ವ್ಯಾಪಾರಿ ಕ್ಷೇತ್ರದಲ್ಲಿ ಗಣನೀಯ ಪಾತ್ರವಹಿಸಿದ ವರ್ಗವೆಂದರೆ ಜೈನರದು, ವಿಜಯನಗರದ ಕಾಲದಲ್ಲಿ ಕರಾವಳಿ ಭಾಗದಲ್ಲಿ 180 ಜೈನ ಧರ್ಮದ ಬಸದಿಗಳು ನಿರ್ಮಾಣಗೊಂಡಿವೆ.[243]

ಕರ್ನಾಟಕದಲ್ಲಿ ಪ್ರಾಚೀನ ಕಾಲದಿಂದಲೂ ಜಿನಮಂದಿರಗಳನ್ನು 'ಅರ್ಹಂತಾಲಯ' 'ಜಿನವೇಶ್ಮ', 'ಜಿನಸದ್ಮ' 'ಜಿನಭವನ' 'ಜಿನಾಲಯ' 'ಚೈತ್ಯ' 'ಚೈತ್ಯಾಲಯ' 'ಚೇದಿಯ' ಮೊದಲಾದ ಹೆಸರುಗಳಿಂದ ಕರೆಯಲಾಗುತ್ತಿತ್ತು. ಸು. ಕ್ರಿ.ಶ. ನಾಲ್ಕನೇ ಶತಮಾನದ ಹೊತ್ತಿಗೆ ವೈಧಿಕ ಮತಗಳ ಆಚರಣೆಯಲ್ಲಿ ಮತ ಭೇದಗಳುಂಟಾಗಿ ದೇವಾಲಯಗಳ ನಿರ್ಮಾಣ ಹೆಚ್ಚಾಗಿರುವುದನ್ನು ಗುರ್ತಿಸಬಹುದು. ಜೈನಧರ್ಮವು ಈ ವೇಳೆಗಾಗಲೇ ಸ್ತೂಪಗಳ ರಚನೆಯನ್ನು ಬಿಟ್ಟು ಚೈತ್ಯದ ಹಂತವನ್ನು ದಾಟಿ, ವೈಧಿಕ ಪರಂಪರೆಯ ದೇವಾಲಯ ವಾಸ್ತುವಿನ ವಿನ್ಯಾಸವನ್ನು

---

241 ದೇವರ ಕೊಂಡಾರೆಡ್ಡಿ, **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ,** 3, ಪುಟ–49, ಹಂಪಿ ಶಾಸನಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ.2000.

242 ಪ್ರೊ. ವಸಂತ ಕುಮಾರಿ, **ಇತಿಹಾಸದ ಹಾದಿಯಲ್ಲಿ,** ಪು–30–31 ವಸು ಪ್ರಕಾಶನ, ಮೈಸೂರು. 2003.

243 ಶೆಟ್ಟಿ ಎಸ್.. **ಜೈನ ಬಸದಿಗಳು,** ಪು–29, ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಹೊಂದಿಸಿಕೊಂಡು ಬಂದಿತು. ಕರ್ನಾಟಕದಲ್ಲಿ 'ಬಸದಿ' ಪದ ಪ್ರಯೋಗವು ಮೊದಲ ಬಾರಿಗೆ ಕ್ರಿ.ಶ. 8ನೇ ಶತಮಾನದ ಶ್ರವಣಬೆಳಗೊಳದ 'ಸಿವಮಾರನ ಬಸದಿ' ಶಾಸನದಲ್ಲಿ[244] ಉಲ್ಲೇಖವಾಗಿದೆ. ನಂತರದಲ್ಲಿ ಸಂಪಿಗೆ ಪುರದ ಶಾಸನದಲ್ಲಿ[245] ಹೆಬ್ಬಲಗುಪ್ಪೆ ಶಾಸನದಲ್ಲಿ[246] ಬಸದಿ ಪದಗಳ ಉಲ್ಲೇಖಗಳು ಸಿಗುತ್ತವೆ. ಇದರಿಂದ ಕರ್ನಾಟಕದಲ್ಲಿ ಸ್ತೂಪದಿಂದ ಆರಂಭಗೊಂಡ ಜಿನ ಮಂದಿರವು ಜಿನಾಲಯವಾಗಿ, ಭಟ್ಟಾರಕಾಯತನವನ್ನು ಹೊಂದಿ ಬಸದಿಯಾಗಿ ರೂಪುಗೊಂಡದ್ದನ್ನು ತಿಳಿಯಬಹುದಾಗಿದೆ.

ಹೀಗೆ ರೂಪುಗೊಂಡಂತಹ ಬಸದಿಗಳನ್ನು ಉನ್ನತವರ್ಗದವರು ಮತ್ತು ಪ್ರಭುವರ್ಗದವರು ನಿರ್ಮಿಸುತ್ತಿದ್ದರು. ದಾನ–ಧರ್ಮಗಳನ್ನು ನೀಡುವುದರಲ್ಲಿ ಸ್ತ್ರೀ–ಸಾಮಾನ್ಯ ವರ್ಗದವರುಗಳಿಗಿಂತ ಉನ್ನತ ವರ್ಗದವರು ಕೊಂಚ ಕಡಿಮೆಯೇ ಎಂದು ಹೇಳಬಹುದು.

ಕದಂಬ ಮನೆತನದ ಜಯಕೇಶಿಯ ರಾಣಿಯಾದ ಮೈಳಲಾದೇವಿ ಕಿರು ಸಂಪಗಾಡಿನಲ್ಲಿ ಗಂಗಿಸೆಟ್ಟಿಯರು ಮಾಡಿಸಿದಂತಹ ಬಸದಿಗೆ ರಾಣಿ ಮೈಳಾಲಾದೇವಿ ದಾನವನ್ನು ನೀಡಿದ್ದಾಳೆ.[247] ಸಾಮಂತ ಶಾಂತಿವರ್ಮ ಅರಸನ ತಾಯಿಯಾದ ನೀಚಕಬ್ಬರಸಿ ಸಲುಗಂಧವರ್ತಿಯಲ್ಲಿ ತನ್ನ ಮಗ ಮಾಡಿಸಿದಂತಹ ಬಸದಿಗೆ 150 ಮತ್ತರು ಭೂಮಿಯನ್ನು ನೀಡಿದ್ದಾಳೆ.[248] ಅಧಿಕಾರ ವರ್ಗದಲ್ಲಿ ಹೆಸರು ಮಾಡಿದ ರಾಣಿಯರು ನೇರವಾಗಿ ದಾನಕಾರ್ಯಗಳಲ್ಲಿ ತೊಡಗಿರುವುದರ ಜೊತೆಗೆ ಪರೋಕ್ಷವಾಗಿ ದಾನ–ಧರ್ಮ ಕಾರ್ಯಗಳಲ್ಲಿ ತೊಡಗಿರುವುದನ್ನು ಕಾಣಬಹುದು.

ಉದಾಹರಣೆಗೆ ಪೊನ್ನವಾಡದಲ್ಲಿ ಶಾಂತಿನಾಥ ದೇವರಿಗೆ ತ್ರಿಭುವನ ತಿಲಕ ಚೈತ್ಯಾಲಯ ರಚಿಸಿದ ಚಾಂಕಿರಾಜನು ತ್ರೈಲೋಕ್ಯಮಲ್ಲ ಮತ್ತು ಕೇತಲಾ ದೇವಿಯರಲ್ಲಿ ಬಿನ್ನವಿಸಿಕೊಂಡು ದೇವರಿಗೆ ಮೂವತ್ತು ಗೇಣಿಗಳೆಯಲ್ಲಿ ಮೂವತ್ತೈದು ಮತ್ತರು ಭೂಮಿ ಒಂದು ಮತ್ತರು ತೋಟ, ನಿವೇಶನಕ್ಕೆ ಭೂಮಿಯನ್ನು ನೀಡಿದ ವಿಷಯವನ್ನು ಇಲ್ಲಿ ವಿವರಿಸಬಹುದಾಗಿದೆ.

---

[244] ಎ.ಕೆ II, ಶ್ರವಣಬೆಳಗೊಳ. 140.

[245] ಎ.ಕ. III, ಗುಂಡ್ಲುಪೇಟೆ 69.

[246] ಎ.ಕ. III, ಹೆಗ್ಗಡ ದೇವನ ಕೋಟೆ 63.

[247] ಕೆ.ಆಯ್ v. 33 ಗೊಲ್ಲಹಳ್ಳಿ (ತಾ) ಖಾನಾಪುರ (ಕ್ರಿ.ಶ. 1176)

[248] ಎಸ್.ಆಯ್.ಆಯ್, XX18 ಪರಸಗಡ (ತಾ) ಸೌಂದತ್ತಿ (ಕ್ರಿ.ಶ. 980)

ನರೇಗಲ್ಲು ಶಾಸನ ಶಕ 873, ಸಾಧಾರಣ, ಪುಷ್ಯಶುದ್ಧ 10, ಆದಿತ್ಯವಾರ, ಭೂತಾಯನು ರಾಷ್ಟ್ರಕೂಟ ಮೂರನೆಯ ಕೃಷ್ಣನು ಮಾಂಡಳೀಕನಾಗಿ ಗಂಗವಾಡಿ–96000 ಪ್ರಾಂತ್ಯವನ್ನಾಳುತ್ತಿದ್ದಾಗ ಅವನ 'ಮನೋ'ನೇಯ ವಲ್ಲಭೆ'ಯಾದ ಪದ್ದಬ್ಬರಸಿಯು ತಾನು ಕಟ್ಟಿಸಿದ ಜಿನಾಲಯಕ್ಕೆ ಭೂದಾನ ಮಾಡಿದಳು. ಅದೇ ಬಸದಿಗೆ ಮಾರಸಿಂಘಯ್ಯನು ಮಹೇಂದ್ರ ಪಂಡಿತನ ಅಂತೇವಾಸಿಯಾದ ವೀರಣಂದಿಪಂಡಿತನ ಶಿಷ್ಯ, ಚಂದ್ರನಂದಿ ಪಂಡಿತರ ಕಾಲಂಕರ್ಚ್ಚಿ ಭೂಮಿಯನ್ನು ಕೊಟ್ಟರು.

ಚಾಲುಕ್ಯ ವಿಜಯಾದಿತ್ಯನ ಸಹೋದರಿ–ಕುಂಕುಮ ಮಹಾದೇವಿ ಪುಲಿಗೆರೆಯಲ್ಲಿ ಆನೆಸಜ್ಜೆ ಬಸದಿಯನ್ನು ಮಾಡಿಸಿದ್ದು ಇದಕ್ಕೆ ಭುವನೈಕ್ಯ ಮಲ್ಲನ ರಾಣಿಯಾದ ಕಂಚಲಾ ಮಹಾದೇವಿ ತನ್ನ ಸಮಸ್ತ ಪ್ರಧಾನರುಗಳೊಂದಿಗೆ ತಾಮ್ರಶಾಸನ ಮರ್ಯಾದೆಯಿಂದಾಳ್ವೆ, ಗುಡಿಗೆರೆಯ ಕಮ್ಮತವಳಗಾಗಿಯಿರ ವೊಲನುಳ್ಳ ನಿತುಮನಿನ್ನಲಂ ಮೇರೆಯಮ್ಮ ಧರ್ಮವಾಗಿ ಪುನರ್ದತ್ತಿ ಮಾಡಿ ನಂದಿ ಪಂಡಿತ ದೇವರಿಗೆ ಹಸ್ತೋದಕ ಮಾಡಿ ಬಿಟ್ಟುಕೊಟ್ಟಳಲ್ಲದೇ ಆ ದೇವಭೋಗ ಗುಡಿಗೆರೆಯನ್ನು ರುದ್ರಭಟ್ಟೋಪಧ್ಯಾಯರು ಆಳುತ್ತಿದ್ದರಿಂದ ಮತ್ತು ಗ್ರಾಮಮಂನಿಮ್ಮೊಳ್ಕೆಯಿದ್ದ ಕಾರಣದಿಂ ನೀವುಂ ಹಸ್ತೋದಕಂಗೆಯ್ವುದೆನೆ ಬಾಸ್ಕರ ಭಟ್ಟದಂಡ ನಾಯಕಂತದಸ್ತ ಎಂದು ಶ್ರೀ ನಂದಿ ಪಂಡಿತರಿಗೆ ಹಸ್ತೋದಕ ಮಾಡಿಕೊಟ್ಟಳೆಂದು ಗುಪಿಗೆರೆಯ ಶಾಸನ ವರ್ಣಿಸಿದೆ.[249]

ಚಾಲುಕ್ಯರಾಜ ತ್ರಿಭುವನ ಮಲ್ಲದೇವನ ರಾಣಿ ಜಾಕಲಾದೇವಿ[250] ತನ್ನಾಳ್ವಿಕೆಯ ಊರಾದ ಇಂಗುಣಿಗೆಯಲ್ಲಿ ಜಿನಗೃಹಗಳನ್ನು ಮಾಡಿಸುವುದಾದರೆ ಹೀಗೆ ಮಾಡಿಸಬೇಕು ಎನ್ನುವಂತೆ, ಪರಿಶೋಭೆಗೆ ತಾಯ್ಮನೆಯಾಗೆ ಭಕ್ತಿಯಿಂದ ಮಾಡಿಸುತ್ತಾಳೆ. ಚಟ್ಟಲಾದೇವಿ[251] ಈಗಿನ ಹುಂಚ, ಆಗಿನ ಪೊಂಬುಚ್ಚದಲ್ಲಿ ಪಂಚಕೂಟ ಬಸದಿಯನ್ನು ಮಾಡಿಸಲು ಪ್ರಯತ್ನಿಸಿದ ಬಗ್ಗೆ ಶಾಸನ ವರ್ಣಿಸಿದೆ. ಈಕೆ ನಿರ್ಮಿಸಲು ಹೊರಟ ಬಸದಿಗೆ ಶ್ರೇಯಾಂಕ ಪಂಡಿತರು ಶ್ರೀವಿಜಯ ದೇವರ ನಾಮಾಚಾರಣೆ ಮಾಡಿದ ಉಲ್ಲೇಖವನ್ನು ಸಹ ತಿಳಿಸುತ್ತವೆ.[252] ಪಟ್ಟಮಹಾದೇವ – ಮಾಳಲಾದೇವಿಯು **'ಕುಪ್ಪಟೂರು'** ಎಂಬ ಅಗ್ರಹಾರದಲ್ಲಿ ಪಾರ್ಶ್ವದೇವ ಚೈತ್ಯಾಲಯವನ್ನು ಮಾಡಿಸಿದ ನಂತರ ಆ

---

[249] ಎಸ್.ಆಯ್, ಆಯ್, xx 46 ಗುಡಿಗೆರೆ (ತಾ) ಶಿರಹಟ್ಟಿ (ಕ್ರಿ.ಶ. 1072)

[250] ಡಾ.ದೇಸಾಯಿ ಪಾಂಡುರಂಗರಾಯರು, **ಕನ್ನಡ ನಾಡಿನ ಮಿಂಚಿದ ಮಹಿಳೆಯರು** ಪು–115, ಇತಿಹಾಸ ಸಂಶೋಧಕ ಮಂಡಲ, ಧಾರವಾಡ 2007–08.

[251] ಎ.ಕ. VIII, ನಗರ, 30 (ಕ್ರಿ.ಶ. 1077)

[252] ಎ.ಕ. VIII, ನಗರ, 36 (ಕ್ರಿ.ಶ. 1077)

ಊರಿನ ಮಹಾಜನಗಳನ್ನು ಪೂಜಿಸಿ ಅವರ ಇಷ್ಟದ ಪ್ರಕಾರ ಮತ್ತು ಬಸದಿಗೆ "ಬ್ರಹ್ಮಜಿನಾಲಯ" ಎಂದು ಹೆಸರಿಡುತ್ತಾಳೆ. ಆ ಸಮಯದಲ್ಲಿ ಅವಳು ಅಲ್ಲಿಯ 18 ಸ್ಥಾನದಾಚಾರ್ಯರುಗಳನ್ನು ಬನವಾಸಿಯ ಮಧುಕೇಶ್ವರಚಾರ್ಯರನ್ನು ಬರಮಾಡಿಕೊಂಡು ಅವರಿಗೆ ಸಕಲ ಗೌರವವನ್ನು ನೀಡುತ್ತಾಳೆ.[253] ರಾಜಧಾನಿ ವಿಕ್ರಮಪುರದಲ್ಲಿ ಬ್ರಹ್ಮಪುರಿಯಿದ್ದು ಅಲ್ಲಿಯ ನಂದಿಯಣ್ಣ ಷಡಂಗಿ ಭಟ್ಟೋಪಾಧ್ಯಾಯ ಮುಂತಾದ ನಲವತ್ತೆರಡು ಮಹಾಜನಗಳಿಗೆ ಅಕ್ಕಾದೇವಿ ತೋಟ, ಹೊಲಗಳನ್ನು ದಾನ ಮಾಡಿದ ವಿಷಯವನ್ನು ಶಾಸನ ತಿಳಿಸಿದೆ.[254]

ಹೊಯ್ಸಳರ ವಿಷ್ಣುವರ್ಧನನ ಎರಡನೇ ರಾಣಿಯಾದ ಬಮ್ಮಲಾದೇವಿಯು 'ಬೆನಚಟಗೆಟಿ' ಎಂಬ ಊರಿಗೆ 'ಬ್ರಹ್ಮಪುರ'ವೆಂದು ಹೆಸರಿಡಲಾಗಿ ಆ ಊರಿನಲ್ಲಿಯೇ ತಾನು ನಿರ್ಮಿಸಿದಂತಹ ಬಮ್ಮಲೇಶ್ವರದೇವರಿಗೂ ಮತ್ತು ಬ್ರಾಹ್ಮಣರಿಗೂ ಆ ಊರಿನ ಆದಾಯವನ್ನು ಸಮಭಾಗವಾಗಿ ಹಂಚಿ ಸರ್ವಭಾಧಾಪರಿಹಾರ ಪೂರ್ವಕವಾಗಿ ದಾನ ಮಾಡಿದ್ದಾಳೆ.[255] ಇದರಿಂದ ರಾಣಿಯರು ತಾವು ನಿರ್ಮಿಸುತ್ತಿದ್ದಂತಹ ಬ್ರಹ್ಮಪುರಿಗಳಾಗಿರಬಹುದು, ಬಸದಿಗಳಾಗಿರಬಹುದು ಅಥವಾ ದೇವಸ್ಥಾನಗಳಾಗಿರಬಹುದು, ಅವುಗಳಿಗೆ ಹೆಸರುಗಳನ್ನು ಇಡುತ್ತಿದ್ದರೆಂದು ತಿಳಿಯಬಹುದು. ರಾಣಿ ಮೈಳಾಲಾದೇವಿ ಚಂದ್ರಗ್ರಹಣ ನಿಮಿತ್ತವಾಗಿ ಲಕ್ಷಹೋಮವನ್ನು ಮಾಡಿಸಿ ಆ ಸಂದರ್ಭದಲ್ಲಿ ಆ ಊರಿನ ಚಂದ್ರಯ ಭಟ್ಟ ಎಂಬ ಉಪಧ್ಯಾಯನಿಗೆ ಭೂಮಿಯನ್ನು ದಾನವಾಗಿ ನೀಡಿದ ವಿಷಯವನ್ನು ಶಾಸನ ತಿಳಿಸಿದೆ.[256]

ಜೈನಧರ್ಮದ ನಿಷ್ಠೆಗೆ ಸಾಕ್ಷಿಯೆನಿಸಿರುವ ಶಾಂತಲೆ ವಿಷ್ಣುರ್ವಧನನ ಪಟ್ಟಮಹಿಷಿ. ಇವಳನ್ನು ದಾನ ಚಿಂತಾಮಣಿ ಅತ್ತಿಮಬ್ಬೆಗೆ ಹೋಲಿಸಿರುವುದನ್ನು ಶಾಸನಗಳಿಮದ ಅರಿಯಬಹುದು. ಶ್ರವಣಬೆಳಗೊಳದ ಶಾಸನವೊಂದು.[257]

ಶಾಂತಲದೇವಿಯ ಗುಣಮಂ
ಶಾಂತಲ ದೇವಿಯ ಸಮಸ್ತ ದಾನೋನ್ನತಿಯಂ

---

[253] ಎ.ಕ. VIII, ಸೊರಬ, 262 (ಕ್ರಿ.ಶ. 1077)
[254] ಬಿ.ಕೆ.ಐ I – I – 88 (ಕ್ರಿ.ಶ. 1053)
[255] ಎ.ಕ. XII. Gb, 13 (ಕ್ರಿ.ಶ. 1140)
[256] ಬಿ.ಕೆ. ಆಯ್ I-I – 83, 104
[257] ಎ.ಕ II ಶ್ರವಣ ಬೆಳಗೊಳ 162 (ಕ್ರಿ.ಶ. 1123)

ಶಾಂತಲ ದೇವಿಯ ಶೀಳೆಮ

ಚಿಂತ್ಯ ಭುವನೈಕ್ಯ ದಾನ ಚಿಂತಾಮಣಿ ಯಂ।

ಎಂದು ಕೊಂಡಾಡಿದೆ. ಅತ್ತಿಮಬ್ಬೆಯ ಕಾರ್ಯಕ್ಷೇತ್ರ ಧರ್ಮವಾದರೆ ಶಾಂಲೆಯ ಕ್ಷೇತ್ರ ಮುಖ್ಯವಾಗಿ ಕಲೆಯಾಗಿತ್ತು. "ಶಾಂತಲೆ ಕರ್ನಾಟಕದ ಸಂಸ್ಕೃತಿಯು ಹೊಮ್ಮಿಸಿರುವ ಹೂವು" ಎಂದು ಸಿ.ಬಿ. ಸೀತಾರಾಮ್ ಹೇಳಿರುವುದು ಸಾಧುವಾಗಿದೆ.[258] ಶ್ರವಣಬೆಳಗೊಳದ ಬೆಳ್ಗೊಳ ತೀರ್ಥದಲ್ಲಿ ಶಾಂತಲೆ ಸವತಿಗಂಧವಾರಣೆ' ಬಸದಿಯನ್ನು ಮಾಡಿಸಿ ದೇವರ ಪೂಜೆಗೆ ಬೇಕಾದ ದಾನವನ್ನು ಮಾಡಿದಳು ಎಂಬುದನ್ನು ಶಾಸನ ಹೀಗೆ ವರ್ಣಿಸಿದೆ.

"...... ಹಾದೇವಿ ಶಾನ್ತಲದೇವಿಯರ್ ಶ್ರೀ ಬೆಳ್ಗೊಳ ತೀರ್ಥದೋಳ್ಸವ

ತಿ ಗಂಧವರಾಣ

ಜಿನಾಲಯಮಂ ಮಢಿಸಿಯಿದಕ್ಕೆ ದೇವತಾ ಪೂಜೆಗಂರಿಷಿ ಸಮುದಾ"[259]

ಹೊಯ್ಸಳರ ಸಮಾಜದಲ್ಲಿ ರಾಣಿಯರನ್ನೊಳಗೊಂಡಂತೆ ಮೇಲಾದ ಸ್ಥಾನವನ್ನು ಪಡೆದಿದ್ದರು. ಎಂಬುದನ್ನು ಈ ಮೇಲಿನ ವಿವರಣೆಗಳು ಪುಷ್ಠಿ ನೀಡುತ್ತವೆ. ಅವರು ಧಾರ್ಮಿಕ ಸಾಮಾಜಿಕ ಚಟುವಟಿಕೆಗಳಲ್ಲಿ ಪುರುಷನ ಹೆಗಲಿಗೆ ಹೆಗಲು ಹಚ್ಚಿ ಭಾಗವಹಿಸುತ್ತಿದ್ದರು. ಧರ್ಮ ಅವರ ಕೌಟುಂಬಿಕ ಜೀವನಕ್ಕೆ ಬಂಧನಕಾರಿಯಾಗಿರಲಿಲ್ಲ. ಹೆಂಡತಿ ಒಂದು ಧರ್ಮ, ಗಂಡ ಒಂದು ಧರ್ಮವಾಗಿರುವ ಉದಾಹರಣೆಗಳು ಹಲವು ಇಲ್ಲಿ ದೊರೆಯುತ್ತವೆ. ರಾಜಕಾರಣ ರಂಗಕ್ಕೆ ಸಂಬಂಧಿಸಿದಂತೆ "ಯೋಗಂದರಾಯಣ, ಬೃಹಸ್ಪತಿ" ಎಂದೂ ಬಣ್ಣಿಸಲಾಗಿರುವ ಹೊಯ್ಸಳ ರಾಣಿಯರು ಪುರುಷರ ಹಾಗೆ ಜಿನಾಲಯಗಳನ್ನು ಕಟ್ಟಿಸಿರುವುದಲ್ಲದೆ ಧರ್ಮಶಾಲೆ ದಾನಶಾಲೆ, ಅರವಟ್ಟಿಗೆ, ಉಪವನ, ಮೊದಲಾದವುಗಳನ್ನು ಸ್ಥಾಪಿಸಿದ ಉಲ್ಲೇಖಗಳಿವೆ.

ರಾಣಿಯರ ಸಾಲಿಗೆ ಸೇರದ, ಸಾಮಾನ್ಯವರ್ಗಕ್ಕೂ ಸೇರದ ತನ್ನದೇ ಆದ ಛಾಪನ್ನು ಇತಿಹಾಸದ ಪುಟಗಳಲ್ಲಿ ಮೂಡಿಸಿರುವ "ಶಾಸ್ತ್ರದಾನ" ಉನ್ನತ ವ್ಯಕ್ತಿತ್ವದ ಒಂದು ಮುಖ ಧರ್ಮಶ್ರದ್ಧೆಯ ಮತ್ತೊಂದು ಮುಖವನ್ನು ಹೊಂದಿರುವ 'ದಾನಚಿಂತಾಮಣಿ ಅತ್ತಿಮಬ್ಬೆಯನ್ನು ಇಲ್ಲಿ

---

[258] C.B. Seetharam: **queen Shanthala Devi.,** Quarturly Journal of themithic society, Vol-38, P.143

[259] ಎ.ಕ. II ಶ್ರವಣ ಬೆಳಗೊಳ–162, (1123)

ವಿವೇಚಿಸಿದರೆ ತಪ್ಪಾಗಲಾರದು. ಅತ್ತಿಮಬ್ಬೆ ತಾನು ಲೊಕ್ಕಿಗುಂಡಿಯಲ್ಲಿ ಕಟ್ಟಿಸಿದ ಬಸದಿಯ ಪೂಜಾನಿಮಿತ್ತವಾಗಿ ಆ ಅಗ್ರಹಾರದ ಮಹಾಜನರನ್ನು ಬೇಡಿ ಭೂಮಿಯನ್ನು ಪಡೆದು ದಾನ ಮಾಡುತ್ತಾಳೆ. ಅದರ ರಮ್ಯತೆಯನ್ನು ಲಿಪಿಕಾರ ಈ ರೀತಿ ವರ್ಣಿಸಿದ್ದಾನೆ.

"ಪರಮ ಶ್ರೀ ಜಿನನಾಥಗೇವಿಳ ಸಚ್ಚಂದೋಹ ಸಂದೋಹಭಾ
ಸುರಜೈನ ಪ್ರತಿ ಮಾವಿಚಿತ್ರಮಣಿ ಘಟಾಮಾಳಿಕಾ ಸಂಖ್ಯೆ ಸಾ
ಯಿರದೈನೂರಿವು ಬೇರೆ-ಬೇರೆ ನಿಪಿನಂವಿ ರ್ವೋಪಣಂಗೆಯ್ದು ಭು
ಭರದೊಳ್ ಧರ್ಮಮನತ್ತಿಮಬ್ಬೆಯ ವೊಲಿನ್ನಾರುಜ್ಜಳ್ ಮೂಡಿದರ್"[260]

ಇದು ಲಕ್ಕುಂಡಿ ಶಾಸನ ಅಷ್ಟೇ ಅಲ್ಲದೇ ವಿಚಿತ್ರ ಮಣಿ ಘಂಟಾ ಮಾಳಿಕಾ, ಗಳಿಂದ ಅಲಂಕರಿಸಿದ ಮಣಿಕನಕ ಖಚಿತ (1500) ಒಂದು ಸಾವಿರದ ಐನೂರು. ಜಿನ ಪ್ರತಿಮೆಗಳನ್ನು ದಾನ ಮಾಡಿದಳೆಂದು ಹೇಳುದುದು ಇವಳ ದಾನ ಪ್ರವೃತ್ತಿಯ ಮಟ್ಟವನ್ನು ತಿಳಿಸುತ್ತದೆ. ಜೊತೆಗೆ 1500 ಬಸದಿಗಳ ನಿರ್ಮಾಣಕಾರ್ಯ ಅವಳ ಧರ್ಮ ಶ್ರೀಮಂತಿಕೆಯನ್ನು ತೋರ್ಪಡಿಸುತ್ತದೆ. ಲಕ್ಕುಂಡಿಯೊಂದಿಗೆ ಅತ್ತಿಮಬ್ಬೆಯ ಹೆಸರು ಚಿರಸ್ಥಾಯಿಯಾಗಿ ನೆಲೆ ನಿಲ್ಲುವಂತಹದ್ದು. ಅತ್ತಿಮಬ್ಬೆ ಜೈನ ಸ್ತ್ರೀಯರಲ್ಲಿ ಅಷ್ಟೇ ಏಕೆ ಕನ್ನಡ ನಾಡಿನ ಸ್ತ್ರಿ ಸಮೂಹದಲ್ಲಿಯ ಅಪ್ರತಿಮ ಹೆಸರು. ಕಲ್ಯಾಣ ಮತ್ತು ಲಕ್ಕುಂಡಿಯ ಶಾಸನಗಳು, ಅಜಿತ ಪುರಾಣ, ಸಮಯ ಪರೀಕ್ಷೆಗಳಲ್ಲಿ ಅತ್ತಿಮಬ್ಬೆಯ ಕೀರ್ತಿ ನಿಂತಿದೆ. ಅತ್ತಿಮಬ್ಬೆ ಬದುಕಿನಲ್ಲಿ ಸಾಧಿಸಿಕೊಂಡ ಉನ್ನತ ವ್ಯಕ್ತಿತ್ವ ಮತ್ತು ಅವಳ ಧರ್ಮ ಶ್ರದ್ಧೆಗಳು ಆಕೆಯ ಎರಡು ಮುಖಗಳು ತನ್ನ ಧರ್ಮ ಶ್ರೀಮಂತಿಕೆಯಿಂದ ಧರ್ಮಮಾರ್ಗದಲ್ಲಿ ಮುನ್ನಡೆದ ಅತ್ತಿಮಬ್ಬೆಯನ್ನು ಲಕ್ಕುಂಡಿ ಶಾಸನ "ಚೈರಸ್ತನ ಚೇಳಿನಿ" "ಗುಣದಂಕಕಾರ್ತಿ" "ಕಟಕ ಪವಿತ್ರೆ" "ದಾನ ಚಿಂತಾಮಣಿ" "ಕರಿವರ ಕಾಮಧೇನು" "ಜಿನಧರ್ಮ ಪತಾಕೆ" ಎಂಬ ವಿಶೇಷಣಗಳಿಮದ ಹೂಮಳೆಗರೆದಿವೆ.[261]

---

[260] ಬಿ.ಕೆ. ಆಯ್ ಸಂ.1 ಭಾಗ-1 ಸಂ-52, ಪು-39-42 ಮತ್ತು ಎ.ಎಂ. ಅಣ್ಣಿಗೇರಿ ಡಾ.ಆರ್. ಶೇಷಶಾಸ್ತ್ರಿ, **ಶಾಸನ ಸಂಗ್ರಹ,** ಪು-26-32.

[261] ಬಿ.ಕೆ. ಆರ್, ಸಂ.1, ಭಾಗ-1 ಸಂ.52, ಪು-39-42, ಲಕ್ಕುಂಡಿ(ತಾ) ಗದಗ (1071)

ವಿಜಯ ನಗರ ಕಾಲದಲ್ಲಿ ಅರಸಿಯರು ಜೈನ ಬಸದಿಗಳ ಸ್ಥಾಪನೆಗೆ ನೆರವು ನೀಡಿದ್ದಾರೆ. ಈಗಾಗಲೇ ತಿಳಿಸಿದಂತೆ ಸುಮಾರು ಹತ್ತು ಜೈನ ಬಸದಿಗಳು ಕೆಲವು ಹಾಳುಬಿದ್ದ ಬಸದಿಗಳನ್ನು ವಿಜಯನಗರದ ಪರಿಸರದಲ್ಲಿ ಕಾಣಬಹುದು.[262]

ಅವುಗಳಲ್ಲಿ ಪ್ರಮುಖ ಬಸದಿಗಳು ಈ ಕೆಳಗಿನಂತೆ ಇವೆ.

1) ಕಾರ್ಕಳದ ಆನೆಕೆರೆ ಬಸದಿ ಕ್ರಿ.ಶ. 1545ರಲ್ಲಿ ನಿರ್ಮಾಣ
2) ಮೂಡಬಿದಿರಿಯ ತ್ರಿಭುವನ ಚೂಡಾಮಣಿ ಬಸದಿ ಕ್ರಿ.ಶ. 1430ರಲ್ಲಿನದು.
3) ಮುಂಜೇಶ್ವರದ ಚತುರ್ಮುಖಿ ಬಸದಿ.
4) ವೇಣೂರಿನ ಶಾಂತಿನಾಥ ಬಸದಿ ಕ್ರಿ.ಶ. 1537ರಲ್ಲಿನದು
5) ಮಲ್ಕಿಯ ಅನಂತನಾಥ ಬಸದಿ ಕ್ರಿ.ಶ. 1452
6) ಭಟ್ಕಳದ ಚಂದ್ರನಾಥನ ಬಸದಿ, ಕ್ರಿ.ಶ. 1556
7) ಹಾಡುವಳ್ಳಿಯ ಚಂದ್ರನಾಥ ಬಸದಿ, ಕ್ರಿ.ಶ. 1484.

ಎರಡನೇ ದೇವರಾಯನ ರಾಣಿ ಭೀಮಾದೇವಿ, ಭಟ್ಕಳದ ರಾಣಿ, ವೀರಾಂಬ, ಎರಡನೇ ಹರಿಹರನ ರಾಣಿ ಬುಕ್ಕವ್ವೆ, ಅಲ್ಲಪ್ಪ ದಂಡನಾಯಕನ ಭೂಮಿಕಿ ದಣ್ಣಾಯಕಿ ಹಾಗೂ ಚಾಯವ್ವೆ – ದಣ್ಣಾಯಕಿ ಎಂಬ ಇಬ್ಬರು ಮಹಿಳೆಯರೂ ಸೇರಿದಂತೆ ಬಸದಿಗಳಿಗೆ ದಾನ–ದತ್ತಿಗಳನ್ನು ಮಾಡಿದ್ದಾರೆ.

**ಬೌದ್ಧ ಧರ್ಮದ ಪೋಷಕರಾಗಿ ರಾಣಿಯರು**

ಪ್ರಾಚೀನ ಧರ್ಮವಾದ ಬೌದ್ಧ ಧರ್ಮಕ್ಕೆ ಅರಸು ಮನೆತನಗಳು ಪ್ರೋತ್ಸಾಹ ನೀಡಿರುವುದಕ್ಕೆ ಉದಾಹರಣೆಗಳಿವೆ. ಆದರೆ ಜೈನಧರ್ಮದಷ್ಟು ಬೌದ್ಧ ಧರ್ಮ ತನ್ನ ಅಸ್ತಿತ್ವವನ್ನು ಉಳಿಸಿಕೊಂಡಿಲ್ಲ ಎಂಬುದು ವಿಶಾಧನೀಯ, ಸಂಗತಿ ಬೌದ್ಧ ಧರ್ಮದ ಕಾರ್ಯಗಳಲ್ಲಿ ವಿಹಾರಗಳ ನಿರ್ಮಾಣ ದಾನಗಳು ಮಹತ್ವದ ಪಾತ್ರವಹಿಸಿವೆ.

---

[262] ಡಾ.ಕೆ. ಸತೀಶ, **ವಿಜಯನಗರ ಕಾಲದ ಶೈವ ದೇವಾಲಯಗಳು,** ಪು–38, ಬೆಂಗಳೂರು, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು. 2008.

ಕ್ರಿ.ಶ. ಮೂರನೆಯ ಶತಮಾನದ ಬನವಾಸಿಯ ಪ್ರಾಕೃತ ಶಾಸನದಲ್ಲಿ[263] ಚಟುಕುಲದ ಸಾತಕಣ್ಣಿಯ ಮಗಳು ಬನವಾಸಿಯಲ್ಲಿ ಮಹಾಭೋಜಿ ಶಿವಸ್ಕಂದ ನಾಗಸಿರಿ, ಒಂದು ನಾಗಶಿಲ್ಪವನ್ನು ಒಂದು ಕೆರೆಯನ್ನು ಒಂದು ವಿಹಾರವನ್ನು ಕಟ್ಟಿಸಿದಳೆಂದು ಹೇಳಲಾಗಿದೆ. ಇದುವೆ ಕರ್ನಾಟಕದ ಮೊಟ್ಟ ಮೊದಲ ಕರ್ನಾಟಕದ ಪ್ರಥಮ ಶಾಸನೋಕ್ತ ಬೌದ್ಧ ವಿಹಾರ ರಾಜವಂಶದ ಕುಮಾರಿ (ರಾಣಿ) ಯೋರ್ವಳು ಬೌದ್ಧ ಧರ್ಮವನ್ನು ಪಾಲಿಸಿದ ಬಗ್ಗೆ ಈ ಶಾಸನದ ಪಠ್ಯವನ್ನು ಅವಲೋಕಿಸಿದಾಗ ತಿಳಿಯಬಹುದು.

"(ಪು) (ಅ) ಜ ಯುವ ರಾಜ (ಮಾತುಯ) ಶಿವಖಂಡ ನಾಗಸಿರಿಯ
ದೆ ಯಧಂಮಂ ನಾಗೊ ತಡಗೊ ವಿಹಾರೊ ಛ (*) ಎಥ ಕಮತಿಕೋ
ಅಮಚೋ ಖಡಸಾತಿ ಸಂಜಯ ತಕಸ ಆಚರಿಯಸ
ದೆ ಮೊರಕಸ ಸೀಸೆನ ಣಟಕೇನ ನಾಗೋ ಕತೋ (IIX)[264]

ಮಹಿಷ ಮಂಡಲದಲ್ಲಿ (ಇಂದಿನ ಮೈಸೂರು) ಚಟುವಂಶದ ಒಬ್ಬ ರಾಣಿ ನಾಗಾರ್ಜುನ ಕೊಂಡದಲ್ಲಿ ಮಹಿಶಾಸಕರಿಗೆ ಒಂದು ವಿಹಾರವನ್ನು ಕಟ್ಟಿಸಿಕೊಟ್ಟಿದ್ದಾಳೆ.[265]

ಗಂಗರ ಕಾಲದಲ್ಲಿ ಜೈನಧರ್ಮ ಉತ್ತುಂಗ ಮಟ್ಟದಲ್ಲಿ ಇದ್ದಿತಾದರೂ, ಗಂಗ ಮಾಧವರು ಬೌದ್ಧ ವಿಹಾರಗಳಿಗೆ ದಾನಕೊಟ್ಟರೆಂಬ ಮಾಹಿತಿಯಿಂದ ಬೌದ್ಧಧರ್ಮ ಅಸ್ತಿತ್ವದಲ್ಲಿತ್ತೆಂದು ಅರಿಯಬಹುದು. ಆರಂಭದ ಗಂಗರಸರು ಶೈವ ಮತ್ತು ವೈಷ್ಣವ ಮತಾವಲಂಬಿಗಳಾದರೂ, ನಂತರದಲ್ಲಿ ಬಂದ ಎರಡನೇ ಮಾಧವ ಬೌದ್ಧ ಧರ್ಮಕ್ಕೆ ದತ್ತಿ ನೀಡಿದನು. ಆದರೆ ಅದು ಅಂದು ಅವನತಿಯಲ್ಲಿತ್ತು.

ಕಲ್ಯಾಣ ಚಾಲುಕ್ಯರ ಚಕ್ರವರ್ತಿ ಜಯಸಿಂಹನ ಸಹೋದರಿ ಅಕ್ಕಾದೇವಿ ಜಿನಬುದ್ಧಾನಂತ ರುದ್ರಾಗಮ ನಿಗದಿತ ಧರ್ಮಂಗಳು ಮಾಡಿಸಿದಂತೆ ಶಾಸನವೊಂದು ಉಲ್ಲೇಖಿಸಿದೆ.[266] ಇದರಿಂದ

---

[263] ಶ್ರೀ ನೆ.ಲ. ನಾರಾಯಣ ಮತ್ತು ಆರ್.ಎಸ್. ಪಂಚಮುಖಿ, **ಕರ್ನಾಟಕ ಅರಸು ಮನೆತನಗಳು,** ಪು–03, ಕರ್ನಾಟಕ ಇತಿಹಾಸ ಸಂಶೋಧಕ ಮಂಡಲ, ಧಾರವಾಡ, 1946,

[264] ಎ.ಎಂ. ಅಣ್ಣಿಗೇರಿ ಮತ್ತು ಡಾ, ಆರ್. ಶೇಷಶಾಸ್ತ್ರಿ, ಶಾಸನ ಸಂಗ್ರಹ, ಪು–124.

[265] ಎ.ಇ. xx ಪು–1 ನಾಗಾರ್ಜುನಕೊಂಡ, (ಕ್ರಿ.ಶ. 300).

[266] ಆಯ್.ಎ. XVIII, 270 ಬೇಲೂರು (ತಾ) ಬಾದಾಮಿ (ಕ್ರಿ.ಶ. 1022)

ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಬೌದ್ಧ ಧರ್ಮ ರೂಢಿಯಲ್ಲಿತ್ತೆಂದು ತಿಳಿಯಬಹುದು. ಬಾದಾಮಿ ಚಾಲುಕ್ಯರ ಕಾಲದಲ್ಲಿ ಬಹಳಷ್ಟು ದೇವಾಲಯಗಳನ್ನು ನೋಡಿದರೆ 'ಧರ್ಮಶ್ರದ್ಧೆಯು ಕಾಣಸಿಗದು. ಧರ್ಮಿಕ ವೈಷಮ್ಯವಿರಲಿಲ್ಲವೆಂದು ಹೇಳಬಹುದು. ಬಾದಾಮಿಯಲ್ಲಿ ಒಂದರ ಪಕ್ಕದಲ್ಲೊಂದರಂತೆ ಶೈವ, ವೈಷ್ಣವ, ಬೌದ್ಧ ಜೈನಗುಹಾಲಯಗಳು ಇರುವುದು ಆಗಿನ ಧಾರ್ಮಿಕ ಸಾಮರಸ್ಯವನ್ನು ಎತ್ತಿತೋರಿಸುತ್ತದೆ. ಕರ್ನಾಟಕವನ್ನಾಳಿದ ಬಾದಾಮಿ ಚಾಲುಕ್ಯರ ಪೂರ್ವದ ಅರಸು ಮನೆತನಗಳಲ್ಲಿ ಬೌದ್ಧ ಧರ್ಮದ ಬಗ್ಗೆ ಗೌರವ ಭಾವನೆಗಳಿದ್ದವು ತದನಂತರ ಒಂದು ಹಂತದಲ್ಲಿ ಬೌದ್ಧ ಧರ್ಮ ಇಳಿಮುಖವಾಗುತ್ತಿದ್ದದ್ದನ್ನು ಗಮನಿಸಬಹುದು, ಬಾದಾಮಿ ಚಾಲುಕ್ಯರ ಆಳ್ವಿಕೆಯ ಅವಧಿಯಲ್ಲಿ ನಿರ್ಮಾಣಗೊಂಡ ಒಂದೇ ಒಂದು ಬೌದ್ಧ ಗುಹಾಲಯ ಐಹೊಳೆಯಲ್ಲಿದೆ. ಬಾದಾಮಿಯ ನಿಸರ್ಗ ನಿರ್ಮಿತ ಗುಹೆಯಲ್ಲಿ ಪದ್ಮಪಾಣಿ ಬುದ್ಧನ ಶಿಲಾ ಚಿತ್ರವಿದೆ. ಇದನ್ನು ಹೊರತು ಪಡಿಸಿದರೆ, ಬೇರೇನೂ ಕುರುಹುಗಳು ದೊರಕುವುದಿಲ್ಲ.[267]

ಬೌದ್ಧ ಧರ್ಮಕ್ಕೆ ಸಂಬಂಧಿಸಿದಂತೆ ಪ್ರಾಚೀನ ಸಾಹಿತಿಕ ಕೃತಿಗಳು ಲಭ್ಯವಿಲ್ಲ. ಇಮ್ಮಡಿ ಪುಲಿಕೇಶಿಯು ತನ್ನ ಸಾಮ್ರಾಜ್ಯದ ಉತ್ತರ ಅಂಚಿನಲ್ಲಿ ಬೌದ್ಧ ವಿಹಾರವೊಂದನ್ನು ಕಟ್ಟಿಸಿದನೆಂದು ಇತ್ಸಿಂಗ್ ಹೇಳುತ್ತಾನೆ.[268] ಈಗಾಗಲೇ ಉಲ್ಲೇಖಿಸಿರುವ ಐಹೊಳೆಯಲ್ಲಿನ ಬುದ್ಧನ ಉಬ್ಬುಶಿಲ್ಪವನ್ನು ವಿದ್ವಾಂಸರಾದ ಹೆನ್ರಿ ಕಜೇನ್ಸ್ ಮೊದಲಾದವರು ಮೊದಲು ಜಿನನ ವಿಗ್ರಹವೆಂದು ತಪ್ಪಾಗಿ ಅರ್ಥೈಸಿದ್ದರು. ಆದರೆ ಈ ಗುಹಾಲಯ ಜೈನದಲ್ಲಿ ಬೌದ್ಧ ವಿಹಾರವೆಂದು ಗುರುತಿಸಿದವರು ಎಸ್.ಶೆಟ್ಟಾರ್[269] ಪಾಣಿಯರು ಇಂತಹ ದವಾಲಯಗಳಿಗೆ ದಾನ-ದತ್ತಿಗಳನ್ನು ನೀಡಿರಬಹುದಾದ ಅವಕಾಶಗಳಿವೆ ಅಷ್ಟೇ.

ಪ್ರಾಚೀನ ಕರ್ನಾಟಕದ ಅರಸು ಮನೆತನದ ದೊರೆಗಳು ಮತ್ತು ದೊರೆಸಾನಿಯರುಗಳು (ರಾಣಿಯರು) ತಮ್ಮನ್ನು ಚತುಸ್ಸಮಯ ಸಮುದ್ದರಣರ್ ಆಗಿದ್ದರು. ಚಾಳುಕ್ಯ ಚಕ್ರವರ್ತಿ ತ್ರೈಲೋಕ್ಯ ಮಲ್ಲನ ವೇಳೆವಾಟಿ-ಹಂಪಚಟ್ಟನ ಕುಲವಧುವಾದ ನಾಗಿಯಕ್ಕ ಬಳ್ಳಿಗಾವೆಯಲ್ಲಿ ತಾರಾಭಗವತಿ ದೇವಾಲಯವನ್ನು ನಿರ್ಮಿಸಿ ಅದರ ದೇವತಾ ಕಾರ್ಯಕ್ಕೆ ಪ್ರಭ ಬೌದ್ಧ ಬಳಾರರ ಕಾಲನ್ನು ತೊಳೆದು

---

[267] ಬಿ.ವ್ಹಿ. ಮಲ್ಲಾಪುರ, **ಬಾದಾಮಿ ಚಾಲುಕ್ಯರ ಕಾಲದ ಧಾರ್ಮಿಕ ಪರಿಸರ, ಬಾದಾಮಿಚಾಲುಕ್ಯರು** (ಲೇಖಸಂ) ಡಾ.ಎ. ಮುರಿಗೆಪ್ಪ (ಪ್ರ.ಸಂ) ಪು-160, ಪ್ರಸಾರಂಗ, ಹಂಪಿ, 2009.

[268] R.C. Hiremath. Buddisum in Karnataka, 1994, P-60.

[269] S. Settar, **A Buddist vihara at Aihole East andwest** Vol. XIX, 1969, P-1-2

ಚಾಲುಕ್ಯ ಚಕ್ರವರ್ತಿಯ ಅನುಮತಿ ಪಡೆದು ಭೂಮಿಯನ್ನು ದಾನ ಮಾಡಿದ ವಿಷಯವಿದೆ.[270] ಈಕೆ ರಾಜನ ಸಹವಾಸಿ, ಅಂದರೆ ವೇಟಿಘಾಟಿಯಾದರೂ ಬೌದ್ಧ ಧರ್ಮದ ಪ್ರಚಾರ ಕಾರ್ಯದಲ್ಲಿ ಪ್ರಮುಖ ಕೇಂದ್ರವ್ಯಕ್ತಿಯಾಗಿ ಕಾಣುತ್ತಾಳೆ.

ವೀರನೊಳಂಬನ ರಾಣಿ ಮಾಳಲದೇವಿ ಬೌದ್ಧ ಧರ್ಮಕ್ಕೆ ಪ್ರೋತ್ಸಾಹವನ್ನಿತ್ತ ಮತ್ತೋರ್ವ ಕನ್ನಡತಿ. ಈಕೆ ಬೌದ್ಧ ವಿಹಾರವನ್ನು, ಮಹಾಭವನಗಳನ್ನು ನಿರ್ಮಿಸಿದ್ದಾಳೆ.[271] ಕಲ್ಯಾಣ ಚಾಲುಕ್ಯರ ತ್ರಿಭುವನ ಮಲ್ಲ ಆರನೇ ವಿಕ್ರಮಾಧಿತ್ಯನ ರಾಣಿ ಲಕ್ಷ್ಮಾದೇವಿ 18 ಅಗ್ರಹಾರ ಧರ್ಮಪುರಿಗಳ ಒಡತಿಯಾಗಿದ್ದು ಆಳ್ವಿಕೆಯ ಕಾಲದಲ್ಲಿ ಚತುಸ್ಸಮಯ ಸಮುದ್ದರಣ ರೆನಿಸಿದ 16 ಮಹಾನಕರುಗಳು ಡಂಬಳದ ಬೌದ್ಧ ವಿಹಾರಕ್ಕೆ ಲೊಕ್ಕಿ ಗುಂಡಿಯ ವಡ್ಡವ್ಯಾಪಾರಿ ಸಂಗಯ್ಯ ಸೆಟ್ಟಿಮಾಡಿಸಿದ ಭಗವತಿ ತಾರಾದೇವಿ ವಿಹಾರಕ್ಕೆ ಬದ್ಧದೇವರಿಗೆ, ಅಲ್ಲಿಯ ಪೂಜಾ ಕಾರ್ಯಕ್ಕೆ ಮತ್ತು ಬೌದ್ಧ ಭಿಕ್ಷುಗಳಿಗೆ ದಾನ ನೀಡಿದ ವಿಷಯವನ್ನು ಉಲ್ಲೇಖಿತ ಡಂಬಳ ಶಾಸನ ಸಂಪೂರ್ಣವಾಗಿ ವಿವರಿಸಿದೆ.[272] ಈ ಶಾಸನದ ಮತ್ತೊಂದು ವೈಶಿಷ್ಟ್ಯವೆಂದರೆ "ನಮೋಬುದ್ಧಾಯ" ಎಂದು ಪ್ರಾರಂಭವಾಗುವ ಶಾಸನ ನಂತರ ಶಾಸನದುದ್ದಕ್ಕೂ ಬುದ್ಧನಿಗಿಂತ ತಾರಾಭಗವತಿಯನ್ನೇ ಹೆಚ್ಚಾಗಿ ವರ್ಣಿಸಿದೆ. ಸಾಮಂತ ಭಟ್ಟನ ರಾಣಿ ಶಾಂತಲೆ ಇವಳು ವಿಷ್ಣುವರ್ಧನನ ರಾಣಿ ಬೇರೆ ಎಂಬುದು ತಿಳಿಯಬೇಕು. ಜೈನ, ವೈಷ್ಣವ, ಮಹೇಶ್ವರಿ ಬೌದ್ಧಗಮವೆಂಬ ನಾಲ್ಕು ಸಮಯಗಳನ್ನು ಕಾಪಾಡಿದ ಚತುರೆಯಾಗಿದ್ದಳು.[273]

ವಿಜಯನಗರ ಕಾಲದಲ್ಲಿ ಜೈನ, ದ್ವೈತ, ವಿಶಿಷ್ಟಾದ್ವೈತ ಧರ್ಮ ಪಂಥಗಳ ಜೊತೆಯಲ್ಲೇ ಶೈವ ಪಂಗಡಗಳಾದ ಅದ್ವೈತ ಪಾಶುಪತ ವೀರಶೈವ ಮತ ಪಂಗಡಗಳು ಅಸ್ತಿತ್ವದಲ್ಲಿದ್ದವು. ಆ ಕಾರಣದಿಂದಲೇ ವಿಜಯನಗರ ಕಾಲದ ಧಾರ್ಮಿಕ ಪರಿಸರವನ್ನು ಕರ್ನಾಟಕದ ಧರ್ಮ ಎಂದೇ ಕರೆಯಲಾಗಿದೆ. ವಿಜಯನಗರ ಕಾಲದಲ್ಲಿ ಬೌದ್ಧ ಧರ್ಮದ ಅಸ್ತಿತ್ವ ವಿರಳವಾಗಿತ್ತಾದ್ದರಿಂದ ಯಾವುದೇ ರೀತಿಯ ಮಾಹಿತಿಗಳು ದೊರೆಯುವುದಿಲ್ಲ.

ಈಗಾಗಲೇ ಬೌದ್ಧ ಧರ್ಮದ ಆರಂಭದಲ್ಲೇ ತಿಳಿಸಿದಂತೆ ಕ್ರಿ.ಶ. 3ನೇ ಶತಮಾನದಿಂದ 16ನೇ ಶತಮಾನದವರೆವಿಗೂ ತನ್ನ ಅಸ್ತಿತ್ವವನ್ನು ತೋರಿಸಿದ ಬೌದ್ಧ ಧರ್ಮ ಹೆಚ್ಚಾಗಿ ಶಾತವಾಹನರ ಕಾಲಕ್ಕೆ

---

[270] ಎ.ಕ. VII ಬಳ್ಳಿಗಾವೆ, 170, ಶಿಕಾರಿಪುರ (ಕ್ರಿ.ಶ. 1067)

[271] ಎಸ್.ಆಯ್.ಆಯ್. XX 49 ಕಲಕೇರಿ (ತಾ) ಹಾನಗಲ್ಲು (1076)

[272] ಎಸ್.ಎ. X, ಪು.185, ಡಂಬಳ (ತಾ) ಗದಗ–(1095)

[273] ಎ.ಕ. Xii, ಚಿಕ್ಕನಾಯಕನಹಳ್ಳಿ, 218, ಹೆಗ್ಗೆರೆ (1161)

ಮಾತ್ರ ಪ್ರಚಲಿತದಲ್ಲಿದ್ದು ನಂತರದ ಅರಸುಮನೆತನದವರ ಕಾಲಗಳಲ್ಲಿ ಅವನತಿಯ ಮಾರ್ಗವನ್ನು ಹೊಂದಿದ ಬಗೆಯನ್ನು ಅರಿಯಬಹುದಾಗಿದೆ. ಜೈನ ಧರ್ಮಕ್ಕೆ ರಾಣಿಯರು ನೀಡಿರುವ ಕೊಡುಗೆಗಳನ್ನು ಮತ್ತು ಅವರ ಅಸ್ತಿತ್ವವನ್ನು ಗಮನಿಸಿದರೆ ಬೌದ್ಧ ಧರ್ಮದಲ್ಲಿ ರಾಣಿಯರ ಪಾಲು ನಗಣ್ಯ? ರಾಜಮನೆತನದ ರಾಣಿಯರು ಮಾತ್ರ ಈ ಧರ್ಮವನ್ನು ಅನುಸರಿಸಿದವರೇ ವಿನಃ ಸಾಮಾನ್ಯ ವರ್ಗದ ಮಹಿಳೆಯರಲ್ಲಿ ಎಂಬುದು ಬುದ್ಧನ ಕಾಲದಲ್ಲಿ ಸ್ತ್ರೀ ವರ್ಗಕ್ಕೆ ಸಿಕ್ಕ ಧರ್ಮ ಸ್ವಾತಂತ್ರ್ಯದ ಮಟ್ಟವನ್ನು ಗಮನಿಸಿದರೆ ಅಷ್ಟೇನು ಕರ್ನಾಟಕದ ಸಂಸ್ಕೃತರೇ ಬೌದ್ಧ ಧರ್ಮದ ಕೊಡುಗೆಯಲ್ಲಿ ರಾಣಿಯರ ಪಾಲು ಏನು ಎಂಬುದನ್ನು ನಿರ್ಧರಿಸುವುದು ಸ್ವಲ್ಪದ ಕಷ್ಟದ ವಿಷಯವೇ ಸರಿ.

**ಶೈವ ಧರ್ಮಕ್ಕೆ ರಾಣಿಯರ ಕೊಡುಗೆಗಳು**

ಭರತ ದೇಶದಲ್ಲಿ ಶೈವಧರ್ಮವು ಅತ್ಯಂತ ಪ್ರಾಚೀನ ಧರ್ಮಗಳಲ್ಲಿ ಒಂದು ಶಿವೋಪಾಸನೆ ವೇದಗಳಿಗಿಂತಲೂ ಹಿಂದಕ್ಕೆ ಹೋಗುವಂತಹ ವಿಷಯದ ಬಗ್ಗೆ ಎಲ್ಲರಿಗೂ ತಿಳಿದಿರುವ ವಿಷಯವೇ, ಶೈವಧರ್ಮದ ಮತ್ತೊಂದು ಅನುವಾದದ ಹೆಸರು "ಲಾಕುಳ ಸಮಯ".[274] ವೀರಶೈವ ಧರ್ಮದ ಉದಯಕ್ಕಿಂತ ಮುನ್ನ ಕನ್ನಡ ನಾಡಿನಲ್ಲಿ ಜೈನರನ್ನು ಬಿಟ್ಟರೆ ಈ ಶೈವರೇ ಅತ್ಯಂತ ಪ್ರಭಾವಶಾಲಿಯಾಗಿದ್ದರು. ಇವರು ರಾಜರುಗಳಿಂದ ಪೂಜಿತಗೊಳ್ಳುತ್ತಿದ್ದು ಅತ್ಯಂತ ಪ್ರಭಾವ ಶಾಲಿಗಳಾಗಿದ್ದರು. ಈ ಧರ್ಮದ ಇತಿಹಾಸವು ಕ್ರಿ.ಶ. 1700ರ ಕಿಗ್ಗದ ಶಾಸನ' ದಿಂದ ಗುರ್ತಿಸಬಹುದಾಗಿದೆ.[275] ಕರ್ನಾಟಕದಲ್ಲಿ ಬಹು ಸಂಖ್ಯೆಯ ಜನರು ಅವಲಂಬಿಸಿರುವ ಮತ ಧರ್ಮಗಳಲ್ಲಿ ಈ ವೀರ ಶೈವ ಧರ್ಮವೂ ಒಂದು. ಹಾಗಾಗಿ ಪ್ರಾಚೀನತವು ಧರ್ಮಗಳಲ್ಲಿ ಒಂದಾದ ಶೈವಧರ್ಮಕ್ಕೆ ರಾಜಮನೆತನಗಳಿಂದ ಶ್ರೀಮಂತ ಮನೆತನಗಳಿಂದ ಸಾಮಾನ್ಯ ಮನೆತನಗಳಿಂದ ಪ್ರೋತ್ಸಾಹಗಳು ದೊರೆತಿರುವುದನ್ನು ಒಪ್ಪಲೇಬೇಕಾಗುತ್ತದೆ. ಈಗ ನಮ್ಮ ನಿಬಂಧದ ವಿಷಯವಾದ ರಾಜಮನೆತನದವರ ರಾಣಿಯರ ಪಾಲು 'ಶೈವಧರ್ಮದಲ್ಲಿ ಇತ್ತೆ ಇಲ್ಲವೆ ಎಂಬುದನ್ನು ವಿವೇಚಿಸೋಣ.

---

274 ಡಾ.ಎಂ. ಚಿದಾನಂದ ಮೂರ್ತಿ, **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ,** ಪುಟ, 128. ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, 1965.

275 ಎ.ಕ. VI, KP. 39, C ಕ್ರಿ.ಶ. 700.

ಶೈವಮತ ಕರ್ನಾಟಕದ ಪ್ರಾಚೀನ ಧರ್ಮವೆಂಬುದಕ್ಕೆ ತಾಳಗುಂದದ 'ಶಿವಾಲಯ ಭಾರತದ ಅತ್ಯಂತ ಪ್ರಾಚೀನ ಶಿವಾಲಯಗಳಲ್ಲಿ ಒಂದು ಗೋಕರ್ಣವು ಶೈವ ಮತದ ಮುಖ್ಯ ಹಾಗೂ ಅತ್ಯಂತ ಪ್ರಾಚೀನ ಕೇಂದ್ರ. ನಿಜವಾಗಿ ಕರ್ನಾಟಕದಲ್ಲಿ ಶೈವ ಧರ್ಮಕ್ಕೆ ತುಂಬು ಹೃದಯದ ಸೇವೆಯನ್ನು ಸಲ್ಲಿಸಿದವರು 'ಬಾದಾಮಿ ಚಾಲುಕ್ಯ ಮನೆತನದ ರಾಣಿಯರು' ಒಂದನೇ ಪುಲಿಕೇಶಿಯ ರಾಣಿ ದುರ್ಲಭಾ ದೇವಿ, ವಿನಾಪೊಡ್ಡಿ, ಲೋಕಮಹಾದೇವಿ, ತ್ರೈಲೋಕ್ಯಮಹಾದೇವಿ, ಬಾದಿಪೊಡ್ಡಿ, ಚಲಬ್ಬೆ, ಗವಣಬ್ಬೆ, ನಾಗಮಾರಬ್ಬೆ, ಪೊಲಬ್ಬೆ, ಲೋಕಬ್ಬೆ, ಕನ್ನಯಬ್ಬೆ, ಭೂಜಬ್ಬರಸಿ, ಸುಗ್ಗಲೆ, ಕೇತಲದೇವಿ, ಜೋಗಲಾದೇವಿ, ಮೈಳಲಾದೇವಿ, ಕುಂದಬ್ಬರಸಿ, ಅಕ್ಕಾದೇವಿ, ನೊಳಂಬ ಮಹಾದೇವಿ, ಬರ್ಮಲಾದೇವಿ, ಮಾಳಲಾದೇವಿ, ಕೇತಲದೇವಿ, ಜಾಕಲಾದೇವಿ, ಪಿರಿಯರಸಿ ಬಲ್ಲಿದೇವಿ, ಲಕ್ಷ್ಮೀದೇವಿ, ರೆಬ್ಬಲದೇವಿಯವರುಗಳು ಶೈವಧರ್ಮದ ಪ್ರೋತ್ಸಾಹಕರಾಗಿದ್ದರು.

ಇವರು ಶೈವಧರ್ಮದ ಉದ್ಧಾರಕ್ಕಾಗಿ ಶ್ರಮಿಸಿದಂತಹ ಮಹಾನ್ ವ್ಯಕ್ತಿತ್ವದ ರಾಣಿಯರ ಸಂಕುಲರಾಗಿದ್ದಾರೆ.

ಚಾಲುಕ್ಯರ ಮಂಗಳೇಶನ ತಾಯಿ ಒಂದನೇ ಪುಲಕೇಶಿಯ ರಾಣಿಯಾದ ದುರ್ಲಭಾದೇವಿ ಶೈವಧಮಿಯಳಾಗಿದ್ದು ತಾನು ರಾಜ್ಯಭಾರ ಮಾಡಬೇಕಾದರೆ ಕೆಂದೂರು, ಕಿಸುವೊಳಲು, ನಂದಿಗ್ರಾಮ, ಶ್ರೀಯಂಬಾಟಕ, ವ್ರಿಹಿಮುಖ, ಮುಂತಾದ ಹತ್ತುಗ್ರಾಮಗಳನ್ನು ಮುಕುಟೇಶ್ವರ/ಮಹಾಕೂಟೇಶ್ವರ ದೇವಾಲಯಕ್ಕೆ ದತ್ತಿ ಬಿಟ್ಟ ವಿಷಯ ಪ್ರಶಂಸನೀಯವಾದುದಾಗಿದೆ.[276] ಮುಕುಟೇಶ್ವರದ ದೇವಾಲಯದ ಕಂಬದ ಮೇಲ್ಭಾಗದಲ್ಲಿ ಒಂದು ಶಾಸನವಿದೆ. ಈ ಶಾಸನ ವಿಜಯಾದಿತ್ಯನ ಪ್ರಾಣವಲ್ಲಭೆ, ವಿನಾಪೋಟಿ/ ವಿನಾಪೊಡ್ಡಿ, ಎಂಬುವಳು ಶೈವಧರ್ಮದಲ್ಲಿ ಬಹಳ ಪ್ರಮುಖಳು. ಕಾರಣ ಇವಳು ವಿಜಯಾದಿತ್ಯನ ರಾಣಿಯೇನೂ ಆಗಿರಲಿಲ್ಲ. ಬದಲಾಗಿ ಈಕೆ ಆತನ ಪ್ರಿಯವಲ್ಲಭೆ, ಇವಳು ಸೂಳೆ ಮನೆತನದವಳಾದರೂ (ಶಾಸನಗಳಲ್ಲಿಯೂ ಈಕೆ ಸೂಳೆ ಮನೆತನದವಳೆಂಬ ಉಲ್ಲೇಖಗಳೀವೆ) ಈಕೆಯ ಶೈವ ಧರ್ಮನಿಷ್ಠೆ ಮಿಗಿಲಾದುದ್ದು. ಬಾದಾಮಿ ಚಾಲುಕ್ಯರ ಸಾಮ್ರಾಜ್ಯದ ಬಾಗಲಕೋಟೆ ಜಿಲ್ಲೆಯಲ್ಲಿನ ಬಾದಾಮಿ ತಾಲ್ಲೂಕಿನಲ್ಲಿನ ಮಹಾಕೂಟೇಶ್ವರ ಗುಡಿಯ ಮುಖಮಂಟಪದ ಬಲಭಾಗದ ಕಂಬದ ಮೇಲೆ 9 ಸಾಲುಗಳು ಶಾಸನವಿದೆ. ಆ ಶಾಸನ ಈಕೆಯ ಸಂಪೂರ್ಣ ಮಾಹಿತಿಯನ್ನು

[276] S.A. XIX ಪು.9, ಮಹಾಕೂಟ ಕ್ರಿ.ಶ. 602 ಮತ್ತು Iranna Pattar, **Women Administrators under Chalukyas of Kalyana,** (Article) P. 131-32-33.

ನೀಡುತ್ತದೆ. ಆ ಶಾಸನದ ಪಾಠವನ್ನು ಇಲ್ಲಿ ವಿವರಿಸಿದರೆ ತಪ್ಪಾಗಲಾರದು ಎಂದು ಬಾವಿಸಲಾಗಿ ಶಾಸನದ ಪಠ್ಯವನ್ನು ನೀಡಿದ್ದೇನೆ.

ಸ್ವಸ್ತಿ ವಿಜಯಾದಿತ್ಯ ಸತ್ಯಾಶ್ರಯ ಶ್ರೀಪೃಥಿವೀ

ವಲ್ಲಭ ಮಹಾರಾಜಾಧಿರಾಜ ಪರಮೇಶ್ವರ ಭಟಾ

ರರಾ ಪ್ರಾಣವಲ್ಲಭೆ "ವಿನಾಪೊಡಿಗಳೆನ್ಪೊರ್ಗ್ಗೊಳೆ"

ಯರ್ ಇವರಾ ಮುದು ತಾಯ್ವಿರ್ರೇವಮ ಞ್ಜಿಳ್ಗಳವರಾ

ಮಗಳ್ದಿರ್ಕುಚಿಪೊಡಿಗಳವರಾ ಮಗಳು ವಿನಾಪೊ

ಡಿಗಳ ಇಲ್ಲಿಯ ಹಿರಣ್ಯಗರ್ಭಮಿಮ್ದಿ ಎಲ್ಲಾದಾನ

ಮುಂ, ಗೊಟ್ಟುದೇವನಾ ಪೀಠಮಾನ್ನಿಸುವಿನೆ ಕಟಿ ಬೆಳ್ಳಿಯಾ

ಕೊಡೆಯಾನೇ ಟೆಸಿಎ ಮಳ್ಗಲುಳ್ಳೆ ಅಷ್ಟಿಶತಂ ಕ್ಷೇ

ತ್ರ(ಂ) ಗೊಟ್ಟೋರ್ – ಇದಾನಳಿದೊನ್ವಞ್ಚಮಹಾಪಾತಕನಕಕುಮ್

ಎಂದು ವಿವರಿಸಿರುವ ಶಾಸನ ಒಂದು ಅಪೂರ್ವ ಶಾಸನವಾಗಿದೆ.[277]

ಇವಳು ಧಾರ್ಮಿಕ ಕಾರ್ಯಗಳಲ್ಲಿಯೂ, ರಾಣಿಯರಂತೆ ಅಧಿಕಾರವುಳ್ಳವಳಾಗಿದ್ದಳು. ರಾಣಿಯರನ್ನು ಬಹುವನದಲ್ಲಿ ಸಂಬೋಧಿಸಿರುವಂತೆ ಅವಳನ್ನು ಕೂಡ ಬಹುವಚನದಲ್ಲಿ ಶಾಸನದಲ್ಲಿ ಕರೆದಿರುವುದು ಗಮನಾರ್ಹವಾದ ವಿಷಯವೇ ಸರಿ. ಮುಕುಟೇಶ್ವರ ದೇವಾಲಯಕ್ಕೆ 800 ಮತ್ತರ ಭೂಮಿಯನ್ನು ದಾನಮಾಡುವಷ್ಟು ಅವಳು ಶ್ರೀಮಂತಳಾಗಿದ್ದಳು. ಈ ದಾನವು ಚಾಲುಕ್ಯರ ಕಾಲದ ಅತ್ಯಂತ ಶ್ರೀಮಂತ ದಾನಗಳಲ್ಲಿ ಒಂದೆನಿಸಿದೆ. ಈಕೆಯು ನೀಡಿದ ಕೊಡುಗೆ ಅಮರ.

---

[277] ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ–9, ಬಾದಾಮಿ389, ಪು–340–41.

ಪಟ್ಟದ ಕಲ್ಲಿನ ಸಂಗಮೇಶ್ವರ ಗುಡಿಯ ಶಾಸನವು "ಸಸ್ತಿ ಶ್ರೀಬಿಜೇಶ್ವರದ ಸೂಳೆ ಚಲಬ್ಬೆಯ ಕಂಬ ಮೂರು" ಎಂದು ಉಲ್ಲೇಖಿಸಿರುವುದರಿಂದ ಮಂದಿರದ ನಿರ್ಮಾಣದಂತಹ ಧರ್ಮಕಾರ್ಯಕ್ಕೆ ಸೂಳೆಯರ ದಾನ ಮಾಡುವ ಸಾಮಾಜಿಕ ಮನ್ನಣೆ ಪಡೆದಿದ್ದು ಸ್ಪಷ್ಟವಿದೆ.[278] ಲೋಕಮಹಾದೇವಿಯರ ದೇಗುಲದ ಸೂಳೆ ಗೋಯಿಂದ ಪೊಡ್ಡಿಯ ಮಗಳು ಬಾದಿ ಪೊಡ್ಡಿಯೆಂಬೊಳ್ ಉತ್ತಮ ಗೋಸಾಸ ಮಿಳ್ದೊಳ್" ಎಂಬ ಶಾಸನಗಳಿಂದಲು ದಾನ ಮಾಡುತ್ತಿದ್ದ ಸಂಸ್ಕೃತಿ ತಿಳಿದು ಬರುತ್ತದೆ. ಇವರು ರಾಣಿಯರಲ್ಲವೆಂಬುದನ್ನು ನಾವು ಅರಿಯಬೇಕಷ್ಟೇ ಆದರೂ ರಾಜನಿಗೆ ಅವರು ರಾಣಿಯರ ಸಮಾನರೇ ಎಂಬುದನ್ನು ನಾವು ಮರೆಯಬಾರದು.

2ನೆಯ ವಿಕ್ರಮಾದಿತ್ಯ ಕಾಂಚೀಪಟ್ಟಣವನ್ನು ಗೆದ್ದ ಸಂತೋಷಾರ್ಥವಾಗಿ ಅವನ ರಾಣಿಯರಾದ ಲೋಕಮಹಾದೇವಿ ಪಟ್ಟದಕಲ್ಲಿನಲ್ಲಿ "ಲೋಕೇಶ್ವರ ಭಟ್ಟಾರಕಾ ದೇವಾಲಯವನ್ನು"[279] ಮತ್ತೋರ್ವ ರಾಣಿ ತ್ರೈಲೋಕ್ಯಮಹಾದೇವಿ – "ತ್ರೈಲೋಕ್ಯಭಟ್ಟಾರಕ ದೇಗುಲ"[280] ನಿರ್ಮಿಸಿದ್ದಾರೆ.

ಈ ಲೋಕಮಹಾದೇವಿ ಹಿಂದೆ ತನ್ನ ಮಾವ ಅಂದರೆ ವಿಜಯಾದಿತ್ಯನು ಗಾಂಧರ್ವರಿಗೆ ಹಾಕಿಕೊಟ್ಟ ಮರ್ಯಾದೆಯನ್ನು ದೃಢಪಡಿಸಿದ್ದಲ್ಲದೆ ಪನ್ನಾಸವನ್ನು ಲೋಕೇಶ್ವರ ದೇವರಿಗೆ ಸರ್ವಬಾಧಾ ಪರಿಹಾರವಾಗಿ ಕೊಟ್ಟಿದ್ದಾಳೆ. ಲೋಕೇಶ್ವರ ದೇಗುಲದ ನಿರ್ಮಾಪಕ ಗುಂಡ ಅನಿವಾರಿತಾಚಾರಿಗೆ "ತ್ರಿಭುವನಾಚಾರಿ" ಎಂಬ ಬಿರುದು ಕೊಟ್ಟು "ಮೂಮೆ ಪೆರ್ಜ್ಜೆರಪು" ಅಂದರೆ ಮೂರು ಸಲ ಹಿರಿಯ ಸಮಾರಂಭ ಪೂರ್ವಕವಾಗಿ ಗೌರವಿಸಿದಳು.[281] ಇಲ್ಲಿಯೇ ಲೋಕಮಹದೇವಿಯರ ಲೋಕೇಶ್ವರ ದೇಗುಲದ ಸೂಳೆ ಗೋಯಿನ್ದಪೊಡ್ಡಿಯ ಮಗಳು ಬಾದೀಪೊಡ್ಡಿ ದೇವರಿಗೆ ಉತ್ತಮ ಗೋಸಹಸ್ರ, ಸ್ವರಥ, ಹಸ್ತಿರಥ, ಭೂಮಿದಾನ, ಭಯಮುಖಿಯನ್ನು ದಾನ ಕೊಟ್ಟರೆ, ವಿಜಯೇಶ್ವರದ ಸೂಳೆಯಾದ ಚಲಬ್ಬೆ ಮೂರು ಕಂಬದಾನ ಮಾಡಿರುವುದು.

---

278 ಡಾ. ಶೀಲಾಕಾಂತ ಪತ್ತಾರ, ***ಬಾದಾಮಿ–ಸಾಂಸ್ಕೃತಿಕ ಅಧ್ಯಯನ,*** ಪು–66, ಹಂಪಿ–ಪ್ರಸಾರಂಗ, ಕನ್ನಡ ವಿ.ವಿ, 2000.

279 ಆಯ್, A (I.A) X ಪುಟ–163, ಪಟ್ಟದಕಲ್ಲು ಕ್ರಿ.ಶ.–754.

A.E-iii, ಪು–6, ಪಟ್ಟದಕಲ್ಲು, ಕ್ರಿ.ಶ. 754.

A.E X ಪು–166, ಪಟ್ಟದಕಲ್ಲು, ಕ್ರಿ.ಶ.

280 ಅದೇ,

281 ಚೆನ್ನಕ್ಕ ಎಲಿಗಾರ, ***ಕರ್ನಾಟಕದ ಶಾಸನೋಕ್ತ ಮಹಿಳೆ – ಸಮೀಕ್ಷೆ ಮತ್ತು ಸಂಸ್ಕೃತಿ*** –ಪುಟ–87, ಧಾರವಾಡ, ***2007.*** ಕರ್ನಾಟಕ ಇತಿಹಾಸ ಸಂಶೋಧನಾ ಮಂಡಲ.

ಚಾಲುಕ್ಯಕಾಲದ ಪಲ್ಲವರು ಶಿವಭಕ್ತರಾಗಿದ್ದರು. ಪಲ್ಲವರಾಜನ ಮಗ ಪಲ್ಲವಮಲ್ಲ ಮದಕರಿಕಲ್ಲು, ತೊಣ್ಣೂರು, ಗಂಗವೂರುಗಳನ್ನು ಆಳುತ್ತಿದ್ದಾಗ ಆತನ ಆಯ್ದು ಗವಗಣಬ್ಬೆಮದಕರಿ ಕಲ್ಲಿನಲ್ಲಿ ಗವಗಣೇಶ್ವರ ಶಿವಾಲಯವನ್ನು ಮಾಡಿಸಿದ್ದಾಳೆ. ಹೀಗೆ ಕರ್ನಾಟಕವನ್ನಾಳಿದ ರಾಜಮನೆತನಗಳಲ್ಲಿನ ರಾಣಿಯರು ರಾಜ್ಯದ ಬೇರೆ-ಬೇರೆ ಭಾಗಗಳಲ್ಲಿ ಆಡಳಿತವನ್ನು ನೋಡಿಕೊಳ್ಳುತ್ತಾ ಪ್ರಜೆಗಳೊಂದಿಗೆ ಬೆರೆತು ಆಡಳಿತ ನಡೆಸುತ್ತಿರಬೇಕಾದ ಸಂದರ್ಭಗಳಲ್ಲಿ ದೇವಾಲಯಗಳ ನಿರ್ಮಾಣ, ಜನಹಿತ ಕಾರ್ಯಗಳು ಪ್ರಭುವರ್ಗ ಮತ್ತು ಪ್ರಜಾವರ್ಗಗಳಲ್ಲಿ ಮೈತ್ರಿಯನ್ನು ಉಂಟುಮಾಡುತ್ತಿದ್ದವು. ಸುಮಾರು 11ನೆಯ ಶತಮಾನಕ್ಕೆ ಬಂದರೆ ಕುವರಲಕ್ಷ್ಮಣನ ರಾಣಿ ಸುಗ್ಗಲೆ (ಜಯಸಿಂಹನ ರಾಣಿ ಸುಗ್ಗಲೆ ಬೇರೆ) ದೇವರ ದಾಸಿಮಯ್ಯನ ಶಿಷ್ಯಳಾಗಿದ್ದಳು. ವೀರ ಶೈವ ಕಾವ್ಯಗಳು ಈಕೆಯನ್ನು "ಯಮನಿಯ ಮಾಸನ ಪ್ರಾಣಾಯು ಮಪ್ರತ್ಯಾಹಾರ ಧಾನ್ಯಧಾರಣ ಜಪಸಮಾಧಿಪನ್ನ, ಪಾಸುಪತ ಯೋಗಾಚಾರ್ಯನ ಶ್ರೀಮದ್ಬ್ರಹ್ಮರಾಸಿ ಪಂಡಿತವರ್ಗ ದೇವಾಪುರದ ಶ್ರೀ ಮಾರಸಿಂಘೇಶ್ವರ ದೇವರಂಗ ಭೋಗಕ್ಕಂ ತಪೋಧನರ್ಗಂ ವಿದ್ಯಾರ್ತ್ತಿಗಳಿಗಂಮಶನಾಚ್ಛಾದನ ಪಥ್ಯಷಧಾರ್ತ್ಥಮಾಗೆ......" ಎಂದು ಶಾಸನ[282] ವಿವರಿಸುತ್ತಾ ದತ್ತಿಯನ್ನು ನೀಡಿದ ವಿಷಯವನ್ನು ಸೂಚಿಸುತ್ತದೆ.

ದೇವಸ್ಥಾನದಂತಹ "ಬಹುದೇಶ್ಚದ ಕಾರ್ಯನಿರ್ವಹಣೆಯಿಂದ ಯಶಸ್ಸು ಪ್ರತಿಷ್ಠೆ ಬೆಳೆಗುತ್ತವೆ ಎಂಬ ಹಿನ್ನೆಲೆಯಲ್ಲಿ ಸ್ವತಂತ್ರ ದಾನ ಮನೋವೃತ್ತಿಯು ಬೆಳೆಯ ತೊಡಗಿದವು. "ಸ್ವಮತಾಭಿಮಾನ", "ಪುಣ್ಯಾರ್ಜನೆ" ಸ್ವಪ್ರತಿಷ್ಠೆ ಇದಕ್ಕೆ ಹೆಚ್ಚು ಪೋಷಣೆಯನ್ನು ನೀಡಿದವು.

ಕಲ್ಯಾಣ ಚಾಲುಕ್ಯರ ರಾಣಿಯರಲ್ಲೇ ಅಕ್ಕಾದೇವಿಯ ಸ್ಥಾನ ವಿಶಿಷ್ಟ್ಯಪೂರ್ಣವಾದುದ್ದು. 'ಗುಣದ ಬೆಡಂಗಿ' ಎನಿಸಿದಂತಹ ಅಕ್ಕಾದೇವಿ ತನ್ನಾಸ್ಥಾನದಲ್ಲಿ ಸರ್ವಧರ್ಮಗಳಿಗೂ ರಾಜಾಶ್ರಯ ನೀಡಿದ್ದಳು. ತನ್ನ ರಾಜ್ಯಭಾರದ ಕಾಲದಲ್ಲಿ ಇಡೀ ಪ್ರದೇಶವನ್ನು, ಶೈವಧರ್ಮಕ್ಕೆ ಪರಿವರ್ತಿಸಿ ಅಗಾಧವಾದ ಕೊಡುಗೆಯನ್ನು ನೀಡಿದ್ದಾಳೆ. ಅಕ್ಕಾದೇವಿಯು ಸುವಿಖ್ಯಾತ ಕಲ್ಯಾಣ ಚಾಲುಕ್ಯ ವಂಶದಲ್ಲಿ ಹುಟ್ಟಿದವಳು. ಚೋಳ ಕುಲ ಪ್ರಳಯನೂ ಸಾಹಸ ಭೀಮನೂ ಆದ ಸತ್ಯಾಶ್ರಯ ಇರಿವ ಬೆಡಂಗನು ಈಕೆಯ ತಂದೆ, ಸಿಂಹವಿಕ್ರಮನಾದ ಜಯಸಿಂಹ ಇವಳ ಸಹೋದರ. ರಾಜತಂತ್ರ ಪ್ರವೀಣರ ಪರಾಕ್ರಮ ಪಟುಗಳ ಮನೆತನದಲ್ಲಿ ಹುಟ್ಟಿ ಬೆಳೆದ ಈಕೆಯಲ್ಲಿ ಶೌರ್ಯ, ಸಾಹಸ,

---

[282] S.I.I – XX-23, ದೇವೂರು – ಕ್ರಿ.ಶ. 1029.

ರಾಜಕೌಶಲಗಳು ಅನುವಂಶಿಕವಾಗಿ ಬೆಳೆದು ಬಂದಿರುವಂತೆ ದಾನ-ಧರ್ಮದ ಕ್ಷೇತ್ರದಲ್ಲಿ ಈಕೆಯ ಹೆಸರು ಮತ್ತು ಪ್ರಭಾವ ಹಿರಿದಾದುದ್ದು. ಕಿಸುಗಾಡು, ಬಾಗಡಗೆ, ತೊರಗೆಲೆ, ಮಾಸೆಯ ವಾಡಿಗಳಲ್ಲಿ ಆಳ್ವಿಕೆ ಮಾಡುತ್ತಿದ್ದಾಗ ಆಕೆಯು "ರಾಜ್ಯಕರ್ತ್ರಿ" ಯೆಂದು ಒಪ್ಪಲೇಬೇಕಾಗುತ್ತದೆ. ಕೋರಲಹಳ್ಳಿ ಶಾಸನ[283] ಮತ್ತು ಶಿಗ್ಗಾಂವ ಶಾಸನಗಳು[284] ಇವಳ ಶೈವಧರ್ಮದ ದಾನವನ್ನು ವಿವರಿಸುವಲ್ಲಿ ಯಶಸ್ವಿಯಾಗಿವೆ.

ಮಹಾಮಂಡಲೇಶ್ವರ ವೀರಶಾಂತಾರನ ರಾಣಿ ಬಳ್ಳಿಗಾವೆಯಲ್ಲಿ ಚಾಗಲೇಶ್ವರ ದೇಗುಲವನ್ನು ನಿರ್ಮಿಸಿದ್ದಾಳೆ.[285] ಚಾಲುಕ್ಯರ ಸುಗ್ಗಲದೇವಿ ನಿಡಗುಂದಿ ಪ್ರದೇಶದಲ್ಲಿ ರಾಜ್ಯಭಾರ ಮಾಡುತ್ತಿದ್ದಾಗ "ಸ್ವಯಂಭುಕಲಿದೇವಸ್ವಾಮಿಗೆ" ದಾನದತ್ತಿಗಳನ್ನು ಪೂಜಾರ್ಚನೆಗೆ ದಾನಗಳನ್ನು ಮಾಡಿದ ವಿಷಯವೆನ್ನೂ ತಿಳಿಯಬಹುದು. ಭುವನೈಕ್ಯಮಲ್ಲ ವೀರನೊಳಂಬನ ರಾಣಿ ಮಾಳಲದೇವಿ ಶಿವಾಲಯ ಮತ್ತು ಇನ್ನಿತರ ಸಾರ್ವಜನಿಕ ಕಾರ್ಯಗಳಿಗೆ ದಾನ ಮಾಡಿದ್ದಾಳೆ.

ಚಾಲುಕ್ಯರ ಆರನೇ ವಿಕ್ರಮಾದಿತ್ಯನ ರಾಣಿಯರಲ್ಲಿ ಒಬ್ಬಳಾದ ಕೇತಲದೇವಿ, ಕುಂಬಿಟ್ಟಿಗೆಯ ಚಂಡೇಶ್ವರ ದೇವರಿಗೆ 14 ಮತ್ತರು ಭೂಮಿ ಗಾಣದ ತೆರೆ, ಎಣ್ಣೆಯನ್ನು ದಾನವಾಗಿ ನೀಡಿ ಶೈವಧರ್ಮವನ್ನು ಬೆಳಗಿದ್ದಾಳೆ.[286] ಪಿರಿಯ ಕೇತಲದೇವಿ ಮತ್ತೋರ್ವ ರಾಣಿ. ಭತ್ತಗ್ರಾಮವನ್ನು ಸಿರುಗುಪ್ಪೆಯನ್ನು ಆಳುತ್ತಲಿದ್ದು ಅಲ್ಲಿಯ ಸ್ವಯಂಭೂ ಕೇತಲೇಶ್ವರ ದೇವರಿಗೆ ಗದ್ದೆ, ಅಂಗಭೋಗ, ದೀಪ, ಜಾತ್ರೆ, ಭೂಮಿ, ತೋಟ, ಗಾಣ, ನಿವೇಶನಗಳನ್ನು ಬಿಟ್ಟುಕೊಟ್ಟಿದ್ದಾಳೆ.[287] ಆ ಕೇತಲದೇವಿ ಮತ್ತು ಪರಿಯ ಕೇತಲದೇವಿಯರು ಬೇರೆ-ಬೇರೆ ಎಂಬುದನ್ನು ಇಲ್ಲಿಯ ಶಾಸನಗಳ ಅಧ್ಯಯನಗಳಿಂದ ತಿಳಿಯಬಹುದು.

ಆರನೇ ವಿಕ್ರಮಾದಿತ್ಯನ ಮತ್ತೋರ್ವ ರಾಣಿ ಲಕ್ಷ್ಮಿದೇವಿ ಚಾಲುಕ್ಯವಿಕ್ರಮವರ್ಷ 9ರಲ್ಲಿ ಸೂಂಡಿಯಲ್ಲಿ ಆಳ್ವಿಕೆ ಮಾಡುತ್ತಿದ್ದಾಗ ರಾಜಧಾನಿಯಾಗಿದ್ದ ಸೂಂಡಿಯಲ್ಲಿ "ಆಚಲೇಶ್ವರದ

---

[283] B.K.I. I-i-86, ಕೋರಲಹಳ್ಳಿ, ಕ್ರಿ.ಶ. 1050.

[284] ಡಾ. ಚೆನ್ನಕ್ಕ ಎಲಿಗಾರ, ***ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ,*** ಪು-152, ಧಾರವಾಡ-ಪ್ರಸಾರಂಗ ಕರ್ನಾಟಕ ವಿಶ್ವವಿದ್ಯಾಲಯ. 1990.

[285] ಎ.ಕ VIII, ನಗರ-87, ಹುಂಚ-ಕ್ರಿ.ಶ. 1062.

[286] S.I.I. XX 51, ಕುಳೇಕುಮಟಗಿ, ಕ್ರಿ.ಶ. 1077.

[287] S.I.I. IX –I-159, ಸಿರಗುಪ್ಪ, ಕ್ರಿ.ಶ. 1092.

ಸೋಮೇಶ್ವರದ ಪಂಡಿತರಿಗೆ ವಿದ್ಯಾಧಾನಕ್ಕೋಸ್ಕರ ತಪೋಧಾನದ ಆಹಾರಕ್ಕೋಸ್ಕರ ಕಿಸುಕಾಡು 70ರ ಬಳಿಯಲ್ಲಿದ್ದ "ಪೊಂಗರಿ" ಎಂಬ ಗ್ರಾಮವನ್ನು ಬಿಟ್ಟುಕೊಟ್ಟಿದ್ದಾಳೆ.[288]ಮೈಳಲಾದೇವಿ ದೇವಕಾರ್ಯಕ್ಕಾಗಿ ಗಾಣಗಳನ್ನು, ತೋಟಗಳನ್ನು[289] ಜಾಕಲಾದೇವಿ ಹಿರೇಲಿಂಗದಳ್ಳಿಯ ಸ್ವಯಂಭೂ ದೇವರಿಗೆ ದತ್ತಿಗಳನ್ನು ಕೊಟ್ಟ ವಿಷಯಗಳಿವೆ.[290] ಮತ್ತೊರ್ವ ರಾಣಿ ಮಾಳಲಾದೇವಿ–ಮಾಳಲೇಶ್ವರ ದೇಗುಲವನ್ನು ರಚಿಸಿ ದಾನಕೊಟ್ಟ ವಿಷಯಗಳನ್ನು[291] ಶಾಸನಗಳು ತಿಳಿಸುತ್ತವೆ.

ಹೀಗೆ ಚಾಲುಕ್ಯ ಮನೆತನದ ರಾಣಿಯರಲ್ಲಿ ಹೆಚ್ಚಿನ ಪಾಲಿನ ರಾಣಿಯರು ಶೈವಧರ್ಮಕ್ಕೆ ಪ್ರೋತ್ಸಾಹವನ್ನಿಟ್ಟು ಪೋಷಿಸಿ ಬೆಳೆಸಿದ್ದಾರೆ. ಇಲ್ಲಿ ಮತ್ತೊಂದು ಗಮನಾರ್ಹವಾದ ವಿಷಯವೆಂದರೆ "ರಾಜನೋ ಬಹುವಲ್ಲಭಾ" ಎಂಬುದಕ್ಕೆ ನಿದರ್ಶನವಾದ ಆರನೇ ವಿಕ್ರಮಾದಿತ್ಯ ಹಲವಾರು ರಾಜಕುಮಾರಿಯರನ್ನು ವಿವಾಹಮಾಡಿಕೊಂಡು ಅದರ ಮೂಲಕ ಧರ್ಮದ ಏಳಿಗೆಗೆ ಶ್ರಮಿಸಿರಬಹುದೇ? ಇದರ ಜೊತೆಗೆ ರಾಜ್ಯದ ಎಲ್ಲೆಯನ್ನು ವಿಸ್ತರಿಸಿರಬಹುದು. ಎಂಬುದನ್ನು ತಿಳಿಯಬಹುದಾಗಿದೆ. ಸಾಮಾನ್ಯವಾಗಿ ಆರನೇ ವಿಕ್ರಮಾದಿತ್ಯನ ರಾಣಿಯರು ಹೆಚ್ಚಾಗಿಯೇ ಧಾರ್ಮಿಕ ರಂಗವನ್ನು ಪ್ರವೇಶಮಾಡಿದ್ದಾರೆ. ರಾಜಕೀಯ ರಂಗದಲ್ಲಿ ಕಾರ್ಯಭಾರ ಮಾಡುತ್ತಲೇ ಧಾರ್ಮಿಕ ರಂಗದ ಮೇಲೆ ಉನ್ನತಾಸಕ್ತಿ ತೋರಿ ತಮ್ಮ ಮಹತ್ವದ ಸಾಧನೆಯನ್ನು ಕರ್ನಾಟಕದ ಧಾರ್ಮಿಕ ಮತ್ತು ಕಲಾ ರಂಗಕ್ಕೆ ಕೊಡುಗೆಯಾಗಿ ನೀಡಿರುವುದು ಪ್ರಶಂಶಾರ್ಹವಾದುದ್ದಾಗಿದೆ.

ಇನ್ನೂ ಮಹಾಮಂಡಳೇಶ್ವರರಾದ ಜಗದೇಕಮಲ್ಲ ಮಲ್ಲಿದೇವರ ಚೋಳ ಮಹಾರಾಜನ ಪಿರಿಯರಸಿ, ಬಲ್ಲಿದೇವಿ, 'ಸಿರಿವೂಲಕೆರೆಯನ್ನಾಳುತ್ತಿದ್ದಾಗ ಅಲ್ಲಿಯೇ ನೆಲೆಸಿದ್ದ 'ಕಿಲಿದೇವ ಸಾಮಿಯ ದೇವಾಲಯಕ್ಕೆ ಮತ್ತು ಅಲ್ಲಿನ ಪಂಡಿತ ವರ್ಗಕ್ಕೆ 6 ಮತ್ತು ಭೂಮಿಯನ್ನು ನೀಡಿದ್ದಾಳೆ.[292] ರೆಬ್ಬಲಾದೇವಿ ಸೂರ್ಯಗ್ರಹಣದ ನಿಮಿತ್ತವಾಗಿ ಸರ್ಭೇಶ್ವರ ದೇವರಿಗೆ ದಾನವನ್ನು ನೀಡಿದ್ದಾಳೆ.[293]

---

288 ಎ.ಎ – XV-6, ಸೂಂಡಿ, ಕ್ರಿ.ಶ. 1084.

289 S.I.I.XX-61, ಕನ್ನೋಲಿ – ಕ್ರಿ.ಶ. 1085.

290 S.I.I. XVIII 127, ಹಿರೇಲಿಂಗಹಳ್ಳಿ, ಕ್ರಿ.ಶ.

291 ಧಾರವಾಡ ಜಿ.ಶ. ಸೂಚಿ, ಹಾನಗಲ್ 255, ಕ್ರಿ.ಶ. 1114.

292 ಎ.ಕ XI ಚೆಳ್ಳಕೆರೆ 21, ಓಬಳಾಪುರಂ, ಕ್ರಿ.ಶ. 1087.

293 I.N.D. 16, ನಗ್ರೋಳಿ, ಕ್ರಿ.ಶ. 1103.

ರಾಣಿಯರು ಎಷ್ಟೋ ಸಲ ತಮ್ಮ ಪರಿಸರದವರೊಂದಿಗೆ ದಾನಕಾರ್ಯಗಳನ್ನು ಸಹ ಮಾಡಿರುವುದನ್ನು ಆಧಾರಗಳು ಹೊರಹಾಕುತ್ತವೆ. ರಾಜ್ಯದ ರಾಜಕಾರಣದಲ್ಲಿ ಅನಿವಾರ್ಯವೆಂಬಂತೆಯೇನೋ. ತಮ್ಮ ಆಳ್ವಿಕೆಯ ಪ್ರದೇಶದಲ್ಲಿ ಅಥವಾ ರಾಜ್ಯದ ಯಾವುದೋ ಭಾಗದಲ್ಲಿ ತಮ್ಮ ಮಂತ್ರಿ ವರ್ಗದವರೊಂದಿಗೆ / ಪುರ ಪ್ರಮುಖರುಗಳೊಂದಿಗೆ ಧಾರ್ಮಿಕ ಕಾರ್ಯಗಳನ್ನು ಕೈಗೊಳ್ಳುವ ಪ್ರಸಂಗಗಳು ಇವರಿಗೆ ಬರುತ್ತಿದ್ದವು. ಇಲ್ಲಿ ಭಕ್ತಿ ಅಥವಾ ಧಾರ್ಮಿಕ ಪ್ರಸಾರಕ್ಕಿಂತ ಮಿಗಿಲಾಗಿ ರಾಜಕೀಯ ದೃಷ್ಠಿ, ಪ್ರಜಾಪ್ರೇಮಗಳು ಎದ್ದು ಕಾಣುತ್ತಿದ್ದವು.

ಚಾಲುಕ್ಯರ ತ್ರೈಲೋಕ್ಯಮಲ್ಲ ಸೋಮೇಶ್ವರನ ಹಿರಿಯರಾಣಿ ಮೈಳಲಾದೇವಿ ಮತ್ತು ಬಲ್ಲವರಸರು ಶ್ರೀಶೈಲ ಮಲ್ಲಿಕಾರ್ಜುನನಲ್ಲಿಗೆ ಬಂದು ಅಲ್ಲಿಯ ದೇವರಿಗೆ ಸಾರಂಗೇಶ್ವರ ದೇವರಿಗೆ ಸಿರಿಪುರದ ಇಂದ್ರೇಶ್ವರ ದೇವರಿಗೆ, ಅಲ್ಲಲ್ಲಿಯ ಸತ್ರವಾರಿಸತ್ರಗಳಿಗೆ ಮಲ್ಲಿಕಾರ್ಜುನ ದೇವರ ದರ್ಶನ ಕಾರಣ ಪುರುಷರೆನಿಸಿದ ಕಿಟ್ಟಿಗಾವೆಯ ಸಂಬನ್ದಿ ಮೋಸಂಗಿಯ ಸುರೇಶ್ವರ ಪಂಡಿತರ ಕಾಲು ತೊಳೆದು, ದುದ್ದಿಯಾಗಲು ಸಿರಿಪುರ ಕುರುಕುಸ್ದಿ ಎಂಬ ಗ್ರಾಮಗಳನ್ನು ಬಿಟ್ಟಿದ್ದಾರೆ.[294]

ಚಾಲುಕ್ಯ ಆರನೇ ವಿಕ್ರಮಾದಿತ್ಯನ ರಾಣಿಯರು ಮಂತ್ರಿಗಳೊಡಗೂಡಿ ಕೈಗೊಂಡ ದಾನಗಳು ಹಲವು ರಾಣಿಯರಾದ ಮಲ್ಲಣಿದೇವಿ ಮತ್ತು ಸುಗ್ಗಲದೇವಿಯರು ಶೈವಧರ್ಮದ ಪ್ರತಿಪಾದಕರುಗಳಾಗಿದ್ದರು. ಮಲ್ಲಣಿದೇವಿಯ ಮನೆಯಲ್ಲಿ ಮಾಣಿಕಭಣ್ಣಾರ ನಿಯೋಗದ ಅಧಿಕಾರಿಯಾಗಿದ್ದ ನಾಗವರ್ಮ, ತನ್ನ ತಂದೆ ನಿರ್ಮಿಸಿದ ರೇವಣೇಶ್ವರ ದೇವಾಲಯವನ್ನು ಜೀರ್ಣೋದ್ದಾರ ಮಾಡಿದಾಗ ಶೈವಧರ್ಮವನ್ನೇ ತನ್ನ ಉಸಿರೆನಿಸಿಕೊಂಡಿದ್ದ ಸುಗ್ಗಲಾದೇವಿ ನಾಗವರ್ಮನ ಬಿನ್ನಪದ ಮೇರೆಗೆ ಆ ದೇಗುಲಕ್ಕೆ 15 ಕೋಲಮತ್ತರು ಭೂಮಿಯನ್ನು ನೀಡಿದ್ದಾಳೆ.

ಹೊಯ್ಸಳರ ಕಾಲದಲ್ಲಿ ಬಲ್ಲಾಳನ ಅರಸಿ ತುಪ್ಪದ ಭಾಗಲಾದೇವಿ 'ಬಲ್ಲೇಶ್ವರ ದೇವರ ನೈವೇದ್ಯಕ್ಕೆ ಹಣವನ್ನು ನೀಡಿದಳು.[295] ಮಹಾದಂಡನಾಯಕಿತಿ ಅರಸೀಕೆರೆಯ ಮಾದೇಶ್ವರ ದೇವರ ರಂಗಭೋಗಕ್ಕೆ ತೇಜೋಪಂಡಿತರ ಪಾದ ತೊಳೆದು 450 ಕಂಬದ ಭೂಮಿಯನ್ನು 1 ಮತ್ತರು ಎರೆ

---

[294] ಡಾ. ಚೆನ್ನಕ್ಕ ಎಲಿಗಾರ, ***ಕರ್ನಾಟಕದ ಶಾಸನೋಕ್ತ ಮಹಿಳೆ, ಸಮೀಕ್ಷೆ – ಸಂಸ್ಕೃತಿ,*** ಪುಟ–91, ಧಾರವಾಡ– ಕರ್ನಾಟಕದ ಇತಿಹಾಸ ಸಂಶೋಧನಾ ಮಂಡಲ.***2007.***

[295] ಎ.ಕ. Vii, ಶಿಕಾರಿಪುರ, 87, ಬಳ್ಳಿಗಾವೆ, ಕ್ರಿ.ಶ. 1131.

ಭೂಮಿಯನ್ನು ಜೀಯರಿಗೆ ಒಂದು ಮನೆಯನ್ನು ದಾನ ನೀಡಿದ್ದಾಳೆ.[296] ಶೈವಧರ್ಮಕ್ಕೆ ತಮ್ಮನ್ನು ಸಮರ್ಪಿಸಿಕೊಂಡಿದ್ದ ಮಹಿಳೆಯರಲ್ಲಿ ತೊರಗೆಲೆಯ ಬರ್ಮಭೂಪಾಲನ ಮಡದಿ ಸುಗ್ಗಲೆ ಅದ್ವಿತೀಯಳು. ಚಾಲುಕ್ಯ ಜಯಸಿಂಹನ ಮಡದಿ ಸುಗ್ಗಲೆಯ ಪ್ರತಿರೂಪವೆನಿಸಿದ್ದಾಳೆ. ಈ ಸುಗ್ಗಲೆಗೆ 'ಪರಮಮಾಹೇಶ್ವರಿ' ಎಂಬ ಬಿರುದು ಇತ್ತು. ಇವಳನ್ನು ಮತ್ತು ಇವಳ ಶೈವ ಭಕ್ತಿಯನ್ನು

"ಸತತ ಮದೀಯದೆಯ್ವಂ ಅಮೃತೇಶ್ವರ ನೀ ನಿಗಳಂಕ ಬರ್ಮಭೂ
ಪತಿ ಪತಿಯನ್ಯಥಾಪಿ ಶರಣಿಲ್ಲೆನಗೆಂದು ತ್ರಿಗುಪ್ತಿಯುಕ್ತ ಸು
ಧತೆಯಿನುಗ್ರ ಪುಣ್ಯನಿಧಿ ಸುಗ್ಗಲದೇವಿ ಲಸಚ್ಚರಿತ್ರ ಭೂ
ಷಿತೆ ಘಟಸರ್ಪಮಂ ಹಿಡಿದು ಗೆಲ್ದಲಿಳಾತಳಮ್ಮೆದೆ ಬಣ್ಣಿಸಲ್॥
ಎಂದು ವರ್ಣಿಸದ ಶಾಸನ ಸುಗ್ಗಲೆಯನ್ನು ಘಟ ಸರ್ಪಕ್ಕೆ ಹೋಲಿಸಿ ರಂಜಿಸಿದೆ."

ದಾನ ವಿರಾಜತೆಯೆನಿಸಿದ ಈಕೆ ಬರ್ಮದೇವರ ಸನೊಂದಿಗೆ ತೊರಗಲೆಯಲ್ಲಿ ಸುಗ್ಗಲೇಶ್ವರದೇವರನ್ನು ಪ್ರತಿಷ್ಠಾಪಿಸಿ. ದೇವರ ಧೂಪ, ದೀಪಕ್ಕೆ 2 ಮತ್ತು 450 ಕಂಬ, ಅಡಿಕೆ ಸೀಮೆಯನ್ನು ಬಿಟ್ಟುಕೊಟ್ಟಿದ್ದಾಳೆ. ಎರಡನೆಯ ಬಲ್ಲಾಳನ ರಾಣಿ ಬಮ್ಮಲಾದೇವಿಯ ತಾಯಿ ಸೋಮವ್ವೆ ಅತ್ತಿಗೊಂಡನ ಹಳ್ಳಿಯ ಸೌಭಾಗ್ಯವತಿ ಎನಿಸಿದ ಬಲ್ಲಿದೇವನ ಪಟ್ಟಮಹಾದೇವಿ ಮಲಯಮತಿಯರಸಿ ಮಹಾಮಂಡಳೇಶ್ವರರ ರಾಣಿಯರೂ ಸಹ ಶೈವಧರ್ಮಕ್ಕೆ ಅಗಾಧವಾದ ಧಾನವನ್ನು ನೀಡಿದ್ದಾರೆ. ಹೊಯ್ಸಳ ಮನೆತನ, ಜೈನ ಮತಕ್ಕೆ ಮಾರು ಹೋಗಿದ್ದರೂ, ಆ ಪರಿವಾರದ ಜನತೆ ಧರ್ಮ ಸ್ವಾತಂತ್ರ್ಯ ಪಡೆದುಕೊಂಡಿದ್ದರು. ಹೊಯ್ಸಳ ವಿಷ್ಣುವರ್ಧನನ ರಾಣಿಯರಲ್ಲಿ ಬಮ್ಮಲಾದೇವಿ, ರಾಜಲದೇವಿ ಮತ್ತು ಚಿಕ್ಕಶಾಂತಲೆಯವರುಗಳು ಶೈವರಾಗಿದ್ದರು. ಪಲ್ಲವ ರಾಜ್ಯಲಕ್ಷ್ಮಿಯಾಗಿದ್ದ ಬಮ್ಮಲೆ ಜಿನಚಟಿಗೆರೆಯಲ್ಲಿ ಬಮ್ಮಲೇಶ್ವರ ದೇವರಿಗೆ ಪತಿಯೊಂದಿಗೆಯೇ ದತ್ತಿ ನೀಡಿದಳು. ರಾಜಲದೇವಿಯು ಸೋದರ ಮಾವ ಮಂಚಿಯರಸಿ ಮಂಚೇಶ್ವರ ದೇವರಿಗೆ ಕೈಗೊಂಡ ದಾನದಲ್ಲಿ ಭಾಗಿಯಾಗಿದ್ದಳು.[297]

---

[296] ಎ.ಕ vii, ದಾವಣಗೆರೆ, 84, ಕಡ್ಲಬಾಳು, ಕ್ರಿ.ಶ. 1161.

[297] ಡಾ. ಚೆನ್ನಕ್ಕ ಎಲಿಗಾರ, ***ಕರ್ನಾಟಕದ ಶಾಸನೋಕ್ತ ಮಹಿಳೆ, ಸಮೀಕ್ಷೆ – ಸಂಸ್ಕೃತಿ,*** ಪುಟ–89, ಧಾರವಾಡ ಕರ್ನಾಟಕದ ಇತಿಹಾಸ ಸಂಶೋಧನಾ ಮಂಡಲ.2007,

ರಾಣಿ ಬಮ್ಮಲಾದೇವಿ ಬಹುಸಂಖ್ಯಾ ಶಾಸನಗಳಲ್ಲಿ 'ಪಿರಿಯರಸಿ ಬಮ್ಮಲಾದೇವಿ' ಎಂದು ಕಾಣಿಸಿಕೊಂಡಿದ್ದಾಳೆ. ಚನ್ನರಾಯ ಪಟ್ಟಣದ ಅತ್ತಿಹಳ್ಳಿಯ ಶಾಸನ ಇವಳ ಮನೆತನದ ಹೆತ್ತವರ ಪರಿಚಯವನ್ನು ಮಾಡಿಕೊಡುತ್ತದೆ. ಧಾರ್ಮಿಕ ಪ್ರವೃತ್ತಿವುಳ್ಳವಳಾದ ಇವಳಿಗೆ ಹೀಗೆ ರಾಜಕಾರಣ ತವರಿನ ಬಳುವಳಿಯೋ ಹಾಗೆ ಶೈವ ಧರ್ಮ ಇವಳಿಗೆ ಪ್ರಮುಖವಾಗಿತ್ತು. ಅದರ ಬೆಳವಣಿಗೆಗೆ ತಕ್ಕ ಸಹಾಯ ಮತ್ತು ಸಹಕಾರ ಸಲ್ಲಿಸಿದ್ದುಂಟು 'ಅಭಿನವ ಪಾರ್ವತಿ' ಎಂದು ಕರೆಸಿಕೊಂಡದ್ದ ಒಮ್ಮಲೆ ವಿಷ್ಣುವರ್ಧನನಿಗೆ ಹಲಕೂರಿನ ಕಲಿದೇವರ ನೈವೇಧ್ಯ ನಂದಾದೀವಿಗೆ ಲಾಕುಳಾಗಮಸಮಯಸಮುದ್ಧರಣ ಲಕ್ಕೋಟಿ ಮುನೀಂದ್ರ ಕಾಳಮುಖ ಸಂಪ್ರದಾಯದ ರಾಮನಾಥ ದೇವರ ಪಾದ ಆರಾಧಕ ಕಲ್ಯಾಣಶಕ್ತಿ ಪಂಡಿತರ ಪಾದಪೂಜಿಸಿ ದತ್ತಿಯನ್ನು ನೀಡಿ 'ವಂದಿಜನ ಚಿಂತಾಮಣಿ' ಎಂಬ ಬಿರುದು ಪಡೆದು ಸಾರ್ಥಕ ಜೀವನ ಪಡೆದಳು ಆಕೆಯನ್ನು ಅತ್ತಿಹಳ್ಳಿ ಶಾಶನ

ಬಮ್ಮಲದೇವಿಯ ಗುಣಮಂ
ಬಮ್ಮಲದೇವಿಯ ಸಮಸ್ತದಾನೋನ್ನತಿಯಂ
ಬಮ್ಮಲದೇವಿಯ ಶ್ರೀ
ಲಮ್ಮೆಚ್ಚಿಂತ್ಯಭುವನಯ್ನ ದಾನಚಿಂತಾಮಣಿಯಂ

ಎಂದು ಮನಬಿಚ್ಚಿ ಕೊಂಡಾಡಿದೆ. ಅತ್ತಿ ಹಳ್ಳಿಯ ಅಮೃತೇಶ್ವರ ದೇವಾಲಯಕ್ಕೆ ಅಂಗಭೋಗ ಮತ್ತು ರಂಗಭೋಗಕ್ಕೆ ಸ್ಥಾನಿಕ ಹೊಂನಜೀನ ಮಗ ಚೌಡಜೀಯನಿಗೆ 100 ಕಂಬ ಬೆದ್ದಲಭೂಮಿದಾನ ಮಾಡಿದ್ದು ಅವಳದಾನಗುಣಕ್ಕೆ ಉತ್ತಮ ನಿದರ್ಶನ.

ಮಾಚಿರಾಜನ ಮನಪ್ರಿಯೆ, ದಾನ ನಿರ್ಭರ ಭಕ್ತಿಯುಕ್ತೆ ಶಾಂತಲದೇವಿ ದಂಡನಾಯಕಿತಿ ಕೊಳತೂರಿನಲ್ಲಿ ಶಾಂತಲೇಶ್ವರ ಪ್ರತಿಷ್ಠೆ ಮಾಡಿ. ತನ್ನ ಹೆಸರಿನಲ್ಲೇ 'ಶಾಂತಸಮುದ್ರ' ಎಂಬ ತಟಾಕವನ್ನು ಸ್ಥಾಪಿಸಿ ಶಾಂತಿ ಶಕ್ತಿ ಗುರುಗಳಿಗೆ ದಾನ ಮಾಡಿದ್ದಾಳೆ.[298] ಅರಸೀಕೆರೆಯ ಮಲ್ಲಿಕಾರ್ಜುನ ಮಂಗೇಶ್ವರ ದೇವರಿಗೆ ದಾನವನ್ನು, ಚೋಳಮಹಾರಾಜನ ರಾಣಿಯಾವ ಲಕ್ಷ್ಮಾದೇವಿಯರು ದಾನವನ್ನು ಮಾಡಿದ್ದಾರೆ. ಇದನ್ನು ಶಿರಾದ ಶಾಸನ "ದೇವದ್ರುಮವ ಲಕ್ಷ್ಮಾದೇವಿಯುಮಂ ಕಮಳ ಸಂಭವಂ ತೂಗಿದೊಡಾ ದೇವದ್ರುವಕ್ಕೆ ಲಕ್ಷ್ಮಾದೇವಿ ಮಂ ಕಮಳ ಸಂಭವಂ ತೂಗಿದೊಡಾ ದೇವದ್ರುವಕ್ಕೆ ಲಕ್ಷ್ಮಾದೇವಿ ದಶಾಫಲದ ಬಿಣ್ಪಿನಿಂ ಘನವಾದಳು" ಎಂದು

---

[298] ಎ.ಕ. v, ಚನ್ನರಾಯ ಪಟ್ಟಣ, ಶಾ.ಸಂ. 166.

ತಿಳಿಸಿದೆ. ಅಷ್ಟೇ ಅಲ್ಲದೆ ತನ್ನ ರಾಜನ ಜೊತೆ ಮಲೆಯೂರಿನಲ್ಲಿ ಮಲ್ಲಿಕಾಜುನ, ಲಕ್ಷ್ಮಣೇಶ್ವರ, ಇರುಂಗೊಳೇಶ್ವರ, ಮಹದೇವೇಶ್ವರ ಮತ್ತು ಸೂರ್ಯದೇವರನ್ನು ಪ್ರತಿಷ್ಠೆ ಮಾಡಿಸಿ, ಪಂಚದೇವತೆಗಳ ನೈವೈದ್ಯ, ಅಂಗಭೋಗ, ನಂದಾದೀವಿಗೆ, ಪೂಜಾರಿ ಪರಿಚಾರಕ ವರ್ಗಕ್ಕೆ 60 ಖಂಡುಗ ಅಡಿಕೆ ತೋಟವನ್ನು ದೇವದತ್ತಿಯಾಗಿ ನೀಡಿದ್ದಾಳೆ. ಇವನ ಮತ್ತೊಬ್ಬ ರಾಣಿ ಸೀತಾದೇವಿ "ಆಶ್ರಿತ ವಿಬುಧ ಸ್ಥಾನ ಜನಸುಧೆ" ಎಂದು ಬಿರುದುಗಳಿಸಿದ್ದಳು. ಇವಳು ಹೆಂಜೇರು ಪಟ್ಟಣದಲ್ಲಿ ಸತ್ರವನ್ನು ನಡೆಸಲು ದಾನ ನೀಡಿದ್ದಾಳೆ.

ಧರ್ಮ ಎಂಬ ಪದವನ್ನು ವಿಜಯನಗರದ ಅರಸರು ವಿಶಾಲವಾದ ಅರ್ಥದಲ್ಲಿ ಗ್ರಹಿಸಿದ್ದು ಕಂಡುಬರುತ್ತದೆ, ಆದುದ್ದರಿಂದಲೇ ಕೆಲವು ವಿದ್ವಾಂಸರು ವಿಜಯನಗರ ಧರ್ಮವನ್ನು 'ಕರ್ನಾಟಕ ಧರ್ಮವೆಂತಲೂ' ಕರೆದಿದ್ದಾರೆ. ಈ ಸಾಮ್ರಾಜ್ಯವು ಮೊದಲಿಗೆ ಶೈವ ಧರ್ಮದ ಅನುಯಾಯಿಗಳಾದ ಸಂಗವು ವಂಶೀಯರ ಆಳ್ವಿಕೆಗೆ ಒಳಪಟ್ಟಿತ್ತು. ಇದರಿಂದ ಶೈವಧರ್ಮ ಸಾಮ್ರಾಜ್ಯದಲ್ಲಿ ಹೆಚ್ಚು ಪಸರಿಸಿತು. ಸಾಳುವ ಮತ್ತು ತುಲುವ ಅರಸರುಗಳು ವೈಷ್ಣವ ಧರ್ಮಿಯರಾದರೂ ಶೈವ ಧರ್ಮಕ್ಕೇನೂ ಕುಂದುಂಟಾಗಲಿಲ್ಲ.

ಶೈವಧಮದಲ್ಲೇ ಬೇರೆ–ಬೇರೆ ಕವಲುಗಳಿದ್ದವು. ಶಿವನನ್ನು ಆರಾಧಿಸುವ ಈ ಶೈವ ಪಂಥದ ಇತಿಹಾಸವು ವೇದಕ್ಕಿಂತಲೂ ಹಿಂದಕ್ಕೆ ಹೋಗುತ್ತದೆ. ಈ ಶೈವ ಧರ್ಮದ ಇತಿಹಾಸ ತತ್ವಗಳನ್ನು ಇಪ್ಪತ್ತೆಂಟು ಶೈವಾಗಮಗಳು ತಿಳಿಸುತ್ತವೆ. ಶೈವ ಧರ್ಮಕ್ಕೆ ವಿಜಯನಗರ ಕಾಲದ ರಾಣಿಯರ ಪಾಲು ಬಹು ಪ್ರಧಾನವಾಗಿತ್ತೆಂಬುದನ್ನು ಶಾಸನಾಧಾರಗಳಿಂದ ತಿಳಿಯಬಹುದಾಗಿದೆ.

ವಿಜಯನಗರವನ್ನಾಳಿದ ನಾಲ್ಕು ಮನೆತನಗಳಲ್ಲಿ ಮೊದಲನೆಯ ವಂಶವೆಂದರೆ ಸಂಗಮ ಮನೆತನ. ಇದು ಶೈವ ಧರ್ಮದ ಪ್ರತಿಬಿಂಬವೆಂದೇ ಹೆಸರಾಗಿದ್ದು ಈ ಮನೆತನದ ಅರಸರು ಶೈವ ಧರ್ಮಕ್ಕೆ ದಾನ–ದತ್ತಿಗಳನ್ನು ನೀಡಿದ್ದಾರೆ. ಅರಸರುಗಳಂತೆಯೇ ಅರಸಿಯರು ಸಹ ದಾನ ಧರ್ಮಗಳನ್ನು ನೀಡಿರುವುದು ಶಾಸನಗಳಿಂದ ತಿಳಿದು ಬರುತ್ತದೆ.

ಕ್ರಿ.ಶ. 1397ರ ಶಾಸನದಲ್ಲಿ[299] ವೀರ ಹರಿಹರನ ರಾಣಿಯಾದ ಬುಕ್ಕವ್ವೆಯು ತನ್ನ ಗುರು ಭಾಸ್ಕರ ದೇವಯ್ಯನಿಗೆ ಪುಣ್ಯವಾಗಲೆಂದು ಜಡೆಯ ಶಂಕರ ದೇವರಮುಂದೆ ಧೀಪಮಾಲೆ ಕಂಬವನ್ನು ಮಾಡಿಸಿದ್ದನ್ನು ಉಲ್ಲೇಖಿಸುತ್ತದೆ.

ರಾಮಚಂದ್ರನ ರಾಣಿ ಬುಕ್ಕಾಂಬ ಈ ರಾಮಚಂದ್ರ ಒಂದನೇ ದೇವರಾಯನ ಮಗ ಯುವರಾಜ ಇವನು ಆಂಧ್ರಪ್ರದೇಶಕ್ಕೆ ದಂಡೆತ್ತಿ ಹೋಗುವಾಗ ಮಧ್ಯೆದಲ್ಲಿ ಬರುವ ಶ್ರೀಶೈಲದಲ್ಲಿ ಈಶ್ವರ ಲಿಂಗವನ್ನು ಪ್ರತಿಷ್ಠಾಪಿಸಿದ ಆಗ ಅವನ ರಾಣಿ ಬುಕ್ಕಾಂಬಳು ಪತಿಯ ಒಪ್ಪಿಗೆಯನ್ನು ಪಡೆದು ಕಂಚಿಕುಂಟ ಎಂಬ ಗ್ರಾಮವನ್ನು 'ಬುಕ್ಕಾಪುರ' ಎಂದು ಹೆಸರಿಸಿ ಸರ್ವಮಾನ್ಯ ಅಗ್ರಹಾರವನ್ನಾಗಿ ಮಾಡಿ ಎಂಟು ಜನ ಬ್ರಾಹ್ಮಣರಿಗೆ ದಾನ ನೀಡಿದಳು.[300] ಒಂದನೇ ದೇವರಾಯನ ರಾಣಿಯಾದ ಅಂಣಲಾದೇವಿ, ತನ್ನ ಪತಿಯ ಹೆಸರಿನಲ್ಲಿ ಪಂಪಾದೇವನು ರಕ್ಷಿಸಲಿ ಎಂದು ಹಾರೈಸಿ ಹಜರಾ ರಾಮಚಂದ್ರ ದೇವರಿಗೆ ಚಿನ್ನದ ಕರಗಳನ್ನು ನೀಡಿದ್ದಾಳೆ.[301] ಕ್ರಿ.ಶ. 1416ರಲ್ಲಿ ಹಜರಾ ರಾಮಚಂದ್ರ ದೇವಾಲಯದ ಅದಿಷ್ಠಾನ ರಚನೆಯಾಗಿರಬೇಕು. ಏಕೆಂದರೆ ಈ ಅವಧಿಯ ಮುಂಚೆ ದೇವಾಲಯದ ರಚನೆ ಆಗಿರಲಿಲ್ಲ. ದೇವಾಲಯದ ಅದಿಷ್ಟಾನದಲ್ಲಿ ಶಾಸನವಿರುವುದರಿಂದ ಕ್ರಿ.ಶ 1416ಕ್ಕೆ ಈ ದೇವಾಲಯ ರಚನೆಯಾಗಿರಬೇಕು. ಈಕೆಯೇ ದೇವಾಲಯವನ್ನು ನಿರ್ಮಿಸಿ ನಂತರ ದೇವರಿಗೆ ಕರಗಳನ್ನು ನೀಡಿರಬಹುದೆಂದು ಅಭಿಪ್ರಾಯ ಪಡಬಹುದಾಗಿದೆ.[302]

2ನೇ ದೇವರಾಯನ ರಾಣಿ ಕಮಲಾದೇವಿ ತುಮಕೂರು ಜಿಲ್ಲೆಯ ಬಿದಿರಿನ ಕಲ್ಲಿನಾಥ ದೇವರಿಗೆ ಭೂಧಾನ ನೀಡಿದ್ದಾಳೆ.[303] ಶಾಸನಗಳ ಪ್ರಕಾರ 2ನೇ ದೇವರಾಯನಿಗೆ ಪೊನ್ನಲಾದೇವಿ, ಭೀಮಾದೇವಿ, ಕಾಮಲದೇವಿಯರೆಂಬ ಮೂರು ಜನ ರಾಣಿಯರಿದ್ದಂತೆ ಕಂಡುಬರುತ್ತದೆ. ಕ್ರಿ.ಶ. 1445ರ ಗೋವಿನ ಹಳ್ಳಿಯ ಶಾಸನದ ಪ್ರಕಾರ ಇಮ್ಮಡಿ ದೇವರಾಯನಿಗೆ ಶ್ರೀಬ್ಜಿಲಾದೇವಿ ಎಂಬ ಹೆಸರಿನ ರಾಣಿಯಿದ್ದು, ಈ ರಾಣಿಯು ಮಹೇಶ್ವರನಿಗೆ ಪಾರ್ವತಿ ಇದ್ದಂತೆ, ಇಂದ್ರನಿಗೆ ಶಚಿ ಇದ್ದಂತೆ,

---

[299] ಸೂರ್ಯನಾರಾಯಣ ರಾವ್ (ಅನು) ಬಾಲಸುಬ್ರಹ್ಮಣ್ಯ, **ಮರೆಯಲಾಗದ ಮಹಾಸಾಮ್ರಾಜ್ಯ ವಿಜಯನಗರ,** ಪುಟ–260, ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.2000.

[300] ಸಿ.ಎಸ್. ವಾಸುದೇವನ್, **ಹಂಪಿ ಪರಿಸರದ ಕಲೆಗಳು,** ಪುಟ– ಪ್ರಸಾರಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.2000,

[301] ದೇವರ ಕೊಂಡಾರೆಡ್ಡಿ, **ಹಂಪಿ ಶಾಸನಗಳು** (ಸಂ–3) ಪು–15, ಪ್ರಸಾರಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ. 2000.

[302] ಅದೇ,

[303] ಸರಸ್ವತಿ. ಎನ್, **The position of women During Vijayanagara Period,** P-105, Southern Printers, Mysore. 1992,

ರೂಪ–ಸೌಭಾಗ್ಯ–ಲಾವಣ್ಯಗಳಿಂದ ತಿಲೋತ್ತಮೆಯನ್ನು ಮೀರಿಸಿದವಳು ಅನಸೂಯಗಳನ್ನು ಮೀರಿಸುವಂತೆ ಪಾತಿವ್ರತ್ಯವುಳ್ಳವಳಾಗಿದ್ದಳು. ಇವಳಿಗೆ ಶ್ರೀ ಶೈಲದಲ್ಲಿನ ಮಲ್ಲಿಕಾರ್ಜುನನವರ ಪ್ರಸಾದದಿಂದ ಪ್ರೌಢದೇವಶನೆಂಬ ಮಗ ಹುಟ್ಟಿದನೆಂದು ಶಾಸನ ತಿಳಿಸುತ್ತದೆ.[304]

ಸಾಳುವ ಮನೆತನದಲ್ಲಿ ಸಾಳ್ವ ನರಸಿಂಹನ ರಾಣಿಯಾದ ಶ್ರೀ ರಂಗಾಂಬಾದೇವಿ ತನ್ನ ಅವಧಿಯಲ್ಲಿ ಸಾರ್ವಜನಿಕ ಕಾರ್ಯಕ್ರಮಗಳನ್ನು ಮಾಡುತ್ತಿದ್ದಳಲ್ಲದೆ, ಶ್ರೀರಂಗಾಂಬಾದೇವಿಯಮ್ಮ ದೇವಾಲಯಕ್ಕೆ ಕ್ರಿ.ಶ. 467 ಒಂದು ಹಳ್ಳಿಯನ್ನು ಮತ್ತು ನೀರಾವರಿ ಕಾಲುವೆಯನ್ನು ಅಗೆಯಲು ದಾನ ನೀಡಿದ್ದಾಳೆ.[305]

ತುಳುವ ರಾಣಿಯರು ವಿಜಯನಗರದ ಸಾಮ್ರಾಜ್ಯದ ಸರ್ವತೋಮುಖ ಅಭಿವೃದ್ಧಿಗೆ ಶ್ರಮಿಸಿದ್ದಾರೆ. ಬುಕ್ಕಾಂಬೆ ತುಳುವ ವಂಶದ ಪ್ರಸಿದ್ದರಾಣಿ. ಈಕೆ ತಿಮ್ಮಾಭೂಪತಿ, ಹಾಗೂ ದೇವಕಿ ಅವರ ಪುತ್ರನಾದ ಈಶ್ವರ ನಾಯಕನ ರಾಣಿ. ಬುಕ್ಕಾಂಬೆಯ ಹೆಸರಿನಲ್ಲಿ ಹೊರಡಿಸಿರುವ ದಾನ ಶಾಸನ ಹಾಗೂ ದಾನ ನೀಡಿದ ಶಾಸನಗಳಲ್ಲಿ ಈಕೆಯ ವಿವರಗಳು ತಿಳಿದು ಬರುತ್ತವೆ. ಕ್ರಿ.ಶ. 1510ರ ನರಸನಾಯಕ ಮತ್ತು ಬುಕ್ಕಾಂಬಮ್ಮ ಕಾಲ್ವಿಮುದ್ದಾನಹಳ್ಳಿಯಲ್ಲಿ ಭೂಮಿಯನ್ನು ಕೊಂಡು ವಿರುಪಾಕ್ಷ ದೇವರ ದಿನನಿತ್ಯದ ಸೇವೆಗೆ ಹಂಪೆಯ ತಿರುಮಲ ಭಟ್ಟರ ಮಗ ಸಾಯಭಟ್ಟರಿಗೆ ದಾನವಾಗಿ ಕೊಟ್ಟಳು ಎಂದು ತಿಳಿಸುತ್ತದೆ.[306] ಅಂತೆಯೇ ವಿರುಪಾಕ್ಷ ದೇವರ ನೈವೇದ್ಯಕ್ಕೆ ಭೂಮಿ ದಾನ ಮಾಡಿದ್ದಾಳೆ.[307]

ಶ್ರೀಕೃಷ್ಣದೇವರಾಯನ ತಾಯಿಯಾದ ನಾಗಲಾದೇವಿ ತುಳುವ ಮನೆತನದಲ್ಲೇ ಪ್ರಮುಖಳು. ಈಕೆ ಅಸಮಾನ್ಯ ಸ್ಥಾನ–ಮಾನ ಹೊಂದಿರುವುದಕ್ಕೆ ಆಕೆಯ ಹೆಸರಿನಲ್ಲಿ ನಾಗಸಮುದ್ರಕೆರೆ, ನಾಗಪಟ್ಟಣ, ನಾಗೇಶ್ವರ ದೇವಾಲಯ, ನಾಗಲಾದೇವಿಪುರ ಎಂಬ ಗ್ರಾಮಗಳೇ ಸಾಕ್ಷಿ. ಕೃಷ್ಣದೇವರಾಯ ತನ್ನ ತಾಯಿಗೆ ಪುಣ್ಯವಾಗಲೆಂದೇ ತಾಯಿಯ ಹೆಸರಿನಲ್ಲಿ ಸಾಕಷ್ಟು ದಾನ–ಧರ್ಮಗಳನ್ನು, ಕೊಡುಗೆಗಳನ್ನು ನೀಡಿದ್ದಾನೆ. ನಾಗಲಾದೇವಿಯು ನೇರವಾಗಿ ಯಾವುದೇ ದಾನದತ್ತಿ

---

304 ಡಾ.ಡಿ.ವಿ. ಪರಶಿವಮೂರ್ತಿ, **ಪ್ರೌಢದೇವರಾಯನ ಶಾಸನಗಳು** ಪುಟ–23, ಹಂಪಿ, ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. 2007.

305 ಡಾ.ಎ.ವಿ. ವೆಂಕಟರತ್ನಂ, **ವಿಜಯನಗರ ಸಾಮ್ರಾಜ್ಯದಲ್ಲಿ ಸ್ಥಳೀಯ ಸರ್ಕಾರ** ಪುಟ–167.

306 ಸುಮನ. ಆರ್, **ವಿಜಯನಗರದ ತುಳುವ ಅರಸರ ರಾಣಿಯರು : ಚಾರಿತ್ರಿಕ ಅಧ್ಯಯನ** (ಎಂ.ಫಿಲ್ ನಿಬಂಧ) ಪ–39. ಹಂಪಿ. 2007.

307 ಅದೇ.

ನೀಡಿದ ಬಗೆಯಾಗಲೀ, ಅಥವಾ ಇತರ ಕ್ಷೇತ್ರಗಳಲ್ಲಿ ಪಾಲ್ಗೊಂಡ ಬಗೆಯಾಗಲೀ ಕಂಡುಬರುವುದಿಲ್ಲ. ಇದರ ಉದ್ದೇಶ ನರಸನಾಯಕನು ಅಂದರೆ ನಾಗಲಾದೇವಿಯ ಪತಿಯು ಕ್ರಿ.ಶ. 1505ರ ಸುಮಾರಿಗೆ ಮರಣ ಹೊಂದಿದ್ದು ನಾಗಲಾದೇವಿ ಆಗಿನ ಸಂಪ್ರದಾಯದಂತೆ ಸ್ತ್ರೀಯರು ಗಂಡ ಸತ್ತನಂತರ ಅಮಂಗಲೆಯರೆಂದು ಭಾವಿಸಲಾಗುತ್ತಿದ್ದರಿಂದ ಈಕೆ ನೇರವಾಗಿ ಯಾವುದೇ ಕ್ಷೇತ್ರದಲ್ಲಿ ಭಾಗವಹಿಸಲಿಲ್ಲ. ಇಲ್ಲದಿದ್ದರೆ ಈಕೆ ಬಹುಬೇಗನೇ ಮರಣ ಇಲ್ಲವೇ ಸತಿಪದ್ಧತಿಯನ್ನು ಅನುಸರಿಸಿರಲೇಬೇಕು. ಎನ್ನುವ ಹಲವು ಪ್ರಶ್ನೆಗಳು ಬರುತ್ತವೆ.

ನೇರವಾಗಿ ಧಾರ್ಮಿಕ ಕ್ಷೇತ್ರದಲ್ಲಿ ಗುರುತಿಸಿಕೊಂಡ ರಾಣಿಯರೆಂದರೆ ತಿರುಮಲಾದೇವಿ, ಚಿನ್ನಾದೇವಿ, ವರದದೇವಿ, ಓದುವ ತಿರುಮಲಮ್ಮರವರು ಬುಕ್ಕಾಜಮ್ಮಳ ಹೆಸರಿನಲ್ಲಿ ವಿರುಪಾಕ್ಷ ದೇವರ ದೇವಸ್ಥಾನದ ಪಶ್ಚಿಮಕ್ಕೆ ಸೋಮಣ್ಣನಾಯಕನ ಗೋಪುರದಲ್ಲಿ ಬುಕ್ಕೇಶ್ವರ ದೇವರ ಸಿಂಹಾಸನವನ್ನು ಸ್ಥಾಪಿಸಿ ದೇವರ ಸೇವೆಗೆ ದೊಂಡವಡೆ ಗ್ರಾಮವನ್ನು ನೀಡಿದ ಅಂಶ ತಿಳಿದು ಬರುತ್ತದೆ.[308] ಇದನ್ನು ಮೊಮ್ಮಗನಾದ ಅಚ್ಯುತರಾಯನು ಹಾಕಿಸಿದನು. ಇದರಿಂದ ಹಿರಿಯರ ಮೇಲೆ ಇರುವ ಭಕ್ತಿಯನ್ನು ತಿಳಿಯಪಡಿಸುತ್ತದೆ.

ತಿರುಮಲ ದೇವಿಯು ಕ್ರಿ.ಶ. 1518ರಲ್ಲಿ ವಿಜಯನಗರದ ಬಳಿ ಇದ್ದ ಕುಮ್ಮರ ಗುಂಟೆ ಎಂಬ ಭೂಮಿಯನ್ನು ವಿಜಯನಗರದ ಆ ಜನ ಗಿರಿಯ ಕರಿಯ ತಿರುವೆಂಗಳನಾಥನಿಗೆ ಭೂದಾನ ನೀಡುವುದರ ಮೂಲಕ ತನ್ನ ಮಗನಾದ ತಿರುಮಲ ಮಹಾರಾಯನಿಗೆ ಪುಣ್ಯವಾಗಬೇಕೆಂದು ನೀಡಿರುವುದು ಸ್ಪಷ್ಟವಾಗಿರುತ್ತದೆ.[309]

ಕ್ರಿ.ಶ. 1515ರ ಅಕ್ಟೋಬರ್ 25 ರಂದು ಅಮರೇಶ್ವರ ದೇವರ ಸನ್ನಿಧಿಯಲ್ಲಿ ಕೃಷ್ಣದೇವರಾಯನ ರಾಣಿಯರಾದ ತಿರುಮಲಾದೇವಿ ಮತ್ತು ಚಿನ್ನಾದೇವಿಯವರು ತುಲಾಭಾರ ಮಾಡಿಸಿದ್ದಾರೆ. ಇದು ಕೃಷ್ಣದೇವರಾಯ ಒರಿಸ್ಸಾವನ್ನು ಗೆದ್ದ ನೆನಪಿಗಾಗಿ ಮಾಡಿಸಿದ ದೇವಕಾರ್ಯವಾಗಿದೆ. ಹಾಗೆಯೇ ವಿಠ್ಠಲ ದೇವರಿಗೆ ಗೋಪುರವನ್ನು ನಿರ್ಮಿಸಿ ದೇವರ ನೈವೇಧ್ಯ ಆರೋಗಣೆಗೆ ಚಿನ್ನದ ಹರಿವಾಣ, ಬಣ್ಣ, ಬೆಳ್ಳಿಯ ನೀಲಾಂಜನ ಹಲಗೆ 9 ಹಿರಿಯ ಆರತಿ,

---

[308] ಚನ್ನ ಬಸಪ್ಪ, : **ವಿನೋದಾ ಪಾಟಿಲ್, ಬಳ್ಳಾರಿ ಜಿಲ್ಲೆಯ ಶಾಸನಗಳು**, ಪುಟ–29, ಪ್ರಾಚ್ಯವಸ್ತು ಸಂಗ್ರಹಾಲಯಗಳ ನಿರ್ದೇಶನಲಯ, ಮೈಸೂರು. 1996.

[309] ಡಾ. ದೇವರ ಕೊಂಡರೆಡ್ಡಿ, **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ–(3)** ಪು–230, ಹಂಪಿ ಶಾಸನಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ. 2000.

8 ಪುರುಷಾಮೃಗದ ಆರತಿ, 3 ನಾಗರತಿ, 1 ಧೂಪಾರತಿ, 1 ಖಡಬತ್ತಿ, 2 ಪ್ರತುಮೆ ಆರತಿಗಳನ್ನು ದಾನಮಾಡಿದ್ದಾರೆ.

ಅಂತೆಯೇ ಚಿನ್ನಾದೇವಿ, ಕ್ರಿ.ಶ. 1518ರ ತಾಡಪತ್ರಿ ತಾಲ್ಲೂಕಿನ ಶಿಲಾಶಾಸನದ ಪ್ರಕಾರ ದಾನನೀಡಿದ್ದಾಳೆ.[310] ಅಷ್ಟೇ ಅಲ್ಲದೇ ಚಿನ್ನಾದೇವಿ ಹಲವಾರು ಭಾರಿ ತೀರ್ಥಯಾತ್ರೆಗಳನ್ನು ಹಾಗೆಯೇ ಹಲವಾರು ದೇವಾಲಯಗಳಿಗೆ ದಾನ-ದತ್ತಿ ನೀಡಿದ್ದಾಳೆ. ವೈಷ್ಣವಧರ್ಮ ಶ್ರೀಕೃಷ್ಣದೇವರಾಯನ ಕಾಲಕ್ಕಾಗಲೇ ಪ್ರಮುಖ ಧರ್ಮವಾಗಿದ್ದು ಚಿನ್ನಾದೇವಿ, ತನ್ನ (ಅಕ್ಕಳ) ತಿರುಮಲಾದೇವಿಯರೊಂದಿಗೆ 2 ಬಾರಿ ತಿರುಮಲೆ ಯಾತ್ರೆಯನ್ನು ಕೈಗೊಂಡಿರುತ್ತಾರೆ. ರಾಣಿಯು ಕ್ರಿ.ಶ. 1513ರಲ್ಲಿ[311] ಮೊದಲನೇ ಬಾರಿ ತಿರುಮಲ ದೇವರ ದರ್ಶನ ಪಡೆದರು. ದೇವರಿಗೆ ನವರತ್ನ ಖಚಿತ ಕಿರೀಟವನ್ನು 25 ಬೆಳ್ಳಿಯ ಆರತಿಯ ತಟ್ಟೆಗಳನ್ನು ಕಾಣಿಕೆಯಾಗಿ ನೀಡಿದರೆ ರಾಣಿಯರು ಬಂಗಾರದ ಹಾಲಿನ ಬಟ್ಟಲನ್ನು ಈ ಸಂದರ್ಭದಲ್ಲಿ ದಾನ ನೀಡಿದರು. ಇವುಗಳ ಜೊತೆಗೆ ದೇವರಿಗೆ ತಟ್ಟೆ, ಕಂಠೀಹಾರ, ಪದಕಹಾರ, ಗ್ರಾಮ ಇತ್ಯಾದಿಗಳನ್ನು ಅರ್ಪಿಸಿದರು. ಅಚ್ಯುತ ರಾಯನ ರಾಣಿ ವರದಾಂಬಿಕಾ ಅದೇ ದೇವರ ಪೊಂಗಲ್ ನೈವೇದ್ಯಕ್ಕಾಗಿ ಆರು ಹಳ್ಳಿಗಳನ್ನು ಕಾಣಿಕೆಯಾಗಿ ನೀಡಿದಳು. ಎಂಬುದು ತಿರುಮಲೈ ತಿರುಪತಿ ದೇವಸ್ಥಾನದ ದಾಖಲೆ ಹಾಗೂ ಇತರೆ ಶಾಸನಗಳಿಂದ ಗೊತ್ತಾಗುತ್ತದೆ.[312] ಕ್ರಿ.ಶ. 1518ರ ಇನ್ನೊಂದು ಶಾಸನದಲ್ಲಿ ತಿರುಮಲಾದೇವಿ ಅಮ್ಮನವರು ಕುಮ್ಮರಗುಂಟೆ ಎಂಬ ಭೂಮಿಯನ್ನು ವಿಜಯನಗರದ ಅಂಜನಗಿರಿಯ ಕರಿಯ ತಿರುವೆಂಗಳನಾಥನಿಗೆ ತಿರಮಲ ಮಹಾರಾಯರಿಗೆ ಪುಣ್ಯವಾಗಬೇಕೆಂದು ವಿಠಲೇಶ್ವರ ದೇವರ ಸನ್ನಿಧಿಯಲ್ಲಿ ದಾನ ನೀಡಿರುತ್ತಾಳೆ.

ಕ್ರಿ.ಶ. 1514ರಲ್ಲಿ ಕೃಷ್ಣದೇವರಾಯನು ಗಜಪತಿಯನ್ನು ಸೋಲಿಸಿದ ನೆನಪಿಗಾಗಿ ತಿರುವೇಂಗಳನಾಥ ದೇವರ ದರ್ಶನ ಮಾಡಿದನು. ಆಗ ಜೊತೆಯಲ್ಲಿದ್ದ ಚಿನ್ನಾದೇವಿ ದೇವರಿಗೆ

---

310 ಸುಮನ. ಆರ್. **ವಿಜಯನಗರದ ತುಳುವ ಅರಸರ ರಾಣಿಯರು** : ಚಾರಿತ್ರಿಕ ಅಧ್ಯಯನ (ಎಂ.ಫಿಲ್ ನಿಬಂಧ) ಪು-52, ಹಂಪಿ.2007.

311 **ತಿರುಪತಿ ತಿರುಮಲ ದೇವಸ್ಥಾನ ಇನ್ಸ್‌ಪ್ಷನ್ಸ್ ಆಫ್ ಕೃಷ್ಣರಾಯಾಸ್ ಟೈಮ್ಸ್ ಎಪಿಗ್ರಫಿಕಲ್ ಸೀರಿಸ್,** ಸಂಪುಟ-3 ನಂ. 32-59.

312 ಎ.ಕ. 12, ಗುಬ್ಬಿ, 56, ಮತ್ತು **ತಿರುಪತಿ ತಿರುಮಲ ದೇವಸ್ಥಾನ ಇನ್ಸ್‌ಕ್ರಿಪ್ಷನ್ಸ್,** ಸಂಪುಟ 4, ಪು-59, ಸಂಪುಟ-3, ಪು-164-171, ಮತ್ತು ಸೌತ್ ಇಂಡಿಯನ್ ಇನ್ಸ್‌ಕ್ರಿಪ್ಷನ್ಸ್, ಸಂ.4 ಪುಟ 295.

ಅನೇಕ ಆಭರಣಗಳನ್ನು, ದೇವರ ಸೇವೆಗೆ ನೀಡಿ ಬ್ರಾಹ್ಮಣರಿಗೆ ಸತ್ರದಲ್ಲಿ ಭೋಜನಕ್ಕೆ ತೋಂಟ ಮಂಡಳದ ಮಡಿವಲ್ಲೂರು ಗ್ರಾಮಗಳನ್ನು ದತ್ತಿಯಾಗಿ ನೀಡಿದುದನ್ನು ತಿಳಿಸುತ್ತದೆ.[313]

ಕ್ರಿ.ಶ. 1505 ರ ಜುಲೈ 23 ರಂದು ಚಂದ್ರಗ್ರಹಣವಿದ್ದು ಪತಿ ಕೃಷ್ಣರಾಯನು ಪೂರ್ವ ದಿಗ್ವಿಜಯ ಯಾತ್ರೆಯನ್ನು ಒಳಗೊಂಡಿದ್ದನು. ಈ ನೆನಪಿಗಾಗಿ ರಾಣಿ ಚಿನ್ನಾದೇವಿಯು ಧರಣಿ ಕೋಟೆ ಅಮರೇಶ್ವರದ ದೇವರಿಗೆ ಪುಷ್ಪಮಾಲೆ, ರನ್ನ, ಕನಕ, ದಾನಗಳನ್ನು ತಿರುಮಲಾದೇವಿಯೊಂದಿಗೆ ಅರ್ಪಿಸಿದ್ದಾಳೆ.[314] ಅಂತೆಯೇ ರಾಯಚೂರು ದಾಳಿಯ ತರುವಾಯ, ಕೂಡಲ ಸಂಗಮಕ್ಕೆ ಬಂದು, ತನ್ನ ರಾನಿ ಚಿನ್ನಾದೇವಿಯಿಂದ ಗೋ–ದಾನವನ್ನು ರಾಣಿ ತಿರುಮಲಾದೇವಿಯರ ಕನಕ ದಾನವನ್ನು ಮಾಡಿಸಿದನು.[315]

ಮೇಲಿನ ದಾನಗಳನ್ನು ಮತ್ತು ದಾನ ನೀಡಿರುವ ಸಮಯವನ್ನು ಗಮನಿಸಿದರೆ ದಾನಗಳೆಲ್ಲವೂ ದಿಗ್ವಿಜಯಗಳ ನೆನಪಿಗಾಗಿ ಮಾಡಿದಂತಹ ದಾನಗಳಾಗಿವೆ. ಇಲ್ಲಿ ಚಿನ್ನಾದೇವಿ ಮತ್ತು ತಿರುಮಲಾದೇವಿಯವರು ಇಬ್ಬರೂ ಸಹ ಹೊಂದಾಣಿಕೆಯಿಂದ ದಾನ ನೀಡಿ ಲೋಕ ಕಾರ್ಯಗಳನ್ನು ಮಾಡಿದ್ದಾರೆ.

ಕೃಷ್ಣದೇವರಾಯ ತನ್ನ ತಾಯಿಯ ಹೆಸರಿನಲ್ಲಿ ನಾಗಲಾದೇವಿ ಪಟ್ಟಣವನ್ನು ಹಿರಿಯ ರಾಣಿಯ ಹೆಸರಿನಲ್ಲಿ ತಿರುಮಲಾದೇವಿ ಪಟ್ಟಣವನ್ನು ನಿರ್ಮಿಸಿದನೆಂದು ತಿಳಿದು ಬರುತ್ತದೆ. ಫೆಯಾಸ್ ಕೊಡುವ ವಿವರಣೆಯನ್ನು ಗಮನಿಸಿದರೆ ದ್ವಂದ್ವತೆ ಎದ್ದು ಕಾಣುತ್ತದೆ. ಕ್ರಿ.ಶ. 1513ರ ವೇಳೆಗಾಗಲೇ ಕೃಷ್ಣರಾಯನು ತನ್ನ ವಾರಂಗನೆ ಪತ್ನಿಯಾದ ಚಿನ್ನಾದೇವಿಯ ಹೆಸರಿನಲ್ಲಿ ತಿರುಮಲಾದೇವಿಯ ಪಟ್ಟಣದ ಪೂರ್ವಕ್ಕೆ ನಗರವೊಂದನ್ನು ನಿರ್ಮಿಸಿ ನಾಗಲಾಪುರವೆಂದು ಕರೆದನು. ನ್ಯೂನಿಜ್ ಸಹ ಗಚ್ಚು ಗಾರೆಗಳಿಂದ ಕಟ್ಟಿದ ಮನೆಗಳು ಉದ್ದ ವಿಶಾಲ ರಸ್ತೆ, ನಗರ ಸುತ್ತಿ ಗೋಡೆಯೊಂದನ್ನು ಅರಮನೆಯನ್ನು ಕಟ್ಟಿಕೊಳ್ಳುವಂತೆ ಆಯ್ಕೆ ಮಾಡಿದ ಅದನ್ನೇ

---

313 ಡಾ. ದೇವರ ಕೊಂಡಾರೆಡ್ಡಿ, **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ** (05), ಪು–270, ಹಂಪಿ ಶಾಸನಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ. 2000.

314 ಅದೇ, ಪು–266,

315 ಅದೇ., ಶಾಸನ ಸಂಪುಟ 7, ಪು XXXVI – 243.

ನಾಗಲಾಪುರವೆಂದು ಕರೆದನು. ಇಲ್ಲಿ ನ್ಯೂನಿಜ್, ಫೆಯಾಸ್‌ರವರು[316] ಗೊಂದಲ ಮೂಡಿಸುತ್ತಾರೆ. ಆದರೆ ಕ್ರಿ.ಶ. 1513ರ ಸಂಕ್ಲಾಪುರದ ಶಾಸನವು ಸಂಕ್ಲಾಪುರದ ಪಶ್ಚಿಮಕ್ಕೆ ನಾಗಲಾಪುರವಿತ್ತೆಂದು ತಿಳಿಸುತ್ತಾನೆ.[317] ಕೃಷ್ಣರಾಯನು ಹಿರಿ ಜತ್ತಿಗ ಗ್ರಾಮ ಮತ್ತು ಪರಿಸರದ ನಾಲ್ಕು ಉಪಗ್ರಾಮಗಳನ್ನು ಸೇರಿ ಅದಕ್ಕೆ ಚಿನ್ನಾದೇವಿ ಪುರವೆಂದು ಹೆಸರಿಟ್ಟು ತನ್ನ ಅಚ್ಚು ಮೆಚ್ಚಿನ ರಾಣಿಯಾದ ಚಿನ್ನಾದೇವಿಯ ಹೆಸರಿನಲ್ಲಿ ದಾನಮಾಡಿದನು. ಇದನ್ನು ನಾಗಮಂಗಲ ತಾಲ್ಲೂಕಿನ 1512ರ ದೊಡ್ಡ ಜಾತಕ ತಾಮ್ರಶಾಸನ ತಿಳಿಸುತ್ತದೆ.[318]

16ನೇ ಶತಮಾನದ ಪ್ರಾರಂಭದಲ್ಲಿ ಹೊರಡಿಸಿದ ಶಿಲಾ ಶಾಸನವು ಈ ಭಾಗವನ್ನು **'ಚಿಕ್ಕವಾಡಿ'** ಎಂದು ಕರೆಯಲಾಗುತ್ತದೆ. ಆರಂಭದಲ್ಲಿ **'ಚಿನ್ನಾದೇವಿವಾಡಾ'** ಆಗಿದ್ದು ಕಾಲಕ್ರಮೇಣ ಜನರ ಉಚ್ಚಾರಣೆಯಲ್ಲಿ **'ಚಿನ್ನದೇವಿವಾಡ'** ಚಿಕ್ಕದೇವವಾಡ, ಚಿಕ್ಕವಾಡ ಚಿಕ್ಕವಾಡಿಯಾಗಿ ಮಾರ್ಪಾಟಾಗಿರಬೇಕು. ಈಗ ಇದು ಚಿತ್ತವಾಡ್ಗಿಯಾಗಿ ಉಳಿದು ಬಂದಿದೆ. ಇದು ಹಿರಿಯರಾಣಿಗೆ ನೀಡಿದ ಮರ್ಯಾದೆಯನ್ನು ಚಿನ್ನಾದೇವಿಗೂ ನೀಡಿರುವುದು ಹೆಚ್ಚು ಔಚಿತ್ಯಪೂರ್ಣವಾಗಿದೆ.

ಕೃಷ್ಣದೇವರಾಯ ಗುಲ್ಬರ್ಗವನ್ನು ವಶಪಡಿಸಿಕೊಂಡ ನಂತರ ಆದಿಲ್‌ಶಾಹಿಗಳು ವಿಜಯನಗರವನ್ನು ಎದುರಿಸಲು ಶಕ್ತಿಯನ್ನು ಕಳೆದುಕೊಂಡಂತಹ ಸಂದರ್ಭದಲ್ಲಿ ಕ್ರಿ.ಶ. 1521ರಲ್ಲಿ ಕೃಷ್ಣದೇವರಾಯನು ತಿರುಪತಿಯ ತಿರುಮಲ ಭೇಟಿಯ ಸಂದರ್ಭದಲ್ಲಿ ತನ್ನ ಹಾಗೂ ತನ್ನ ರಾಣಿಯರು ಶ್ರೀ ವೆಂಕಟೇಶ್ವರನ ಕರುಣೆಗೆ ಸದಾ ಕೃತಜ್ಞರಾಗಿರುವುದಾಗಿ ಹಾಗೂ ಅವರು ದೇವರ ಸೇವೆ ಗೈಯುತ್ತಿರುವುದನ್ನು ಸಾಂಕೇತಿಕವಾಗಿ ನಿರೂಪಿಸಲು. ಕೃಷ್ಣದೇವರಾಯನು ತನ್ನ ರಾಣಿಯರಾದ ಚಿನ್ನಾದೇವಿ ಮತ್ತು ತಿರುಮಲ ದೇವಿಯರ ಕಂಚಿನ ಪ್ರತಿಮೆಗಳನ್ನು ತಿರುಪತಿಯ ದೇವಾಲಯದಲ್ಲಿ ನಿಲ್ಲಿಸಿದನು.[319]

---

316 ಬಿ.ಎ. ವಿವೇಕ ರೈ, 2010, **ಪ್ರವಾಸಿ ಕಂಡ ವಿಜಯನಗರ**, ಪು–164, ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ ಮತ್ತು ಸುಮನ ಆರ್. 2007, ವಿಜಯನಗರದ ತುಳುವ ಅರಸರ ರಾಣಿಯರು, ಚಾರಿತ್ರಿಕ ಅಧ್ಯಯನ, ಪುಟ–55, ಹಂಪಿ, ಕನ್ನಡ ವಿಶ್ವವಿದ್ಯಾಲಯ,

317 ಅದೇ,

318 ಎಚ್, ತುಕಾರಾಮ್, **ಹೊಸಪೇಟೆ ಚಾರಿತ್ರಿಕ ವಿವೇಚನ ಐತಿಹ್ಯ ಪರಿಶೀಲನೆ**, ಪುಟ–8, ಶರಣರ ಸುವಾಸಿನ ಬಳಗ, ಹೊಸಪೇಟೆ. 1997.

319 ಎಸ್.ಕೃಷ್ಣಸ್ವಾಮಿ ಐಯ್ಯಂಗಾರ್, History of Thirupathi (ಸಂ. 2) ಪು–111. 1941.

ಅಚ್ಯುತರಾಯನಿಗೆ ವರದಾದೇವಿಯೆಂಬ ರಾಣಿಯಿದ್ದುದ್ದನ್ನು ಸಿವೆಲ್ ಅನುಮೋದಿಸಿರುವಂತೆ, ಕಾಂಚೀವರಮ್‌ನಲ್ಲಿನ ಶಾಸನವೊಂದು ತಿಳಿಯಪಡಿಸುತ್ತದೆ.[320] ಅಚ್ಯುತರಾಯ ವರದಾದೇವಿಗೆ ವಿಶೇಷವಾದ ಸ್ಥಾನಮಾನ ನೀಡಿದನೆಂದೂ ತಿಳಿದು ಬರುತ್ತದೆ. ಅಚ್ಯುತರಾಯ ಬಾಲಕೃಷ್ಣದೇವಾಲಯಕ್ಕೆ ಗೋ ದ್ವಾದಶಿಯ ದಿನದಂದು ಕೃಷ್ಣಪುರಪೇಟೆಯ ವರಮಾನವಾದ 800 ಗದ್ಯಾಣಗಳನ್ನು ಸಮರ್ಪಿಸಿದ್ದಾರೆ. ರಾಣಿ ವರದಾದೇವಿ ಅರಿಯನು ದೇವರ ಅವಸರ ಪೂಜೆಗೆ 3840 ಚಕ್ರ ಗದ್ಯಾಣಗಳನ್ನು ದತ್ತಿ ನೀಡಿದ್ದಳು. ಎಂಬುದಾಗಿ ತಿಳಿದು ಬರುತ್ತದೆ.[321] ಅದೇ ರೀತಿ ಬಾಲಕೃಷ್ಣ ದೇವರಿಗೆ ಒಂದು ದಿನಕ್ಕೆ 9 ಚಕ್ರಗದ್ಯಾಣದ ಲೆಕ್ಕದಲ್ಲಿ ವರ್ಷಕ್ಕೆ 3240 ಚಕ್ರ ಗದ್ಯಾಣಗಳನ್ನು ನೀಡಲಾಯಿತು. ಬಾಲಕೃಷ್ಣ ದೇವರ ಚಿನ್ನದ ಉಯ್ಯಾಲೆಯ ತಿರುನಾಳು (ಹಬ್ಬದಿನ), ಪರ್ವದ ದಿನ 1ಕ್ಕೆ 300 ಚಕ್ರ ಗದ್ಯಾಣ ಸೇರಿ ಒಟ್ಟು 3840 ಚಕ್ರ ಗದ್ಯಾಣವನ್ನು ನೀಡಿ ಪೂಜಾ ಪ್ರಸಾದವನ್ನು ಪಂಚನಾಥ, ಪರದೇಸಿ ಶ್ರೀ ವೈಷ್ಣವರಿಗೆ ನೀಡಬೇಕೆಂದು ತಿಳಿಸುತ್ತಾಳೆ. ಅಚ್ಯುತರಾಯ ರಾಜಕೀಯ ದಿಗ್ವಿಜಯಗಳಿಸಿದಾಗ ಕ್ರಿ.ಶ. 1532ರ ವಿಜಯದ ಸವಿನೆನಪಿಗಾಗಿ ವರದರಾಜದೇವಿ ಅಮ್ಮ ಪತ್ರ ವೆಂಕಟಾದ್ರಿಯವರು ವರದರಾಜ ದೇವರ ಸನ್ನಿದಿಗೆ ಭೇಟಿ ನೀಡಿ ತುಲಾಪುರುಷ ಮಹಾದಾನ ನೆರೇರಿಸಿ, ದೇವರಿಗೆ ಚರವು, ಪುಳಿಗಾವು, ಸೀತಾಂಬ್ರ, ಪದಕ, ಪಟ್ಟೆ ಅಷ್ಟೇ ಅಲ್ಲದೆ ಹಲವು ಗ್ರಾಮಗಳನ್ನು ದಾನ ನೀಡಿದ ಬಗ್ಗೆ ಶಾಸನ ಉಲ್ಲೇಖಿಸಿದೆ.[322] ವರದ ದೇವಿಯೂ ಸಹ ಹಲವಾರು ಧಾರ್ಮಿಕ ಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳುತ್ತಿದ್ದರೆಂಬುದಕ್ಕೆ ಇವು ಸ್ಪಷ್ಟಪಡಿಸುತ್ತವೆ.

ಕ್ರಿ.ಶ. 1712ರ ಒಂದು ಶಾಸನ ಬಾಗಳಿಯ ಹರಿಯಮ್ಮಾಜಿಯ ಕೊಟ್ಟೂರು ಬಸವೇಶ್ವರ ದೇವರಿಗೆ ಎಥಿನಹಾಳ ಗ್ರಾಮವನ್ನು ದಾನ ನೀಡಿದ್ದನ್ನು ಉಲ್ಲೇಖಿಸುತ್ತದೆ. ಅಣ್ಣಲಾದೇವಿ ರಾಮಚಂದ್ರ ದೇವರಿಗೆ ಚಿನ್ನದ ಹರಿವಾಣ ಮತ್ತು ಬಟ್ಟಲನ್ನು ಸಮರ್ಪಿಸಿ ದಾನಕಾರ್ಯವನ್ನು ಮಾಡಿದ್ದಾಳೆ.

ವಿಜಯನಗರದ ಅರಮನೆ ಪ್ರದೇಶದಿಂದ ಪೂರ್ವಕ್ಕಿರುವ ಅರ್ದೆಗೆಮಾ ಪಟ್ಟಣ ಎಂದೂ ಪುರಾತತ್ವಜ್ಞರು ಇಂದಿನ ಕಮಲಾಪುರದಿಂದ ಹಂಪಿ ಪವರ್‌ಕಾಲೋನಿಗೆ ಹೋಗುವ ದಾರಿಯಲ್ಲಿರುವ ಪಟ್ಟಾಭಿರಾಮ ದೇವಾಲಯದ ಸುತ್ತಮುತ್ತಲ ಪ್ರದೇಶವನ್ನು ವಿಜಯನಗರ ಕಾಲದ

---

[320] ದೇವರ ಕೊಂಡಾರೆಡ್ಡಿ, **ಕನ್ನಡ ವಿಶ್ವವಿದ್ಯಾಲಯ, ಹಂಪಿ ಶಾಸನಗಳು,** ಸಂಪುಟ–1, ಶಾ. ಸಂಖ್ಯೆ 77, ಕನ್ನಡ ವಿಶ್ವವಿದ್ಯಾಲಯ, ಹಂಪಿ .2000

[321] ದೇವರ ಕೊಂಡಾರೆಡ್ಡಿ, **ತಮಿಳು ನಾಡಿನ ಕನ್ನಡ ಶಾಸನಗಳು** ಸಂ.4 ಪುಟ–21, 25 ಕನ್ನಡ ವಿಶ್ವವಿದ್ಯಾಲಯ, ಹಂಪಿ. 2000.

[322] ಎಂ.ವಿ. ಪದ್ಮ, **ವಿಜಯನಗರದ ಅಧ್ಯಯನ** ಸಂ.1, ಪು–106.

ವರದರಾಜಮ್ಮನ ಪಟ್ಟಣ ಎಂದು ಗುರುತಿಸಿದ್ದಾರೆ. ಅಚ್ಯುತರಾಯ ತನ್ನ ಪ್ರಧಾನ ರಾಣಿ ವರದಾಂಬ ಅಥವಾ ವರದರಾಜಮ್ಮಳ ಹೆಸರಿನಲ್ಲಿ ವರದರಾಜಮ್ಮನ ಪಟ್ಟಣವನ್ನು ನಿರ್ಮಿಸಿದ್ದಾನೆ. ಈ ಪ್ರದೇಶದಲ್ಲಿ ದೊರೆತ ಶಾಸನಗಳು ವರದಾದೇವಿ ಅಮ್ಮನವರ ಪಟ್ಟಣ ವರದಾಜಂ ಮನ ಪಟ್ಟಣ ಮತ್ತು ವರದಾಜಿಯಮ್ಮನ ಪಟ್ಟಣ ಎಂದು ಉಲ್ಲೇಖಿಸಿ ಅಲ್ಲಿನ ದೇವಾಲಯಗಳನ್ನು ಹೆಸರಿಸುತ್ತವೆ.

ವರದರಾಜಮ್ಮನ ಹೆಸರಿನಲ್ಲಿ ಆಕೆಯ ತವರು ಪಾಂಡ್ಯ ರಾಜ್ಯಕ್ಕೆ ಹೋಗುವ ಮಾರ್ಗದಲ್ಲಿ ಅಂದರೆ ಪೆನುಗೊಂಡ ಬಾಗಿಲ ಬಳಿ ವರದರಾಜಮ್ಮನ ಪಟ್ಟಣವನ್ನು ನಿರ್ಮಿಸಿರಬೇಕೆಂದು ಸಿ. ಮಹದೇವ ಅಭಿಪ್ರಾಯ ಪಡುತ್ತಾರೆ. ಇದಕ್ಕೆ ಶಾಸನಾಧಾರವಾಗಿ ಕ್ರಿ.ಶ. 1540ರಲ್ಲಿ ಪೆನುಗೊಂಡ ಬಾಗಿಲಿನ ಹತ್ತಿರವಿರುವ ವರದರಾಜಮ್ಮನ ಪಟ್ಟಣವನ್ನು ಅಚ್ಯುತದೇವರಾಯನ ರಾಣಿ ವರದಾಜನಮ್ಮನ ಹೆಸರಿನಲ್ಲಿ ಕಟ್ಟಲಾಗಿದೆ. ಇಲ್ಲಿ ತಿಮ್ಮರಾಜು ರಘುನಾಥ ದೇವಸ್ಥಾನವನ್ನು ಕಟ್ಟಿಸಿದನು ಎಂದು ತಿಳಿಸುತ್ತದೆ.[323] ಇದರಿಂದಾಗಿ ವರದರಾಜಮ್ಮನ ಈ ಪಟ್ಟಣವು ಪೆನುಗೊಂಡ ದ್ವಾರದ ಬಳಿ ಇರುವುದೇ ಎಂದು ಊಹಿಸಬಹುದು.

ರಾಬರ್ಟ್‌ಸಿವೆಲ್ ಪ್ರಕಾರ ಅಚ್ಯುತರಾಯನು ಯಾವುದೇ ಊರಿಗೆ ಪ್ರಯಾಣಿಸುವಾಗ ತಾನೊಬ್ಬನೆ ಹೋಗುತ್ತಿರಲಿಲ್ಲ ತನ್ನೊಂದಿಗೆ ರಾಣಿಯರನ್ನು ಕರೆದುಕೊಂಡು ಹೋಗುತ್ತಿದ್ದನು. ಇಲ್ಲಿ ಪ್ರಧಾನ ರಾಣಿಯನ್ನು ಪ್ರತ್ಯೇಕವಾಗಿಯೇ ಗುರುತಿಸಲಾಗುತ್ತಿತ್ತು ಹಾಗೂ ಅವಳಿಗೆ ವಿಶೇಷ ರೀತಿಯ ಗೌರವ ನೀಡಲಾಗುತ್ತಿತ್ತೆಂದು ತಿಳಿಸಿದ್ದಾರೆ.[324]

ಅರವೀಡು ಮನೆತನ ವಿಜಯನಗರ ಸಾಮ್ರಾಜ್ಯದ ಕೊನೆಯ ವಂಶ ಇದಾಗಿದೆ. ಈ ವಂಶದಲ್ಲಿ ಕಂಡುಬರುವ ರಾಣಿಯರಲ್ಲಿ ಪ್ರಮುಖರೆಂದರೆ ತಿರುಮಲಾಂಬಾ, ವೇಂಗಲಾಂಬೆ, ತಿಮ್ಮಾಜಿ, ಬಾಯಮ್ಮ ಪ್ರಮುಖರಾದವರು ಇವರು ತಮ್ಮದೇ ಆದ ಕೊಡುಗೆಗಳನ್ನು ಅರವೀಡು ವಂಶಕ್ಕೆ ನೀಡಿದ್ದಾರೆ. ವೇಂಗಲಾಂಬೆ ಶ್ರೀಕೃಷ್ಣದೇವರಾಯ ಮತ್ತು ಚಿನ್ನಾದೇವಿಯವರ ಮಗಳಾಗಿದ್ದು ಈಕೆ ಧಾರ್ಮಿಕ ಕ್ಷೇತ್ರದಲ್ಲಿ ದುಡಿದಿರಬಹುದಾದ ಸಂಭಾವ್ಯಗಳಿವೆ, ಈ ವಂಶದ ಕುರಿತು ಹೆಚ್ಚಿನದಾಗಿ

---

[323] ಕೊಟ್ರಯ್ಯ ಸಿ.ಟಿ.ಎಂ. 2001, **ವಿಜಯನಗರ ಸಾಮ್ರಾಜ್ಯದ ನೀರಾವರಿ ವ್ಯವಸ್ಥೆ,** ಪುಟ–180, ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

[324] ಸದಾನಂದ ಕನವಳ್ಳಿ, 1992, **ಮರೆತು ಹೋದ ಮಹಾಸಾಮ್ರಾಜ್ಯ,** ಪು–394–395, ಪ್ರಸಾರಂಗ, ಕನ್ನಡ ವಿ.ವಿ. ಹಂಪಿ

ಮಾಹಿತಿಯ ಕೊರತೆ ಇದ್ದರೂ ಸಹ ದೊರಕುವ ಮೂವರು ರಾಣಿಯರು ರಾಜಕೀಯ ಸಾಹಿತ್ಯ ಕ್ಷೇತ್ರದಲ್ಲಿ ಧಾರ್ಮಿಕ ಕ್ಷೇತ್ರಕ್ಕಿತಂಲೂ ಹೆಚ್ಚು ಪ್ರಭಾವ ಬೀರಿದ್ದಾರೆ.

ಹೀಗೆ ರಾಣಿಯರು ನೇರವಾಗಿ ರಾಜ್ಯಾಡಳಿತ ನಡೆಸುತ್ತಲಿದ್ದ ಮತ್ತು ನಡೆಸದಿದ್ದ ಸಂದರ್ಭಗಳಲ್ಲಿಯೂ ಸ್ವಪ್ರೇರಣೆಯಿಂದ ಶೈವಧರ್ಮಕ್ಕೆ ದಾನ–ದತ್ತಿಗಳನ್ನು ನೀಡುವುದಲ್ಲದೆ ದೇವಾಲಯಗಳನ್ನು ಮತ್ತು ಮೂರ್ತಿಗಳನ್ನು ಮಾಡಿಸುವುದರ ಮೂಲಕ ಶೈವಧರ್ಮವನ್ನು ಉಜ್ವಲಗೊಳಿಸಿದ್ದಾರೆ. ಈ ಎಲ್ಲಾ ವಿಷಯಗಳನ್ನು ನೆನೆದಾಗ ಇಲ್ಲಿ ವ್ಯಕ್ತವಾಗುವ ವಿಷಯಗಳೆಂದರೆ ರಾಣಿಯರು ಪುರುಷ ಪ್ರಧಾನ ಸಮಾಜದಲ್ಲಿ ತಮ್ಮ ಸ್ವ–ಪ್ರೇರಣೆಯಿಂದ ವರ್ಚಸ್ಸಿನಿಂದ ದಾನಗೈಯ್ಯುವ ಮನೋಭಿಲಾಷೆಯಿಂದ ಧರ್ಮದ ರಂಗಕ್ಕೆ ತಮ್ಮದೊಂದು ಕಾಣಿಕೆಯನ್ನು ಸಲ್ಲಿಸಿದ್ದಾರೆ. ಚಕ್ರವರ್ತಿಗಳ ರಾಣಿಯರುಗಳಿಗೆ ಹೆಚ್ಚಿನ ಧಾರ್ಮಿಕ ಅವಕಾಶವಿತ್ತು. ಅವರುಗಳಿಗಿಂತ ರಾಣಿವರ್ಗದವರು ಕೈಗೊಂಡ ದಾನ–ಧರ್ಮಗಳೇ ಹೆಚ್ಚು ರಾಣಿಯರು ನೇರವಾಗಿ ಸ್ವತಂತ್ರವಾಗಿ ವೈಯುಕ್ತಿಕವಾಗಿ, ಪತಿಯೊಂದಿಗೆ ಸಾರ್ವಜನಿಕರುಗಳೊಂದಿಗೆ ದಾನ–ಧರ್ಮ ಕ್ರಿಯಾದಿಗಳನ್ನು ಅಧಿಕ ಪ್ರಮಾಣದಲ್ಲಿ ಕೈಗೊಂಡಿರುವುದು ಕಂಡುಬರುತ್ತದೆ. ರಾಣಿಯರು ಶೈವ ಧರ್ಮಕ್ಕೆ ಔದಾರ್ಯವಾಗಿ ಪ್ರೋತ್ಸಾಹವನ್ನು ನೀಡಿ ಬೆಳೆಸಿದ್ದಾರೆ. ಕೆಲವರು ದೇವಾಲಯಗಳನ್ನು ನಿರ್ಮಿಸಿ ದಾನ–ದತ್ತಿ, ಧೂಪ, ಗದ್ದೆ, ಭೂಮಿ, ಎಣ್ಣೆ, ಹಣಗಳನ್ನು ನೀಡಿ ಅವು ಧಾರ್ಮಿಕ ಕಾರ್ಯಗಳನ್ನು ನಿಲ್ಲದಂತೆ, ಎಚ್ಚರ ವಹಿಸಿದ್ದಾರೆ. ದೇವಾಲಯಗಳ ನಿರ್ಮಾಣ ಕಾರ್ಯದಲ್ಲಿ ರಾಣಿಯರ ಪಾಲು ಹೆಚ್ಚಿತ್ತು ಎಂದು ಹೇಳಬಹುದು. ಇವುಗಳ ಜೊತೆಗೆ ಕೆಲ ರಾಣಿಯರು ದೇವಾಲಯಗಳ ಪಕ್ಕದಲ್ಲಿ ಕೆರೆ, ತಟಾಕ, ಅಗ್ಗಿ ಕೆರೆಗಳನ್ನು ಸಹ ನಿರ್ಮಿಸಿರುವುದು ಪ್ರಶಂಶನೀಯವಾಗಿದೆ.

**ವೈಧಿಕ ಧರ್ಮಕ್ಕೆ ರಾಣಿಯರ ಕೊಡುಗೆ.**

ಪ್ರಾಚೀನ ಕರ್ನಾಟಕದಲ್ಲಿ ಶಾತವಾಹನರ ತರುವಾಯ ಕದಂಬರ ಕಾಲದಲ್ಲಿ ವೈಧಿಕ ಧರ್ಮ ಅಸ್ತಿತ್ವಕ್ಕೆ ಬಂದಿತು. ಮಯೂರ ವರ್ಮನ ಇತಿಹಾಸವನ್ನು ಅರಿತರೆ ಇದು ವೇದ್ಯವಾಗುತ್ತದೆ. ತದನಂತರ ಅಸ್ತಿತ್ವಕ್ಕೆ ಬಂದ ಮನೆತನಗಳಲ್ಲಿ ವೈಧಿಕ ಧರ್ಮ ಸ್ವಲ್ಪ ಕ್ಷಿಪ್ರಪ್ರಗತಿಯಲ್ಲೇ ಬೆಳೆಯಿತು.

ವೈದಿಕ ಧರ್ಮಕ್ಕೆ ಸಹ ರಾಣಿಯರು ಪ್ರೊತ್ಸಾಹವನ್ನಿತ್ತಿದ್ದಾರೆ. ಅವರುಗಳಲ್ಲಿ ಪ್ರಮುಖ ಮನೆತನವಾದ ಚಾಲುಕ್ಯ ಮನೆತನ. ಚಾಲುಕ್ಯರ ರಾಜಮಾತೆಯಾದ ವಿನಯವತಿ–ವಾತಾಪಿಯಲ್ಲಿ

ಬ್ರಹ್ಮ ವಿಷ್ಣು, ಮಹೇಶ್ವರರಿಗೆ ತ್ರಿಕೂಟಾಲಯಗಳನ್ನು ಕಟ್ಟಿಸಿ ಕರ–ತೆರಿಗೆಗಳ ಉತ್ಪನ್ನಗಳನ್ನು ಅದಕ್ಕೆ ಒದಗಿಸಿದಳು.[325] ಚಾಲುಕ್ಯ ಚಂದ್ರಾದಿತ್ಯನ ಮಡದಿ ವಿಜಯಮಹಾದೇವಿ ಚಾಲುಕ್ಯ ರಾಣಿಯರಲ್ಲೇ ಅತ್ಯಂತ ಗೌರವಕ್ಕೆ ಪಾತ್ರಳಾದವಳು ಗೋಪಾಲಸ್ವಾಮಿಗೆ ವಾಕುಲ ಕ್ಷೇತ್ರದ ಕೊಚ್ಚೂರಕ ಎಂಬ ಗ್ರಾಮವನ್ನು[326] ಆರ್ಯಸ್ವಾಮಿ ದೀಕ್ಷಿತನಿಗೆ ತರಕಾಗಾಹಾರ ಎಂಬ ಗ್ರಾಮವನ್ನು ಧನಾವನ್ನಾಗಿ ನೀಡಿದ್ದಾಳೆ.[327] ಆಗಲೇ ತಿಳಿಸಿದಂತೆ ಬಾದಾಮಿ ಚಾಲುಕ್ಯರ ಕಾಲಕ್ಕಾಗಲೇ ವೈಧಿಕ ಧರ್ಮ ವೃಕ್ಷವಾಗಿ ಬೆಳೆಯಲಾರಂಭಿಸಿತ್ತು.

ರಾಷ್ಟ್ರಕೂಟರ ಮನೆತನಕ್ಕೆ ಕಾಲಿರಿಸಿದರೆ ಧ್ರುವನ ರಾಣಿ ಶೀಲಮಹಾದೇವಿ ಶಕ 708ರಲ್ಲಿ ನಂದಿಪುರದಲ್ಲಿ ಬ್ರಾಹ್ಮಣರಿಗೆ ಕೋಲೆಪದ್ರ ಎಂಬ ಗ್ರಾಮವನ್ನು[328] ಪಲ್ಲವರ ನೊಳಂಬ ಪೆರ್ಮಾಡಿಗಳ ರಾಣಿ ಗವಗಣಬ್ಬೆಯ ಮದಕರಿಕಲ್ಲು ರಾಜ್ಯಾಡಳಿತದಲ್ಲಿ 'ವಿಷ್ಣುಪಾರ ಮೊಲದು' ಅಮರ ನಾಗಮಾರಬೆ ಮಾಡಿಸಿದ ಶಿವಾಲಯಕ್ಕೆ 14 ಮತ್ತರು ಭೂಮಿ ಒಟ್ಟುಕೊಟ್ಟಿದ್ದಾಳೆ.[329]

ಎರಡನೆಯ ಪೊಳ್ಚೋರನ ರಾಣಿ ಕದಂಬ ವಂಶೋದ್ಭವೆ ಧೀವಳಬ್ಬರಸಿ ಪತಿಯ ಮರಣಾನಂತರ ಆತನ ಹೆಸರಿನಲ್ಲಿ 'ಪೊಳಲ್ಚೊರ ಮೆಹಲ ಎಂಬ ಅಗ್ರಹಾರ ಕಟ್ಟಿಸಿ[330] ಒಂದು ಕೊಳವನ್ನು, ವಿಷ್ಣುಗೃಹವನ್ನು ನಿರ್ಮಿಸಿದಳು ಜೊತೆಗೆ ಅವನಿಯಲ್ಲಿ ನೊಳಂಬ ನಾರಾಯಣೇಶ್ವರ ದೇವಾಲಯ ಕಟ್ಟಿಸಿ, ಘಂಟೆಯೊಂದನ್ನು ದಾನ ಮಾಡಿದ್ದಾಳೆ.[331]

ಚಾಲುಕ್ಯ ಅಕ್ಕಾದೇವಿ, ರಾಜಧಾನಿ ವಿಕ್ರಮಪುರದ ಬ್ರಹ್ಮಪುರಿಯ ನಂದಿಯಣ್ಣ ಷಡಂಗಿ ಭಟ್ಟೋಪಧ್ಯಾಯರು ಪ್ರಮುಖ 42 ಜನ ವಿದ್ವಾಂಸರುಗಳಿಗೆ ಒಂದು ಕೆಯಿಮತ್ತರು, 44 ಮತ್ತರು ತೋಟದ ಭೂಮಿ 64 ಮತ್ತರು ಕಿಸುವಿನ ಭೂಮಿಯನ್ನು ನೀಡಿದ್ದಾಳೆ.[332]

---

325 K.I – 1-2 ಪಟ್ಟದಕಲ್ಲು (ತಾ) ಬಾದಾಮಿ ಕ್ರಿ.ಶ.6697.

326 ಡಾ. ಚೆನ್ನಕ್ಕ ಎಲಿಗಾರ, ***ಶಾಸನಗಳಲ್ಲಿ ಕರ್ನಾಟಕದ ಸ್ತ್ರೀಸಮಾಜ,*** ಪುಟ–136, ಧಾರವಾಡ, ಪ್ರಸಾರಂಗ, ಕರ್ನಾಟಕ ವಿಶ್ವವಿದ್ಯಾಲಯ, ***1990.*** ಮತ್ತು I.A. Viii- ಪುಟ–44, ಕೊಚ್ರೆ ತಾಮ್ರ ಪಟ.

327 ಅದೇ, ಮತ್ತು I.A. Vii, ಪುಟ–163, ನೆರೂರು ತಾಮ್ರಪಟ, ಕ್ರಿ.ಶ. 659.

328 A.I. Xxii- ಪುಟ–105, ಜದ್ವಾಯಿ ತಾಮ್ರಪಟ, ಕ್ರಿ.ಶ. 786.

329 ಎ.ಕ. xi, ಚಳ್ಳಕೆರೆ, 33, ಚಿಕ್ಕಮದುರೆ, ಕ್ರಿ.ಶ. 815.

330 ಎ.ಕ. X, ಮುಳಬಾಗಿಲು, 38, ಆವನಿ, ಕ್ರಿ.ಶ.–890.

331 ಎ.ಕ x, ಮುಳಬಾಗಿಲು, 50, ಆವನಿ ಕ್ರಿ.ಶ.890.

332 B.K.I. I-i-88, ಅರಸೀಬೀದಿ (ತಾ) ಹುನಗುಂದ, ಕ್ರಿ. 1055.

ಕದಂಬ ವಂಶದ ದುದ್ದರಸನ ಮಡದಿ ದಯಸಿಂಹನ ತಾಯಿ ಮೇಚಲದೇವಿ ಧರ್ಮಗುಣ ಪ್ರತತಿಗೆ ನೆಲೆ, 1 ವಿಶುದ್ಧಚಾರೆ, ಪುಣ್ಯಕಥನ ಪುರಾಣ ಪ್ರಸಂಗೆ ಎಂದು ಖ್ಯಾತಳಾದವಳು. ಈಕೆ ವಾಸುದೇವ ಪ್ರತಿಷ್ಠಾ ಕಾರ್ಯವನ್ನು ಅಗ್ರಹಾರ ಹಾರುವ ಬೇಹೂರಿನಲ್ಲಿ ನಡೆಸಿ ಕುಂಬಾರ ಹಳ್ಳಿಗೆ ಅರಸಿಯ ಪುರವೆಂದು ಹೆಸರಿಟ್ಟು ದೇವರ ಬಹ್ಮಳ್ಳಿಯಾಗಿ ಐವರು ಬ್ರಹ್ಮಣರಿಗೆ ಧಾರೆ ಎರೆದಿರುವಳು ಇದಕ್ಕೆ ತಕ್ಕಂತೆ 'ಮೇಚಲ ಸಮುದ್ರ'ವನ್ನು ನಿರ್ಮಿಸಿದಾಳೆ.[333]

ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಶೈವಧರ್ಮ ಪ್ರಬಲವಾಗಿತ್ತಾದರೂ ವೈಧಿಕ ಧರ್ಮದ ಅನುಸರಣೆ ಇತ್ತು ಎಂಬುದನ್ನು ನಾವು ಅವರು ವಿವಿಧ ಸಾಂಸ್ಕೃತಿಕ ರಂಗಗಳಿಗೆ ನೀಡಿರುವ ಕೊಡುಗೆಗಳಿಂದ ಅರಿಯಬಹುದಾಗಿದೆ.

ಆರನೆಯ ವಿಕ್ರಮಾದಿತ್ಯನ ರಾಣಿಯರ ಸಂಕುಲ ವೈಧಿಕ ಧರ್ಮವನ್ನೂ ಬೆಂಬಲಿಸಿದ್ದಾರೆ. ಐರಿಯ ಕೇತಲ ಮಹಾದೇವಿ ರಾಣಿ ಸಿರುಗುಪ್ಪೆಯ ಕೇತಲೇಶ್ವರ ದೇಗುಲಕ್ಕೆ ದತ್ತಿ ನೀಡಿದ್ದಾಳೆ.[334] ಪಟ್ಟ ಮಹಿಷಿ ಮಲಯವತಿ ಧರ್ಮದತ್ತಳೆಯಾಗಿ ಬ್ರಾಹ್ಮಣರಿಗೆ ದಾನ ನೀಡಿದ ಉಲ್ಲೇಖ ಶಾಸನದಲ್ಲಿದೆ.[335] ರಾಣಿ ಪದ್ಮಲ ಮಹಾದೇವಿ ಮಂಗೋಳವನ್ನು ಆಳುತ್ತಿದ್ದ ಸಂದರ್ಭದಲ್ಲಿ ರಂಗಪುರದ ನಾರಸಿಂಘ ದೇವರಿಗೆ ದಾನ ನೀಡಿದ್ದಾಳೆ.[336] ಆರನೇ ವಿಕ್ರಮಾದಿತ್ಯನ ಮಗಳು ಕದಂಬ ಜಯಕೇಸಿಯ ರಾಣಿ ಮೈಳಲದೇವಿ ಕೇಶವ ದೇವರ ಪ್ರತಿಷ್ಠೆಯನ್ನು ಮಾಡಿಸಿದ್ದಾಳೆ.[337]

ಬಂಕಾಪುರದ ಕದಂಬ ಮಯೂರ ವರ್ಮನ ರಾಣಿ ಅಕ್ಕಾದೇವಿ ತನ್ನ ಸ್ಥಾನಬಲ ಹಾಗೂ ಸ್ವ–ಕಾರ್ಯಬಲದ ಮೇರೆಗೆ ಪ್ರಾಮುಖ್ಯತೆಯಿಂದ ಬೆಳಗಿದವಳು. ಕಲ್ಯಾಣ ಚಾಲುಕ್ಯರಂತಹ ಪ್ರತಿಷ್ಠಿತ ಮನೆತನದಲ್ಲಿ ಜನಿಸಿ ಮಯೂರ ವರ್ಮನ ಮಡದಿಯಾಗಿ ತುಂಬುಗೌರವ, ತವರು ಮನೆಯ ಚಕ್ರವರ್ತಿ ಘನತೆಯ ದರ್ಪದಲ್ಲಿ ಅಧಿಕಾರದಿಂದ ರಾಜ್ಯಭಾರ ನಡೆಸಿದ ಅಪ್ರತಿಮ ಮಹಿಳೆ. ಇವಳು

---

[333] ಎ.ಕ. v, ಮುಂಜರಾಬಾದ್, 18, ಹಾಲೇಬೇಲುರು, ಕ್ರಿ.ಶ. 1095.

[334] S.I.I. IX-i-159. ಸಿರುಗುಪ್ಪಾ (ತಾ) ಬಳ್ಳಾರಿ ಕ್ರಿ.ಶ. 1092.

[335] S.I.I. IX-i-175, ಚಿನ್ನತುಂಬಳ (ತಾ) ಆದೋನಿ ಕ್ರಿ.ಶ. 1107.

[336] S.I.I – iX – 195, ರಂಗಪುರ (ತಾ) ಹಡಗಲಿ (ಕ್ರಿ.ಶ. 1116)

[337] S.I.I – XV-8, ಗೂಗಿಕಟ್ಟೆ (ತಾ) ಧಾರವಾಡ, ಕ್ರಿ.ಶ.1125.

ಶೈವಧರ್ಮಕ್ಕೆ ಹೆಚ್ಚಿನ ಕೊಡುಗೆಯನ್ನು ನೀಡಿದ್ದರೂ ಸಹ, ಅಕ್ಕಾದೇವಿ ವೈದಿಕ ಧರ್ಮದ ಧಾನವನ್ನು ಸೂಚಿಸುವ ಉಲ್ಲೆಖವೊಂದು 'ಅರಸಿಬೀದಿಯಲ್ಲಿ' ದೊರೆತಿದೆ.[338]

ಚಾಲುಕ್ಯ ದಂಡಾಧಿಪತಿ ರವಿಗ ಚಮೂಪನ ಮಡದಿ ರೆಬ್ಬಲದೇವಿ ಹೂವಿನ ಹಡಗಲಿಯಲ್ಲಿ ಕೇಶವ ಗೇಹವೊಂದನ್ನು ನಿರ್ಮಿಸಿದ್ದಾಳೆ. ಅದಕ್ಕೆ ಭೂಮಿಯನ್ನು ದಾನ ನೀಡಿದ್ದಾಳೆ. 'ದಾನ ವಿನೋದೆ' ಎಂದು ಬಿರುದು ಪಡೆದಿದ್ದಾಳೆ.[339]

ಚಾಲುಕ್ಯ ರಾಣಿಯರು ವೈಧಿಕ ಧರ್ಮವನ್ನು ಪ್ರೋತ್ಸಾಹಿಸಿದಂತೆ ಹೊಯ್ಸಳರ ಕಾಲದಲ್ಲಿ ವೈಧಿಕ ಧರ್ಮದ ಪ್ರಭಾವವು ತುಸು ಹೆಚ್ಚಾಯಿತು. ವಿದ್ವಾಂಸರುಗಳು ಶ್ರೀ ವೈಷ್ಣವ ಧರ್ಮ, ಜೈನಧರ್ಮಗಳು ಪ್ರಭಾವ ಹೆಚ್ಚಾಗಿತ್ತೆಂದು ವಾದಿಸಿದರೂ ಪ್ರಾರಂಭದಲ್ಲಿ ವೈಧಿಕ ಧರ್ಮವಿತ್ತು. ವಿಷ್ಣುವರ್ಧನ ಜೈನಧರ್ಮವನ್ನು ಬಿಟ್ಟು ತಮಿಳುನಾಡಿನಿಂದ ಬಂದ ರಾಮಾನುಜಾಚಾರ್ಯರ ಪ್ರಭಾವದಿಂದ ವೈಷ್ಣವ ಧರ್ಮವನ್ನು ಸ್ವೀಕರಿಸಿದರು. ಅಂತೆಯೇ ರಾಜ ಧರ್ಮದಾಗಿ ಘೋಷಿಸಿದರು. ಆದರೆ ಇದು ಹೊಯ್ಸಳ ಸಾಮ್ರಾಜ್ಯದ ಜನತೆಯ ಮೇಲೆ ಯಾವುದೇ ದುಷ್ಪರಿಣಾಮವನ್ನು ಬೀರಲಿಲ್ಲ. ಅವನ ಪಟ್ಟಮಹಿಷಿ ಶಾಂತಲೆ, ಬಮ್ಮಲಾದೇವಿ ಹಾಗೂ ಕೆಲ ಮಹಾಮಂಡಳೇಶ್ವರರು ಹಳೆಯ ಧರ್ಮದಲ್ಲಿಯೇ ಇದ್ದು ಧರ್ಮ ಸಮನ್ವಯತೆಯನ್ನು ಮೆರೆದಿದ್ದಾರೆ.

ಶಾಂತಲೆ ಬೇಲೂರಿನಲ್ಲಿ ಚನ್ನಕೇಶವ ದೇವಾಲಯವನ್ನು[340] ಬಮ್ಮಲದೇವಿ ನಾಗಮಂಗಲದಲ್ಲಿ ಶಂಕರನಾರಾಯಣ ದೇವಾಲಯವನ್ನು ನಿರ್ಮಿಸಿ, ಜೀರ್ಣೋದ್ಧಾರ ಮಾಡಿದ್ದಾರೆ.[341] ಬಮ್ಮಲಾದೇವಿ ಹಾನಗಲ್ಲು ಬೀಡುವಿನಲ್ಲಿದ್ದಾಗ ನೀರಗುಂದ ನಾಡೊಳಗೆ ಬೆನಚಟಿಗೆರೆಯನ್ನು ಬ್ರಹ್ಮಪುರವೆಂದು ಹೆಸರಿಸಿ ದಾನ ನೀಡಿದ್ದಾಳೆ.[342]

---

[338] ಡಾ. ಚೆನ್ನಕ್ಕ ಪಾವಟೆ, ***ಹಾನಗಲ್ಲ ಕದಂಬರು,*** ಪು–97, ಧಾರವಾಡ, ಚನ್ನಗಂಗ ಪ್ರಕಾಶನ,

[339] ಶಾಸನ ಸಾಹಿತ್ಯ ಸಂಚಯ–40. ಹೂವಿನ ಹಡಗಲಿ, ಮತ್ತು ಡಾ. ಚೆನ್ನಕ್ಕೆಲಿಗಾರ **ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ** ಪುಟ–138, ಪ್ರಸಾರಾಂಗ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, 1990.

[340] ಎ.ಕ XV, ಬೇಲುರು, ಶಾ.ಸಂ.254, ಬೇಲೂರು ತಾ ಕ್ರಿ.117.

[341] ಎ.ಕ. IV, ನಾಗಮಂಗಲ, ಶಾ.ಸಂ3, ನಾಗಮಂಗಲ, ಕ್ರಿ.ಶ.1135.

[342] ಎ.ಕ. XII, ಗುಬ್ಬಿ, ಶಾ.ಸಂ 13, ಬೆನಚಿಗೆರೆ, ಕ್ರಿ.ಶ. 1140.

ಹೊಯ್ಸಳರ ವೀರ ಬಲ್ಲಾಳನ ರಾಣಿ ಬೈಚಲಮಹಾದೇವಿ ಕೇಸಿಯಳ್ಳಿಯಲ್ಲಿ ಪ್ರಸನ್ನ ಮಾಧವ ದೇವರ ಪ್ರತಿಷ್ಠೆಗೈದು ದತ್ತಿ ನೀಡಿದ್ದಾಳೆ.[343] ಪಿರಿಯ ರಾಣಿ ಉಮಾದೇವಿ ನರಸಿಂಹ ದೇವರ ಚೈತ್ರ ಪವಿತ್ರಕ್ಕೆ ದಾನ ನೀಡಿದ್ದಾಳೆ.[344] ಹೊಯ್ಸಳರ ವೀರ ಸೋಮೇಶ್ವರ ದೇವ ತನ್ನ ಪಟ್ಟದರಸಿ ಸೋಮಲದೇವಿಯ ಶ್ರೇಯಾರ್ಥವಾಗಿ ಮತ್ತಿಕಟ್ಟವನ್ನು ಸೋಮಲಾಪುರವೆಂದು ಹೆಸರಿಟ್ಟು ಅಲ್ಲಿಯ ಬ್ರಾಹ್ಮಣರಿಗೆ ದತ್ತಿ ನೀಡಿದ ವಿಷಯವಿದೆ.[345]

ವಿಜಯನಗರ ಸಾಮ್ರಾಜ್ಯದ ಕಾಲದಲ್ಲೂ ವೈದಿಕ ಧರ್ಮ ಪ್ರಮುಖವಾಗಿತ್ತು ಹಿಂದೂ ಧರ್ಮದ ಒಂದು ಭಾಗವೂ ಹೌದು. ವೈದಿಕ ಧರ್ಮವೆಂದರೆ ಹಿಂದೂ ಧರ್ಮವೂ ಹೌದು. ಎಂಬಷ್ಟರಮಟ್ಟಿಗೆ ಒಂದಾಗಿವೆ. ಇವರ ಕಾಲದಲ್ಲಿ ಜೈನ, ಶೈವ, ವೈಷ್ಣವ ಧರ್ಮಗಳು ಪ್ರಾಬಲ್ಯವಾಗಿದ್ದವು. ಸಾಮ್ರಾಜ್ಯದಲ್ಲಿ ಈ ವಂಶದ ಚಕ್ರವರ್ತಿಗಳು ತಮ್ಮದೇ ಆದ ಕೊಡುಗೆಗಳನ್ನು ಸಾಮ್ರಾಜ್ಯಕ್ಕೆ ನೀಡಿದ್ದಾರೆ. ಅದರಂತೆಯೇ ಇವರೊಂದಿಗೆ ಸಾಮ್ರಾಜ್ಯದಲ್ಲಿದ್ದುಕೊಂಡು ಏಳು–ಬೀಳುಗಳ ದಿಗ್ವಿಜಯ ದಂಡಯಾತ್ರೆ ಧಾರ್ಮಿಕ ಮೊದಲಾದ ಕಾರ್ಯಕ್ರಮಗಳಲ್ಲಿ ರಾಣಿಯರು ಪಾಲ್ಗೊಳ್ಳುತ್ತಿದ್ದರು. ಆ ಸಾಮ್ರಾಜ್ಯದ ಉನ್ನತಿಗಾಗಿ ಶ್ರಮಿಸಿದ ಚಕ್ರವರ್ತಿಗಳಷ್ಟೇ ಕೊಡುಗೆಗಳನ್ನು ನೀಡಿದ್ದಾರೆ.

ವೈದಿಕ ಧರ್ಮದಲ್ಲಿ ಸಂಗಮ ವಂಶದ ಬುಕ್ಕನ ರಾಣಿ ಹೊನ್ನಮ್ಮ ಪ್ರಮುಖಳು ಇವಳಿಗೆ ಹೊನ್ನಯಿ, ಗೌರಾಂಬಿಕೆ ಎಂಬ ಹೆಸರುಗಳೂ ಇವೆ. ಈಕೆ ಒಬ್ಬ ವಿದ್ವಾಂಸೆಯಾಗಿದ್ದು ಪರೋಕ್ಷವಾಗಿ ಈಕೆ ವೈದಿಕ ಧರ್ಮ ಏಳಿಗೆಗೆ ಶ್ರಮಿಸಿರುವುದು ಗಮನಾರ್ಹ. ಈಕೆಗೆ ಎರಡನೇ ಹರಿಹರನೆಂಬ ಮಗನಿದ್ದನು. ಈತನು ತನ್ನ ತಾಯಿಯ ಆತ್ಮಶಾಂತಿಗಾಗಿ ಬ್ರಾಹ್ಮಣರಿಗೆ ಒಂದು ಅಗ್ರಹಾರವನ್ನು ಕಟ್ಟಿಸಿ ಅದಕ್ಕೆ 'ಹೊನ್ನಲಾಪುರ' ವೆಂದು ತಾಯಿಯ ಹೆಸರಿನಲ್ಲಿ ದಾನ ಮಾಡಿದುದರ ಬಗ್ಗೆ ತಿಳಿದು ಬರುತ್ತದೆ.[346]

---

[343] ಎ.ಕ VI- ಕಡೂರು ಶಾ.ಸಂ. 129, ಮಾದಾಪುರ, ಕ್ರಿ.ಶ. 1218.

[344] ಎ.ಕ. v, ಬೇಲೂರು ಶಾ.ಸಂ. 182, ಅಡಗೂರು, ಕ್ರಿ.ಶ. 1227.

[345] ಎ.ಕ. Ix - ಬೆಂಗಳೂರು, ಶಾ.ಸಂ 06, ಬೆಂಗಳೂರು. ಕ್ರಿ.ಶ. 1235.

[346] ಸೂರ್ಯನಾರಾಯಣ ರಾವ್ (ಅನು) ಬಾಲಸುಬ್ರಹ್ಮಣ್ಯ, ***ಮರೆಯ ಲಾಗದ ಮಹಾಸಾಮ್ರಾಜ್ಯ ವಿಜಯನಗರ,*** ಪುಟ–208, ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.2000.

ಎರಡನೇ ಹರಿಹರನ ರಾಣಿ ಸಂಗಮ ಮನೆತನದ ಬುಕ್ಕವ್ವೆ ಜೈನಧರ್ಮಕ್ಕೆ ವಿಶೇಷ ಪೋಷಣೆ ನೀಡಿದ್ದಳು. ಅಂತೆಯೇ ಬುಕ್ಕವ್ವೆ ತನ್ನ ಗುರು ಬಾಸ್ಕರ ದೇವಯ್ಯನಿಗೆ ಪುಣ್ಯವಾಗಲೆಂದು ಜಡೆಯ ಶಂಕರ ದೇವರ ಮುಂದೆ ದೀಪಮಾಲೆ ಕಂಬವನ್ನು ಮಾಡಿಸಿದ ವಿಷಯವನ್ನು ಕ್ರಿ.ಶ. 1397ರ ಶಾಸನ ತಿಳಿಸುತ್ತದೆ.[347]

ರಾಮಚಂದ್ರನ ರಾಣಿ ಬುಕ್ಕಾಂಬ ಪತಿಯ ಒಪ್ಪಿಗೆಯನ್ನು ಪಡೆದು 'ಕುಂಚಕುಂಟ' ಎಂಬ ಗ್ರಾಮವನ್ನು 'ಬುಕ್ಕಾಪುರ' ವೆಂದು ಹೆಸರಿಸಿ ಸರ್ವಮಾನ್ಯ ಅಗ್ರಹಾರವಾಗಿ ಮಾಡಿ 8 ಜನ ಬ್ರಾಹ್ಮಣರಿಗೆ ದಾನ ನೀಡಿದ್ದಾಳೆ.[348] ಅಂಣಲಾದೇವಿ ಒಂದನೇ ದೇವರಾಯನ ರಾಣಿ ರಾಮಚಂದ್ರ ದೇವರಿಗೆ ಚಿನ್ನದ ಕರಗಳನ್ನು ನೀಡಿರುತ್ತಾಳೆ.[349]

ಎರಡನೇ ದೇವರಾಯನ ರಾಣಿಯಾದ ಕಮಲಾದೇವಿ ತುಮಕೂರು ಜಿಲ್ಲೆಯ ಕಲ್ಲಿನಾಥ ದೇವರಿಗೆ ಭೂದಾನ ನೀಡಿರುವಳು.[350]

ತುಳುವ ಮನೆತನದಲ್ಲಿ ಶ್ರೀಕೃಷ್ಣದೇವರಾಯನ ತಾಯಿಯಾದ ನಾಗಲಾದೇವಿ ಅಸಮಾನ್ಯಳ ಸ್ಥಾನಮಾನ ಹೊಂದಿರುವುದಕ್ಕೆ ಆಕೆಯ ಹೆಸರಿನಲ್ಲಿ ಸ್ಥಾಪನೆಯಾಗಿರುವ ಧಾರ್ಮಿಕ ಕಾರ್ಯಗಳೇ ಸಾಕ್ಷಿ. ಇದರ ಬಗ್ಗೆ ಶೈವಧರ್ಮದಲ್ಲಿ ರಾಣಿಯರು ಎಂಬ ವಿಭಾಗದಲ್ಲಿ ವಿವರಿಸಲಾಗಿದೆ. ಕೃಷ್ಣದೇವರಾಯ ನಾಗಲಾದೇವಿ ಹೆಸರಿನಲ್ಲಿ ನಾಗೇಶ್ವರ ಎಂಬ ಶಿವದೇವಾಲಯವನ್ನು ನಾಗೇಂದ್ರಶಯನವೆಂಬ ವಿಷ್ಣುದೇವಾಲಯವನ್ನು ಕಟ್ಟಿಸಿ ಆ ಗ್ರಾಮವನ್ನೂ (ನಾಗಲಾದೇವಿಪುರ) ಅಗ್ರಹಾರವನ್ನಾಗಿ ಪರಿವರ್ತಿಸಿ ಬ್ರಾಹ್ಮಣರಿಗೆ ವೃತ್ತಿಗಳನ್ನು ಕಟ್ಟನೆಂಬ ಮಾಹಿತಿಇದೆ.[351]

ಒಟ್ಟಾರೆಯಾಗಿ ವಿಜಯನಗರದ ಕಾಲದಲ್ಲಿ ರಾಣಿಯರು ಹಿಂದೂ ಧರ್ಮದ ಪ್ರೋತ್ಸಾಹಕರಾಗಿದ್ದರು ಎಂಬುದು ನಿಸ್ಸಂಶಯವಾದ ವಿಜಯನಗರ ಸ್ಥಾಪನೆಯಾದದ್ದು ಧರ್ಮದ

---

[347] ಅದೇ, ಪುಟ–260.

[348] ಸಿ.ಎಸ್. ವಾಸುದೇವನ್, ***ಹಂಪಿ ಪರಿಸರದ ಕೆರೆಗಳು,*** ಪುಟ–   ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.2001.

[349] ದೇವರ ಕೊಂಡಾರೆಡ್ಡಿ, ***ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ–03,*** ಪು–15, ಹಂಪಿ ಶಾಸನಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ.2000.

[350] ಎನ್. ಸರಸ್ವತಿ ***The Position of Women During vijayangara Period,*** P-105, Southern Printers Mysore. 1992.

[351] ದೇವರ ಕೊಂಡಾರೆಡ್ಡಿ, ***ಕನ್ನಡ ವಿಶ್ವವಿದ್ಯಾಲಯ, ಶಾಸನ ಸಂ–02*** ಕೊಪ್ಪಳ ಜಿಲ್ಲಾ ಶಾಸನಗಳು, ಪು–118, ಕನ್ನಡ ವಿಶ್ವವಿದ್ಯಾಲಯ, ಹಂಪಿ.1999.

ತಳಹದಿಯ ಮೇಲೆ ಎಂದು ಹೇಳಲಾಗುತ್ತದೆ. ಈ ಕಾಲದಲ್ಲಿ ಎಲ್ಲಾ ಧರ್ಮಗಳು ಸಹ ಪ್ರಮುಖ ಸ್ಥಾನ ಪಡೆದಿದ್ದವು. ಮುಖ್ಯವಾಗಿ ಜೈನ, ಬೌದ್ಧ, ಶೈವ, ವೈಷ್ಣವ, ಮುಸ್ಲಿಂ, ಕ್ರೈಸ್ತ ಹೀಗೆ ಎಲ್ಲಾ ಧರ್ಮಗಳು ಪ್ರಾಮುಖ್ಯತೆ ಪಡೆದಿದ್ದರೂ ಸಹ ವೈಷ್ಣವ ಧರ್ಮವು ಎಲ್ಲಾ ಧರ್ಮಗಳಿಗಿಂತಲೂ ಹೆಚ್ಚು ರಾಜಾಶ್ರಯ ಪಡೆದಿತ್ತು. ವೈಷ್ಣವ ಧರ್ಮದವರು ಮುಖ್ಯವಾಗಿ ವಿಷ್ಣುವಿನ ಅವತಾರಗಳಾದ ವೆಂಕಟೇಶ್ವರ, ಹರಿಕೃಷ್ಣ, ಪುರುಷೋತ್ತಮ, ನಾರಾಯಣ, ಮಾಧವ ಮತ್ತು ಲಕ್ಷ್ಮಿಯವರನ್ನು ಪೂಜಿಸಿದರು. ರಾಮಾನುಜಾಚಾರ್ಯರಿಂದ ಈ ಧರ್ಮವು ಪ್ರಾಮುಖ್ಯತೆಗಳಿಸಿತು.

ನಂತರ ಕ್ರಿ.ಶ. 15 ಮತ್ತು 16ನೇ ಶತಮಾನದಲ್ಲಿ ವೈಷ್ಣವ ಧರ್ಮವು ಹೆಚ್ಚು ಪ್ರಾಮುಖ್ಯತೆ ಪಡೆದು ಕರ್ನಾಟಕದ ಜನತೆಯಲ್ಲಿ ಸ್ವಧರ್ಮ ಜಾಗೃತಿ ಮೂಡಿಸಿತ್ತು. ವಿಜಯನಗರದ ಅರಸರು, ಅರಸಿಯರು ಸಹ ಹೆಚ್ಚಾಗಿ ದೈವಭಕ್ತಿಯುಳ್ಳವರಾಗಿದ್ದರು. ತುಳುವ ವಂಶದ ರಾಣಿಯರು ಹೆಚ್ಚಾಗಿ ತಮ್ಮನ್ನು ತಾವು ತೊಡಗಿಸಿಕೊಂಡ ಧಾರ್ಮಿಕ ಕ್ಷೇತ್ರವಾಗಿದೆ.

ಹೀಗೆ ರಾಣಿಯರು ತಾವು ಧಾರ್ಮಿಕ ಕ್ಷೇತ್ರಗಳಿಗೆ ಸ್ವತಂತ್ರವಾಗಿ ನಿಂತು ಮಾಡಿದ ವೈಯಕ್ತಿಕ ದಾನ ಅವರ ಧರ್ಮ ನಿಷ್ಠೆಯನ್ನು ವ್ಯಕ್ತಪಡಿಸಿದರೆ ಪತಿಯೊಂದಿಗಿನ ಅವರ ದಾನಗುಣವನ್ನು ಮರೆ ಮಾಡಿದೆ. ಹಲವು ಕಾಣಿಕೆಗಳನ್ನು ಸಲ್ಲಿಸುವುದರ ಮೂಲಕ ತಮ್ಮನ್ನು ತಾವು ಗುರುತಿಸಿಕೊಂಡಿದ್ದಾರೆ. ಜೊತೆಗೆ ಯುದ್ಧಗಳಲ್ಲಿ ಗೆದ್ದ ಖುಷಿಯಾಗಿಯೂ ಸಹ ರಾಣಿಯರು ತೀರ್ಥಯಾತ್ರೆಗೊಳ್ಳುತ್ತಿದ್ದುದು ಸರ್ವೇ ಸಾಮಾನ್ಯವಾಗಿದ್ದುದ್ದು ಆಗ ಹಲವಾರು ಧಾರ್ಮಿಕ ಕಾರ್ಯಗಳನ್ನು ನಿರ್ವಹಿಸಿದ್ದಾರೆ. ಜೊತೆಗೆ ದೇವಾಲಯದ ದಿನ ನಿತ್ಯದ ಪೂಜೆಗೆ ನೈವೇದ್ಯ ಆರತಿ, ಅಂಗಭೋಗ ರಂಗಭೋಗಗಳಿಗೆ ರಾಣಿಯರು ನೀಡಿದಂತಹ ಪ್ರೋತ್ಸಹ ಪ್ರಮುಖವಾದುದ್ದು.

### 3.4. ಸಾಹಿತ್ಯ ಕ್ಷೇತ್ರದಲ್ಲಿ ರಾಣಿಯರು

ಸ್ತ್ರೀಯರುಗಳಿಗೆ ಪ್ರಾಚೀನ ಕಾಲದಲ್ಲಿ ದೊರಕುತ್ತಿದ್ದ ವಿದ್ಯಾಭ್ಯಾಸವನ್ನು ಗಮನಿಸಿದರೆ ಬಹುವಾಗಿ ಸಾಹಿತ್ಯ ಕ್ಷೇತ್ರಕ್ಕೆ (ಬರವಣಿಗೆ) ಕೈ ಹಾಕಿಲ್ಲವೆಂಬುದು ವಿಧಿತವಾಗುತ್ತದೆ. ಸ್ತ್ರೀಯರನ್ನು ಹಿಂದಿನಂತೆ ಉನ್ನತವರ್ಗದ ಮಹಿಳೆಯರು, ಸಾಮಾನ್ಯವರ್ಗದ ಮಹಿಳೆಯರೆಂದು ವಿಂಗಡಿಸಿದಾಗ ಉನ್ನತ ವರ್ಗದ ಮಹಿಳೆಯರು ಅಂದರೆ ರಾಜಕುಟುಂಬಗಳ ರಾಣಿವರ್ಗದವರು, ರಾಜಕುಮಾರಿಯವರು, ಉನ್ನತಮಟ್ಟದ ವಿದ್ಯಾಭ್ಯಾಸವನ್ನು ಹೊಂದುತ್ತಿದ್ದರು. ಆದರೂ ಹೆಚ್ಚಾಗಿ

ಧಾರ್ಮಿಕ, ಸಾಮಾಜಿಕ, ರಾಜಕೀಯ ಮತ್ತು ಕಲೆಯ ಕ್ಷೇತ್ರಗಳಲ್ಲಿ ಶ್ರಮಿಸಿ ಉಜ್ವಲ ಕಾಣಿಕೆಯನ್ನು ಕರ್ನಾಟಕದ ಸಂಸ್ಕೃತಿಗೆ ನೀಡಿರುವ ಕಾಣಿಕೆಯನ್ನು ನೆನಯಬಹುದು.

ವಿದ್ಯಾವಿಹೀನ ಪಶುಭಿಃ ಸಮಾನಃ ಎಂಬುದು ಪ್ರಮುಖವಾಗಿದ್ದ ಕಾಲ ವೇದಗಳ ಕಾಲ, ವೇದಗಳ ಕಾಲದಲ್ಲಿ ಹಲವಾರು ಸ್ತ್ರೀಯರು ಬಹು ದೊಡ್ಡ ವಿದ್ಯಾವತಿಯಾಗಿದ್ದರು. ಸಾಧಕರಾಗಿ ಪುರುಷರಿಗೆ ಸಮಾನವಾದ ಸ್ಥಾನವನ್ನು ದೊರಕಿಸಿಕೊಂಡಿದ್ದರು ಎಂಬುದನ್ನು ನಿಬಂಧದ ಪ್ರಸ್ತಾವನೆಯಲ್ಲಿಯೇ ನೀಡಲಾಗಿದೆ. ಆಗಾಗಿ ಈಗ ರಾಣಿಯರ ವಿದ್ಯಾಭ್ಯಾಸದ ಬಗ್ಗೆ ಚರ್ಚಿಸೋಣ.

**ರಾಣಿಯರ ವಿದ್ಯಾಭ್ಯಾಸ**

ಸ್ತ್ರೀಯ ವಿದ್ಯಾಭ್ಯಾಸವನ್ನು ಕುರಿತು ಪೀಠಿಕೆಯಲ್ಲಿಯೇ ಸಂಕ್ಷಿಪ್ತವಾಗಿ ತಿಳಿಸಲಾಗಿದೆ. ಇಲ್ಲಿ ಅದನ್ನೇ ಕುರಿತು ರಾಣಿಯರ ಬಗೆಗೆ ಇರುವಂತಹ ಅಂಶಗಳನ್ನು ಚರ್ಚಿಸುತ್ತೇವೆ. ವೈದಿಕ ಯುಗದಲ್ಲಿ ಸ್ತ್ರೀಯರು ಶಾಸ್ತ್ರಾಧ್ಯಯನಕ್ಕೆ ಅಧಿಕಾರಿಗಳಾಗಿದ್ದರೆಂದೂ ಕೆಲವರು ಮಂತ್ರಗಳನ್ನು ರಚಿಸಿರುವೆಂದೂ ತಿಳಿದಿದ್ದೇವೆ. ನಮಗೆ ತಿಳಿದ ಮಟ್ಟಿಗೆ ಪ್ರಾಚೀನ ಕರ್ನಾಟಕದ ಶಾಸನಗಳಲ್ಲಿ ಕಂಡುಬರುವ ಯಾವ ಮಹಿಳೆಯೂ ಶಾಸ್ತ್ರಗಳಲ್ಲಿ ಪಾರಂಗತಳಾಗಿರಲಿಲ್ಲ. ಇದಕ್ಕೆ ಬಹುಶಃ ಅಪವಾದವೆಂಬಂತೆ ಸುಮಾರು ಕ್ರಿ.ಶ. 900ರ ಶಾಸನವೊಂದರಲ್ಲಿ ಕಂಡುಬರುವ ಸಾವಿನಿಮ್ಮಡಿ ಎಂಬ ಹೆಸರಿನ ಮಹಿಳೆ ಸರ್ವಶಾಸ್ತ್ರಗಳನ್ನು ಪಡೆದಿದ್ದು ಪ್ರಸಿದ್ಧಳಾಗಿದ್ದ ವಿಷಯವನ್ನು ಕೋಲಾರ ಜಿಲ್ಲೆಯ ಬಂಗಾರಪೇಟೆಯ ತಾಲ್ಲೂಕಿನ ಕಾರುಬೆಲೆ ಗ್ರಾಮದಲ್ಲಿನ ಶಾಸನ ತಿಳಿಸುತ್ತದೆ. ಇದು "ಸ್ವಸ್ತಿ ಶ್ರೀ ನಾಗಾರ್ಜುನಯ್ಯ ಮತ್ತು ನಂದಿಂಗೆಯಬ್ಬೆಯರ ಮಗಳ್ ಸಾಮಿ ನಿರ್ಮಡಿ ಸರ್ವಶಾಸ್ತ್ರ ಪ್ರಸಿದ್ಧಿ ಶ್ರೀ" ಎಂದು ತಿಳಿಸಿದೆ.[352] ಈ ನಿದರ್ಶನವನ್ನು ಬಿಟ್ಟರೆ ಸ್ತ್ರೀಯರು ದೊಡ್ಡ ವಿದ್ವಾಂಸರಾಗಿದ್ದುದಕ್ಕೆ ಇನ್ನೆಲ್ಲಿಯೂ ಆಧಾರಗಳಿಲ್ಲ. ವಡ್ಡಾರಾಧನೆಯ ಸುಕುಮಾರ ಸ್ವಾಮಿಯ ಕಥೆಯಲ್ಲಿ ಬರುವ ನಾಗಶ್ರೀ ಎನ್ನುವಳು ರಾಜ ಪುರೋಹಿತ ಸೋಮಶರ್ಮನ ಮಗಳಾಗಿ ಹುಟ್ಟಿದರೂ ಅವಿದ್ಯಾವಂತಳಾಗಿಯೇ ಬೆಳೆಯುತ್ತಾಳೆ. ಸ್ತ್ರೀಯರು ಒಳ್ಳೆಯ ಗೃಹಿಣಿಯಾದರೆ ಸಾಕು ಎಂಬ ಭಾವನೆ ಇದ್ದಂತೆ ಕಾಣುತ್ತದೆ. ಇದು ಸಾಮಾನ್ಯ ಜನರ ಮನೆಗಳ ಸ್ತ್ರೀಯರಿಗೆ ಸಂಬಂಧಿಸುತ್ತದೆ. ಸಮಾಜದ ಮೇಲ್ತರಗತಿಯ ಜನಗಳಲ್ಲಿ ಅಂದರೆ ಅರಮನೆಗಳಲ್ಲಿ ದೊಡ್ಡ ದೊಡ್ಡ ಅಧಿಕಾರಿಗಳ ಮನೆಯಲ್ಲಿ ಹೆಣ್ಣು ಮಕ್ಕಳಿಗೆ ತಕ್ಕಮಟ್ಟಿಗೆ

[352] ಎ.ಕ. x, ಬೌರಿಂಗ್ ಪೇಟೆ 65, ಕ್ರಿ.ಶ. 900.

ವಿದ್ಯಾಭ್ಯಾಸಗಳಲ್ಲಿ ನರ್ತನ, ಸಂಗೀತ ಮುಂತಾದ ಕಲೆಗಳಿಗೆ ಹೆಚ್ಚು ಪ್ರಾಧಾನ್ಯತೆವಿದ್ದಂತೆ ಕಾಣುತ್ತದೆ. ಮಹಾ ಸಾಮಂತ ಶುದ್ರಕಾಂಕನ ಹೆಂಡತಿಯಾದ ಜಕ್ಕಿಸುಂದರಿಯನ್ನು 'ಸಹಜ ಸರಸ್ವತಿ' ಎಂದು ಶಾಸನವೊಂದರಲ್ಲಿ ಕರೆಯಲಾಗಿದೆ.[353]

ಮಾಂಡಳೀಕ ಉದಯಾದಿತ್ಯನ ಪತ್ನಿ ಲಚ್ಚಲಾದೇವಿಯ ನರ್ತನವನ್ನು ಶಾಸನ ಬಣ್ಣಿಸಿದೆ.[354] ತ್ರಿಭುವನ ಮಲ್ಲದೇವನ ಪಟ್ಟದ ರಾಣಿ ಚಂದಲಾದೇವಿಯು 'ಶ್ರೀ ನೃತ್ಯ ವಿದ್ಯಾಧರಿ' ಎನಿಸಿಕೊಂಡಿದ್ದಳು.[355] ಜೊತೆಗೆ ಇವಳು ಅನೇಕ ದತ್ತಿಗಳನ್ನು ಕೊಡುವುದರ ಮೂಲಕ ವೈಧಿಕರ ವಿದ್ಯಾಭ್ಯಾಸಕ್ಕೆ ನೆರವಾಗಿರುವಳು. ಪಿರಿಯು ಕೇತಲದೇವಿಯನ್ನು ಅಭಿನವ ಸರಸ್ವತಿಯೆಂದೂ ಅನೇಕ ದೇಶ ಭಾಷಾ ಸಂಗೀತ ವಿದ್ಯಾಧರಿ ಎಂದೂ ಶಾಸನವು ಹೊಗಳಿದೆ.[356] ಕದಂಬ ವಂಶದ ರಾಜ ದಯಸಿಂಹನ ರಾಣಿ ಮೇಚಲಾದೇವಿ ಅತಿ ಚತುರೋಕ್ತಿಯಲ್ಲಿ ಸರಸ್ವತಿಗು ಮೇಲೆನಿಸಿದ್ದಳು.[357]

ರೆಬ್ಬಲಾದೇವಿಯು[358] ಸರಸ್ವತಿಯ ಕೈಯಲ್ಲಿರುವ ವೀಣೆಯೆಂದು ಶಾಸನ ಬಣ್ಣಿಸಿದೆ. ಹೊಯ್ಸಳ ವಿಷ್ಣುವರ್ಧನನ ರಾಣಿ ಶಾಂತಲೆಯ ಕಲಾ ಪ್ರೌಢಿಮೆಯನ್ನಂತೂ ಅನೇಕ ಶಾಸನಗಳು ಹೊಗಳಿರುವುದು ಆಕೆಯ ವಿದ್ಯೆಯ ಕೈಂಕರ್ಯವನ್ನು ತಿಳಿಯಬಹುದು.[359] ವಿಜಯನಗರದ ರಾಜ ಕೃಷ್ಣದೇವರಾಯನ ರಾಣಿಯರಾದ ಚಿನ್ನಲಾದೇವಿ, ತಿರುಮಲಾದೇವಿ, ಮತ್ತು ಜಗನ್ಮೋಹಿನಿಯರೂ ಸಹ ವಿದ್ಯಾವತಿಯರಾಗಿದ್ದರು. ಹಾಗೆಯೇ ಸಂಗಮ ಸಾಳ್ವ ಮನೆತನದ ರಾಜಕುಮಾರಿಯರು, ಸಹ ವಿದ್ಯಾವತಿಯರಾಗಿದ್ದರು.

ಹೀಗೆ ಸ್ತ್ರೀಯರ ಮತ್ತು ರಾಣಿಯರ ವಿದ್ಯಾಭ್ಯಾಸವು ಮುಖ್ಯವಾಗಿ ಕಲೆಗಳ ಕಡೆ ಒಲಿದಿತ್ತೆಂದೂ, ಸಾಮಾನ್ಯ ವರ್ಗದ ಸ್ತ್ರೀಯರು ಸಾಮಾನ್ಯವಾಗಿ ಅವಿದ್ಯಾವಂತರಾಗಿಯೇ ಉಳಿಯುತ್ತಿದ್ದರೆಂದೂ ಸ್ಥೂಲವಾಗಿ ಹೇಳಬಹುದು. ಸಾಮಾನ್ಯವರ್ಗದ ಸ್ತ್ರೀಯರಲ್ಲಿ ದೇವದಾಸಿಯರು ಗೀತ, ನರ್ತನ ಮುಂತಾದ ಕಲೆಗಳಲ್ಲಿ ಪರಿಣಿತರಾಗಿದ್ದರು. ಉನ್ನತ ಅಂದರೆ ರಾಜಮನೆತನದಲ್ಲಿನ

---

353 ಎ.ಕ. xI, ಚಿತ್ರದುರ್ಗ, 74, ಕ್ರಿ.ಶ. 968.

354 ಎ.ಕ. VII, ಶಿಕಾರಿಪುರ, 109, ಕ್ರಿ.ಶ. 1070.

355 ಇ.ಡಿ. XXVIII, ಪು–33, ಕ್ರಿ.ಶ. 1082.

356 ಎಸ್.ಐ.ಐ. IX, I, 159, ಕ್ರಿ.ಶ. 1090.

357 ಎ.ಕ. v, ಮುಂಜರಾಬಾದ್, 18, ಕ್ರಿ.ಶ. 1095.

358 ಎಸ್.ಐ.ಐ, XI, I 158, ಕ್ರಿ.ಶ. 1090.

359 ಎ.ಕ. ii, ಶ್ರವಣ ಬೆಳಗೊಳ–132, ಕ್ರಿ.ಶ. 1132.

ಸ್ತ್ರೀಯರು ಮಾತ್ರ ವಿದ್ಯಾವತಿಯರಾಗಿ ಸಾಹಿತ್ಯ ಸೃಷ್ಟಿಗೂ ಕೈಹಾಕಿರುವುದು ವಿಶೇಷವಾಗಿದೆ. ಹಾಗಾಗಿ ಪ್ರಸ್ತುತ ಉಪ ಅಧ್ಯಾಯದಲ್ಲಿ ಸಾಹಿತ್ಯ ಸೃಷ್ಟಿಸಿದ ರಾಣಿಯರನ್ನು ಅವರ ಸಾಹಿತ್ಯ ಗ್ರಂಥಗಳೊಂದಿಗೆ ವಿವೇಚಿಸಲಾಗಿದೆ.

ವಿವಿಧ ಶಾಸ್ತ್ರಗಳಿಂದ ಮೈಗೂಡಿರುವ ವಾಙ್ಮಯವಾದ ಈ ಸಾಹಿತ್ಯ ಕೃಷಿಯನ್ನು ಪ್ರಾಚೀನ ಕಾಲದಲ್ಲಿ ಕ್ರಿ.ಶ. 1150ರ ವರೆಗೂ ಕನ್ನಡದಲ್ಲಿ ಯಾವ ಸ್ತ್ರೀಯರು ಮಾಡಿರುವಂತೆ ತಿಳಿದು ಬರುವುದಿಲ್ಲ. ಕ್ರಿ.ಶ. ಪ್ರಾರಂಭದಲ್ಲಿ ಶಾತವಾಹನರ ಕಾಲದ ರಾಜ 7ನೇ ಹಾಲನಿಂದ ವಿರಚಿತ ಪ್ರಾಕೃತ ಭಾಷೆಯ ಶೃಂಗಾರ ಕಾವ್ಯವಾದ ಗಾಥಸಪ್ತಸತಿ ಕೃತಿಯಲ್ಲಿ 7 ಜನ ಕವಿಯತ್ರಿಯರ ಉಲ್ಲೇಖಗಳು ಕಂಡುಬರುತ್ತವೆ. ರೇವಾ, ರೋಹ, ಮಾಧವಿ, ಅನುಲಕ್ಷ್ಮಿ, ಪಾಹೈ, ವದ್ಧಾವಹೀ ಮತ್ತು ಶಶಿಪ್ರಭಾ ಎಂಬ ಕವಿಯತ್ರಿಯರ ಹೆಸರುಗಳಿವೆ.[360]

ಏಳನೆಯ ಶತಮಾನದ ಬಾದಾಮಿ ಚಾಲುಕ್ಯರ ಕಾಲವನ್ನು ಗಮನಿಸಿದರೆ ಇಮ್ಮಡಿ ಪುಲಕೇಶಿಯ ಸೊಸೆ ಚಂದ್ರಾದಿತ್ಯನ ರಾಣಿ ವಿಜಯಾಂಬಿಕೆ / ವಿಜ್ಜಿಕೆ/ ವಿಜಯ ಭಟ್ಟಾರಿಕೆ ಕೌಮದಿ ಮಹೋತ್ಸವ ಎಂಬ ಕೃತಿ ರಚಿಸಿ ಕರ್ನಾಟಕದ ಪ್ರಥಮ ಕವಯಿತ್ರಿಯಾಗಿ ಕಾಣಿಸುತ್ತಾಳೆ. ಇದು ಐದು ಅಂಕದ ಚಿಕ್ಕದಾದ ನಾಟಕ. ರಾಜಕೀಯ ಹಿನ್ನೆಲೆಯ ಕಥಾ ವಸ್ತುವನ್ನು ಹೊಂದಿರುವಂತಹದ್ದಾಗಿದ್ದು[361] ಅವಳ ಕಾಲ, ದೇಶ, ವ್ಯಕ್ತಿತ್ವದ ಬಗ್ಗೆ ನಿಶ್ಚಿತವಾದ ಅಭಿಪ್ರಾಯಗಳು ಇಲ್ಲ. ಹತ್ತನೆಯ ಶತಮಾನದ ರಾಜಶೇಖರನು ಇವಳನ್ನು ತನ್ನ ಸಾಹಿತ್ಯದಲ್ಲಿ

'ಸರಸ್ವತೀ ಕರ್ಣಾಟೀ ವಿಜಯಾಂಕಾ ಜಯತ್ಯಸ್ ।
ಯೊ ವೈದರ್ಭಗಿರಾಂ ವಾಸಃ ಕಾಲಿದಾಸಾದ ನಂತರಮ್' ॥

ಕಾಳಿದಾಸನ ನಂತರ ವೈಧರ್ಭೀ ಶೈಲಿಯಲ್ಲಿ ಬರೆದ ಕರ್ಣಾಟ ದೇಶದ ವಿಜಯಾ ಸರಸ್ವತಿಯಂತೆ ರಾರಾಜಿಸುತ್ತಾಳೆ, ಎಂದು ಅವಳನ್ನು ವರ್ಣಿಸಿದ್ದಾನೆ.[362] ಹಾಗೂ ರಾಜಶೇಖರಿನಿಗಿಂತ ಪಾಚೀನಳೆಂಬುದು ಇದರಿಂದ ಗೊತ್ತಾಗುತ್ತದೆ. ಮತ್ತೊಂದು ಗಮನಾರ್ಹವಾದ ವಿಷಯವೆಂದರೆ,

---

[360] ಪೊಜಿಷನ್ ಆಫ್ ವುಮೆನ್ ಇನ್ ಹಿಂದೂ ಸಿವಿಲಿಜೇಷನ್, ಪು–17.

[361] ಡಾ. ಈರಣ್ಣ ಕೆ.ಪಿ, ***ಬಾದಾಮಿ ಚಾಲುಕ್ಯರ ಸಾಂಸ್ಕೃತಿಕ ಪರಂಪರೆ,*** ಪು–84–85.

[362] ಡಾ.ಎ. ಮುರಿಗೆಪ್ಪ, **ಬಾದಾಮಿ ಚಾಲುಕ್ಯರು,** ಪುಟ–274, ಪ್ರಸಾರಂಗ, ಹಂಪಿ, ವಿಶ್ವವಿದ್ಯಾಲಯ, 2009.

"ನಿಲೋತ್ಪಲದಲ ಶ್ಯಾಮಿಆಂ ವಿಜ್ಜಿಕಾ ಮಾವುಜಾನತಾ ।

ವೃಥೈವ ದಂಡಿನಾ ಪ್ರೋಕ್ತಾ ಸರ್ವಶುಕ್ಲಾ ಸರಸ್ವತಿ"[363]

'ಶ್ಯಾಮಲ ವರ್ಣದ ವಿಜ್ಜಿಕೆಯನ್ನರಿಯದೇ ದಂಡಿಯು ಸರಸ್ವತಿಯ ಗೌರವ ವರ್ಣದವಳೆಂದು'ಸುಮ್ಮನೆ ವರ್ಣಿಸಿದ್ದಾನೆ. ಅಂದರೆ ತಾನೇ ಸರಸ್ವತಿಯ ಅವತಾರವೆಂದು ಸ್ವತಃ ಹೇಳಿಕೊಂಡಿದ್ದಾಳೆ.

"ಏಕೋಭೂತ್ ನಲಿನಾತ್ ತತ್ಶ್ಚಪುಲಿನಾತ್ ಪಲ್ಮೀಕತಶ್ಚಾಪರ

ತೇ ಸರ್ವೆ ಭವಂತಿ ಕವಯುಸ್ತೇಭ್ಯೋ ನಮಸ್ಕುರ್ಮಹೆ ॥

ಆರ್ವಾಂಚೋ ಯದಿ ಗದ್ಯಪದ್ಯ ರಚನೈಶ್ಚೇಶ್ಚಮತ್ಕುರ್ವತೆ।

ತೇಷಾ ಮೂರ್ಧ್ನಿ ದದಾಮಿ ವಾಮಚರಣಂ ಕರ್ಣಾಟರಾಜ ಪ್ರಿಯಾ"

'ಕಮಲದಿಂದ ಹುಟ್ಟಿದ ಬ್ರಹ್ಮ, ಮಳಲಿನಿಂದ ಹುಟ್ಟಿದ ವ್ಯಾಸ, ಹುತ್ತದಿಂದ ಹುಟ್ಟಿದ ವಾಲ್ಮೀಕಿ, ಇವರೇ ಕವಿಗಳು । ಅವರಿಗೆ ನಮ್ಮ ವಂದನೆ; ಉಳಿದವರು ಗದ್ಯ–ಪದ್ಯ ರಚನಾ ಚಾತುರ್ಯವನ್ನು ತೋರಿಸಹೋದರೆ, ಕರ್ಣಾಟಕ ರಾಜಪ್ರಿಯೇಯಾದ ನಾನು ಅವರ ತಲೆಯ ಮೇಲೆ ಎಡಗಾಲನ್ನಿರುಸತ್ತೇನೆ.[364] 'ಕೌಮುದಿ ಮಹೋತ್ಸವ' ನಾಟಕದ ಪ್ರತಿಯೂ ಸದ್ಯ ದೊರೆತಿರುವುದು ಗೆದ್ದಲು ತಿಂದ ಉಳಿದ ಭಾಗ ! ಒಂದು ಶ್ಲೋಕದ ಅಳಿದುಳಿದ ಭಾಗದಲ್ಲಿ 'ಕಯಾನಿಬಬ್ಬಂ' ಎಂಬುದರ ಆಧಾರದಿಂದಲೂ, 'ಜಯಂತಿ ಪ್ರಥಮ ವಿಜಯಾ' ಎಂಬ ನಾಟಕ ವಾಕ್ಯದಿಂದಲೂ ಅಲ್ಲದೆ ದೊರೆವ ಆಂತರಿಕ ಆಧಾರದಿಂದಲೂ ಎಂಟನೆಯ ಶತಮಾನದ ನಾಟಕವಿದು ಎಂದು ಹೇಳಬಹುದಾದ ಆಧಾರಗಳಿವೆ.[365]

---

363 N. Lakshminarayana Rao, ***The Chalukayas Karnataka, Darshan,*** P-40.

364 ಡಾ.ಎ. ಮುರಿಗೆಪ್ಪ, ***ಬಾದಾಮಿ ಚಾಲುಕ್ಯರ ಸಾಂಸ್ಕೃತಿಕ ಪರಂಪರೆ,*** ಪು–274, ಪ್ರಸಾರಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.2009,

365 ಅದೇ, ಪು–274,75.

'ಕ್‌ಮುದೀ ಮಹೋತ್ಸವ' ಐದಂಕದ ನಾಟಕದಲ್ಲಿ, ರತ್ನಾವಳಿಯ ಪ್ರಭಾವವೂ ಇದೆ.

ವಿರಸಾಪಿ ಕೃತಿ; ಪ್ರಪ್ಯಗೆ ಮಧುನಿಷ್ಯಂದ ಮಯೀಂ ದಶಾಂತರಂ

ಯದಿ ನಾಮ ಸತಾಮನುಗ್ರಃ ಪ್ರಾವರವೇರಿವಾತಪಮ್[366]

ಪ್ರಕೃತಿ ವರ್ಣನೆಯಲ್ಲಿ ಉಜ್ಜಿಕೆಯದು ಎತ್ತಿದ ಕೈ ಚಂದ್ರನ ಕಲೆಯೊಂದಿಗೆ ಸ್ಪರ್ಧಿಸುತ್ತಿರುವಂತೆ ಕಿಂಶುಕದ ಕೇಸರ ಕಾಣಿಸಿದಂತೆ ಕವಯಿತ್ರಿಗೆ ಕವಯಿತ್ರಿ ತನ್ನ ಹಿಂದಿನ ನಾಟಕಕಾರರ ಕೃತಿಗಳನ್ನೆಲ್ಲಾ ಅಭ್ಯಾಸ ಮಾಡಿರಬೇಕು, ಎಂಬುದು ನಿಶ್ಚಿತ.[367] ಇವಳದೊಂದು ಉಲ್ಲೇಖವನ್ನು ಸಾಹಿತ್ಯಕ್ಷೇತ್ರದಲ್ಲಿ ಬಿಟ್ಟರೆ 12ನೆಯ ಶತಮಾನದ ಉತ್ತರಾರ್ಧದಲ್ಲಿ ಅಕ್ಕಮಹಾದೇವಿ ಮತ್ತು ಉಳಿದ ವಚನಗಾರ್ತಿಯರು ಬರುವವರೆವಿಗೂ ಯಾವ ಸ್ತ್ರೀಯಾಗಲೀ ಸಾಹಿತ್ಯ ಸೃಷ್ಟಿಗೆ ಕೈ ಹಾಕಲಿಲ್ಲ.

ಕಾಣಸಿಗುವಂತಹ ರಾಜಮನೆತನಗಳಲ್ಲಿನ ರಾಣಿವರ್ಗ ಹೆಚ್ಚಾಗಿ ರಾಜಕೀಯ, ಧಾರ್ಮಿಕ, ಸಾಮಾಜಿಕ, ಕಲಾಕ್ಷೇತ್ರದಲ್ಲಿ ಶ್ರಮಿಸಿ ತಮ್ಮದೇ ಆದ ಉಜ್ವಲ ಕಾಣಿಕೆಯನ್ನು ಕರ್ನಾಟಕದ ಸಂಸ್ಕೃತಿಗೆ ಸಲ್ಲಿಸಿದ್ದಾರೆ. ಆದರೆ ವಿಜಯನಗರ ಅರಸರ ಕಾಲದಲ್ಲಿ ಸಾಹಿತ್ಯ ಕ್ಷೇತ್ರವು ಸುವರ್ಣಯುಗವೆನಿಸಿತು. ಎಲ್ಲಾ ಧರ್ಮಗಳು ಉನ್ನತಿಗೊಂಡು ಕನ್ನಡದ ಬೊಕ್ಕಸವನ್ನು ತುಂಬಿಸಿದವು. ಈ ಕಾಲದಲ್ಲಿ ಸಾಹಿತ್ಯ ಕ್ಷೇತ್ರದಲ್ಲಿ ರಾಣಿಯರು ಸಾಧಿಸಿರುವ ಸೇವೆ ಕಡಿಮೆಯೇನಲ್ಲ. ಇಲ್ಲಿ ಸಾರ್ವತ್ರಿಕ ಬೆಳವಣಿಗೆಗೆ ಸಾರ್ವತ್ರಿಕ ಉತ್ತೇಜನ ದೊರಕಿ ಸಂಸ್ಕೃತ ಕನ್ನಡ, ತೆಲುಗು, ಭಾಷೆಯ ಸಾಹಿತ್ಯದ ಅಭಿವೃದ್ಧಿಯಾಯಿತು. ರಾಣಿಯರ ವರ್ಗದಲ್ಲಿ ಹೆಚ್ಚಾಗಿ ಸಂಸ್ಕೃತ ಸಾಹಿತ್ಯದ ಬೆಳವಣಿಗೆ ಆಯಿತು.[368]

ವಿಜಯನಗರ ಸಾಮ್ರಾಜ್ಯದಲ್ಲಿ ಮೊಟ್ಟಮೊದಲ ವಂಶವಾದ ಸಂಗಮ ಮನೆತನದಲ್ಲಿ ಕಾಮಾಂಬಿಕೆ ಸಂಗಮನ ರಾಣಿಯಾಗಿ ಪ್ರಥಮವಾಗಿ ಗುರುತಿಸಿಕೊಂಡಿದ್ದಾಳೆ. ಈಕೆಗೆ 'ಶಾರದಾ ದೇವಿ' ಎಂಬ ಹೆಸರಿದ್ದು 'ಶಾಸನಗಳಲ್ಲಿ ಸರಸ್ವತಿ' ಎಂದು ಕರೆದಿವೆ. ಈಕೆ ಒಬ್ಬ ವಿದ್ವಾಂಸಳಾಗಿರಬಹುದು.[369] ಅಂತೆಯೇ ಬುಕ್ಕನ ರಾಣಿ ಹೊನ್ನಾಯಿಯನ್ನು ಹಲವು ಕೃತಿಗಳು

---

366 ಅದೇ,

367 ಅದೇ, ಪುಟ–276.

368 ಪುಲುಮತಿ ಶ್ಯಾಮರಾವ್, ***ವಿಜಯನಗರ ಕಲೆ ಮತ್ತು ಸಾಹಿತ್ಯ ಪು***– ಮೈಸೂರು ಸಂಸ್ಥಾನ ಸಾಹಿತ್ಯ ಮತ್ತು ಸಂಸ್ಕೃತಿ ಅಭಿವೃದ್ಧಿ ಇಲಾಖೆ, ಬೆಂಗಳೂರು, 1995.

369 ವಿಜಯನಗರ ಅಧ್ಯಯನ ಸಂ–3, ಪು–104.

ಇವಳು ಬುದ್ಧಿವಂತಳಾಗಿದ್ದಳೆಂದು, ಸರ್ವಶಾಸ್ತ್ರ ನಿಪುಣೆಯಾಗಿದ್ದಳೆಂದು ಕಾಮಶಾಸ್ತ್ರಗಳಲ್ಲಿ ರತಿಯ ಹಾಗೆ ಜ್ಞಾನ ವೇದಗಳ ಅರಿತಳೆಂದು ತಿಳಿಸಿದು ಬಂದಿರುವುದರಿಂದ ಈಕೆ ವಿದ್ವಾಂಸೆಯಾಗಿರಬಹುದೆಂದು ತಿಳಿಯಬಹುದಾಗಿದೆ.[370] ಸಂಗಮ ವಂಶದಲ್ಲಿ ಹೆಚ್ಚು ಪ್ರಮುಖವಾದ ಹೆಸರು ಗಂಗಾದೇವಿ. ಈಕೆ ವೀರ ಕಂಪಣನ ರಾಣಿ. ವಿಜಯನಗರ ಕಾಲದ ಕನ್ನಡಿಗರ ಹೆಮ್ಮೆಯ ಕವಿಯಿತ್ರಿ ಗಂಗಾದೇವಿ ಈಕೆ ವಿಜಯನಗರದ ಪ್ರಮುಖ ವಿದ್ವಾಂಸೆಯಾಗಿದ್ದಳು. ಈಕೆಯ ಕೃತಿಯಿಂದಲೇ ವಿಜಯನಗರದ ಬಗ್ಗೆ ಹಲವು ವಿಚಾರಗಳು ತಿಳಿದು ಬರುತ್ತವೆ. ಈಕೆ ರಚಿಸಿದ ಕೃತಿಯ ಹೆಸರು 'ವೀರಕಂಪರಾಯ ಚರಿತಂ' ಅಥವಾ 'ಮಧುರ ವಿಜಯಂ' ಸಂಸ್ಕೃತದಲ್ಲಿ ರಚನೆಗೊಂಡ ಐತಿಹಾಸಿಕ ಕಾವ್ಯ.[371] ಈ ಕಾವ್ಯ ವೀರಕಂಪಣರಾಯನ ಪರಾಕ್ರಮವನ್ನು ಹೊಗಳಿ ರಚಿಸಲಾಗಿದೆ. ಜೊತೆಗೆ ವಿಜಯನಗರದ ಸ್ತ್ರೀಯರು ಕನ್ನಡಿಗರು ಎಂಬುದಕ್ಕೆ ಈ ಕೃತಿ ಆಧಾರವಾಗಿದೆ. ವಿಜಯನಗರ ಅರಸರು ಕನ್ನಡಿಗರೆಂದು ಸ್ಪಷ್ಟವಾಗಿ ತಿಳಿಸಲಾಗಿದೆ.[372] ಕೃತಿ ಇವಳನ್ನು ಕಂಪಣ ನು' 'ಲೋಚನಾನಂದಿನಿ' ಸರೋಜಮುಖ, ಕಮಲ ಮುಖಿ ಎಂದು ಕರೆಯುತ್ತಿದ್ದರಿಂದ ಈಕೆ ಸುಂದರವಾಗಿರಬಹುದು. ಜೊತೆಗೆ 'ದೇವಿ' ಎಂದು ಕರೆಯುತ್ತಿದ್ದರಿಂದ 'ಉತ್ತಮ 'ಕುಲಭೂಷಿತೆಯಾಗಿದ್ದಳೆಂದು ತಿಳಿಯಬಹುದು.

ಸಂಸ್ಕೃತದಲ್ಲಿ ರಚಿಸಿರುವ ಚಾರಿತ್ರಿಕ ಈ ಕಾವ್ಯ ಒಂಭತ್ತು ಸರ್ಗಗಳುಳ್ಳ ಕಾವ್ಯದ ಕೆಲವು ಶ್ಲೋಕಗಳು ಲುಪ್ತವಾಗಿದ್ದರೂ, ಕಾವ್ಯದ ಕೊನೆಗೆ ಹೇಳಿರುವಂತೆ 'ಇತಿ ಶ್ರೀಗಂಗಾದೇವಿಯ ವಿರಚಿತ ಮಧುರಾವಿಜಯ ನಾಮನಿ ವೀರಕಂಪರಾಯ ಚರಿತೇಸಮಪ್ತ' ಎಂದಿರುವುದು ವಿಶೇಷ. ಈ ಕೃತಿಯು ವಿವಿಧ ವೃತ್ತ ಆಕರ್ಷಕ ಅಲಂಕಾರಗಳಿಂದ ಚೇತೋಹಾರಿಯಾಗಿದೆ. 'ವೀರಕಂಪರಾಯ ಚರಿತಂ' ಸಾಮ್ರಾಟನಾಗಿ ಪ್ರಜಾವತ್ಸಲನಾಗಿ ಧರ್ಮಮಾರ್ಗದಲ್ಲಿ ರಾಜ್ಯವಾಳುತಿದ್ದ ಬುಕ್ಕರಾಯನ ಪ್ರಸಂಗದೊಂದಿಗೆ ಪ್ರಾರಂಭವಾಗಿದೆ. ಬುಕ್ಕರಾಜನ ಮಗ 'ಕಂಪಣ' ನ ಜನನ, ರಾಜಚಿತ ಶಿಕ್ಷಣ ಸಂಸ್ಕಾರ ಪಡೆದು ಪ್ರಜಾಪೀಡಕ ತುರಷ್ಕರನ್ನು ಧಮನ ಮಾಡಿ ಧರ್ಮ ರಾಜ್ಯವನ್ನು ನಡೆಸಿದ ಕಥೆಯಿದೆ. ಕಾಂಚೀಪುರವನ್ನು ಗೆದ್ದು ಶ್ರೀರಂಗ ಪಟ್ಟಣವನ್ನು ತುರಷ್ಕರಿಂದ ಮುಕ್ತಗೊಳಿಸುವ

---

[370] ಸೂರ್ಯ ನಾರಾಯಣ ರಾವ್, ***ಮರೆಯಲಾಗದ ಮಹಾಸಾಮ್ರಾಜ್ಯ ವಿಜಯನಗರ,*** ಪು–180, ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2000.

[371] ಕೆ. ಕುಶಲಾಪ್ಪಗೌಡ, ***ಮಧುರ ವಿಜಯ ಅಥವಾ ವೀರಕಂಪಣರಾಯ, ಚರಿತಂ,*** ಪು–7–13, ಜಯಗೌರಿ ಪ್ರಕಾಶನ,ಅಂಚೆ ಪೆರಾಜೆ, ಸುಳ್ಯ. 1981.

[372] ಅದೇ, ಪು–15–16.

ಮೂಲಕ ತುಂಗಭದ್ರೆಯ ದಕ್ಷಿಣದ ಪ್ರದೇಶವನ್ನು ವಿಜಯನಗರ ಸಾಮ್ರಾಜ್ಯಕ್ಕೆ ಸೇರಿಸಿದನು. ಹೀಗೆ ಪತಿಯಾದ ಒಂದನೆಯ ಕಂಪಣರಾಯನ ದಿಗ್ವಿಜಯ, ಮಧುರೆಯನ್ನು ತುರಷ್ಕರಿಂದ ಮುಕ್ತಗೊಳಿಸಿದ ಸಂಗತಿಗಳನ್ನು 'ಮಧುರಾ ವಿಜಯ' ಹೆಸರಿನಲ್ಲಿ ಕಾವ್ಯವಾಗಿಸಿರುವ ಗಂಗಾದೇವಿಯ ಮಾವ ಬುಕ್ಕರಾಯ ಮತ್ತು ಗಂಡ ಕಂಪಣರಾಯನ ಕಾರ್ಯ ಸಾಹಸ–ವೈಭವ–ಸೈನ್ಯವ್ಯವಸ್ಥೆ, ದಿಗ್ವಿಜಯ ಮತ್ತು ಚೋಳ, ಕೇರಳ, ಸಕಲ ಸುಖಭೋಗಗಳೊಂದಿಗೆ ರಾಜ್ಯವನ್ನಾಳಿದ್ದನ್ನು ಗಂಗಾಂಬಿಕೆ ತನ್ನ ಕಾವ್ಯದಲ್ಲಿ ರಮಣೀಯವಾದ ಸ್ತ್ರೀವಿಶಿಷ್ಟವಾದ ಅಲಂಕಾರ–ವರ್ಣನೆಗಳೊಂದಿಗೆ ಬಣ್ಣಿಸಿದ್ದಾಳೆ.

ಹೀಗೆ ವಿಜಯನಗರ ಸಾಮ್ರಾಜ್ಯದ ಸಂಸ್ಥಾಪಕರಾದ ವೀರ ಬುಕ್ಕರಾಯನ ಮಗ ಒಂದನೇ ಕಂಪಣರಾಯನ ರಾಣಿಯಾದ ಗಂಗಾದೇವಿ ಸಂಸ್ಕೃತ ಭಾಷೆಯಲ್ಲಿ ಪೂರ್ಣ ಪ್ರಮಾಣದ ಕಾವ್ಯವನ್ನು ರಚಿಸಿರುವ ಮೊದಲ ಕವಯತ್ರಿ. ಇದರ ಶ್ಲೋಕಗಳು ಆಕೆಯ ಚೆಲುವಿತೆ ಮತ್ತು ಅವಳ ಕಾವ್ಯಶಕ್ತಿಯನ್ನು ಪರಿಚಯಿಸುತ್ತವೆ.

ಈ ಕಾವ್ಯವನ್ನು ಹಲವಾರು ವಿದ್ವಾಂಸರು ಟೀಕೆ ಮಾಡಿ ಇಂತಹ ಉತ್ತಮ ಗ್ರಂಥವನ್ನು ಗಂಗಾದೇವಿ ರಚಿಸಲು ಸಾಧ್ಯವಿಲ್ಲ. ಬೇರೆ ಯಾರೋ ಬರೆದು ಇವಳ ಹೆಸರನ್ನು ಅಂಕಿತ ಗೊಳಿಸಿರಬಹುದು. ಎಂದು ಹೇಳಿರುವುದನ್ನು 'ಹರಿಹರ ಶಾಸ್ತ್ರಿರವರು ಕಟುವಾಗಿ ಟೀಕಿಸಿದ್ದಾರೆ. ನಮ್ಮ ಸಹಮತವೂ ಹರಿಹರ ಶಾಸ್ತ್ರಿಗಳ ಕಡೆಗೆ ಮಹಿಳೆಯರ ಏಳಿಗೆಯನ್ನು ಬಯಸದ ಪುರುಷ ಆ ಮೂಲವನ್ನು ಕಂಡುಕೊಳ್ಳಬಹುದು. ಇದನ್ನು ಗಮನಿಸಿದರೆ ಹೆಣ್ಣನ್ನು ಕೇವಲ ದ್ವಿತೀಯ ದರ್ಜೆಯ ಭಾವನೆಯಿಂದ ನೋಡಲು ಬಯಸುತ್ತಾರೆಯೇ ಹೊರತು ಉನ್ನತ ಮಟ್ಟದಲ್ಲಿ ಹೇಳಿದರೂ ಆ ಬಗ್ಗೆ ಹೆಚ್ಚು ಮಹತ್ವ ನೀಡುವುದಿಲ್ಲವೆಂಬುದು ಸ್ಪಷ್ಟವಾಗುತ್ತದೆ.

ಸಾಳ್ವ ಮನೆತನದಲ್ಲಿ ಯಾವ ರಾಣಿಯರೂ ಸಹ ಸಾಹಿತ್ಯ ಸೃಷ್ಟಿಸಿರುವಂತೆ ಕಂಡುಬರುವುದಿಲ್ಲ. ಆದರೆ ಮಧ್ಯಯುಗದ ಇನ್ನೊಬ್ಬ ಪ್ರತಿಭಾನ್ವಿಕೆ ಕನ್ನಡ ಕವಯಿತ್ರಿ ನಾಗಲಾಂಬೆ ಸಂಸ್ಕೃತ ಕನ್ನಡ ಭಾಷಾ ಪರಿಣತಿ ಹೊಂದಿದ್ದ ಶಾಸನೋಕ್ತಗಳಾಗಿರುವ ಈಕೆಯ ವ್ಯಕ್ತಿತ್ವವನ್ನು ಸಾಳ್ವ ಕವಿಯು ತನ್ನ ಸಾಳ್ವ ಭಾರತದಲ್ಲಿ ಪ್ರಸ್ತಾಪಿಸಿದ್ದಾನೆ. ವಿಜಯನಗರದ ಮಹಾಮಾಂಡಲೀಕನಾಗಿದ್ದ ಭೈರವರಸನ ಪಟ್ಟದರಾಣಿಯಾಗಿದ್ದ ನಾಗಲಾದೇವಿ, ಧರ್ಮಶ್ರದ್ಧೆಯುಳ್ಳ ದಾನ ಚಿಂತಾಮಣಿ ಮಾತ್ರವಾಗಿರದೆ, ಶ್ರೇಷ್ಠ ಕವಯಿತ್ರಿಯಾಗಿದ್ದಳು. ಈಕೆ ರಚಿಸಿರುವ ಚಂಪೂಕಾವ್ಯ, 'ಷೋಡಶ ಭಾವನೆ' ಅಸಾಧಾರಣಾ ಕೃತಿ, ನೀತಿಬೋಧನೆ, ಧರ್ಮಪ್ರತಿಪಾದನೆಯುಳ್ಳ ಪ್ರಸ್ತುತ ಕೃತಿಯನ್ನು ಕುರಿತು

ಅಧ್ಯಯನ ನಡೆಯಬೇಕಿದೆ. ಸ್ತ್ರೀಸಮಾಜವನ್ನು ಉದ್ದೇಶಿಸಿ ರಚಿಸಿರುವ ಪ್ರಸ್ತುತ ಕೃತಿಯಲ್ಲಿ ಕಂಡುಬರುವ ನಾಗಲದೇವಿಯ, ಕಲಾನೈಪುಣ್ಯ, ಕಾವ್ಯ ಪ್ರೌಢಿಮೆ, ಸಂಸ್ಕೃತ ಕನ್ನಡ ಉಭಯ ಭಾಷಾ ಪ್ರಭುತ್ವ, ಗದ್ಯವಲ್ಲದೆ ಕಂದವೃತ್ತ, ಛಂದೋರೂಪಗಳ ಸಿದ್ಧಿ, ಸುಂದರ ನಿರೂಪಣಾ ಶೈಲಿ ಈ ಗುಣ ಸಮೃದ್ಧಿ ಕಾವ್ಯದುದ್ದಕ್ಕೂ ಪಾರದರ್ಶಕ ಅಹಂಕಾರಿಯೂ ಆಗಿದ್ದ ಸ್ತ್ರೀಯೊಬ್ಬಳ ತನ್ನ ಸತ್ಕರ್ಮ, ನೋಂಪಿಯ ಫಲದಿಂದ ತೀರ್ಥಂಕರರಾಗಿ ಆತ್ಮೋದ್ಧಾರ ಹೊಂದುವ ಕಥೆಯಾಗಿದೆ. ದರ್ಶನ ವಿಶುದ್ಧಿ, ವಿನಯ, ಶೀಲವ್ರತ, ಆಚಾರ್ಯಭಕ್ತಿ, ಅರ್ಹದ್ಭಕ್ತಿ, ಇತ್ಯಾದಿ ಹದಿನಾರು ಭಾವನೆಗಳನ್ನು ಕುರಿತು ನೋಂಪಿಯಾ ಕಥೆಗಳನ್ನು ಈ ಕೃತಿ ಒಳಗೊಂಡಿದೆ. ನಾಗಲಾದೇವಿಯ ಕಾವ್ಯ ನಿರೂಪಣಾ ವಿಧಾನವನ್ನು ಪರಿಚಯಿಸುವ ಸ್ತುತಿಪದ್ಯ ಹೀಗಿದೆ.

ಶಾರದೆಯಂ ಸಂಕಲಕಲಾ
ವಾರಿಧಿಯಂ ನಮಿಸಿ ಭವವಿನಾಶ ನಿಮಿತ್ತಂ
ಸಾರಮೆನಿಸಿರ್ಪ ಷೋಡಶ
ಕಾರಣಮಂ ಪುಣ್ಯ ನಿಲಯಮಂ ವಿರಚಿಸುವೆಂ"[373]

ತುಳುವ ವಂಶದ ರಾಣಿಯರು ಸಾಹಿತ್ಯ ಕ್ಷೇತ್ರದಲ್ಲಿ ಅದ್ವಿತೀಯ ವೆನ್ನುವಷ್ಟರ ಮಟ್ಟಿಗೆ ಸೇವೆ ಸಲ್ಲಿಸಿದ್ದಾರೆ. ಈ ಮನೆತನದಲ್ಲಿ ಸಾಹಿತ್ಯ ಕೊಡುಗೆ ನೀಡಿದವರು 'ತಿರುಮಲಾಂಭ, ಮೋಹನಾಂಗಿ ಮತ್ತು ತುಕ್ಕಾರಾಣಿ ಅಥವಾ ಜಗನ್ಮೋಹಿನಿಯವರು ಪ್ರಮುಖವಾಗಿ ಕಂಡುಬರುವ ರಾಣಿಯರು ಹಾಗೂ ಕವಯಿತ್ರಿಯರು.

ಮೋಹನಾಂಗಿ ಅಥವಾ ತಿರುಮಲಾಂಬೆ ಶ್ರೀಕೃಷ್ಣದೇವರಾಯನ ಹಾಗೂ ತಿರುಮಲ ದೇವಿಯವರ ಹಿರಿಯಮಗಳು ಈಕೆಯ ಹೆಸರು ತಿರುಮಲಾಂಬೆ ಈಕೆ ಸಂಸ್ಕೃತ ವಿದ್ವಾಂಸಳು. ಈಕೆ 'ಮಾರೀಚಿ ಪರಿಣಯಂ' ಎಂಬ ಪ್ರಬಂಧ ರಚಿಸಿದ್ದಾಳೆ. ಈ ಪ್ರಬಂಧದಲ್ಲಿ ಅವತಾರಿಕಾ ಭಾಗದ 99 ಪದ್ಯಗಳು ನಾಲ್ಕನೆಯ ಅಸ್ವಾಸದ 2 ಪದ್ಯಗಳು ಮತ್ತು 2 ಗದ್ಯಗಳು ಮಾತ್ರ ದೊರಕಿ ಪ್ರಕಟಗೊಂಡಿವೆ. ಈ ಕಾವ್ಯದಲ್ಲಿ ತನಗೂ ತನ್ನ ತಾಯಿಗೂ ತಿರುಮಲಾಂಬೆ ಎಂಬ ಒಂದೇ ಹೆಸರು ಇದ್ದುದ್ದರಿಂದ ತಂದೆಯಾದ ಕೃಷ್ಣ ದೇವರಾಯರು 'ಮೋಹನಾಂಗಿ' ಎಂದು ಕರೆಯುತ್ತಿದ್ದರೆಂದು

---

[373] ಡಾ. ಕಮಲಾ ಹಂಪನಾ, **ಬೊಗಸೆ,** ಪುಟ–97.

ಹೇಳಿದ್ದಾಳೆ. ಈ ಕಾವ್ಯದ ಅವತರಣಿಕೆಯಲ್ಲಿ ತನ್ನ ತಂದೆ ಕೃಷ್ಣದೇವರಾಯರು ಹುಟ್ಟಿದ್ದು ಶಕ ಸಂವತ್ಸರ 1393 ವಿಕೃತಿಸಂವತ್ಸರ ಪುಷ್ಯಬಹುಳ ದ್ವಾದಶಿ ಶುಕ್ರವಾರದಂದು ಎಂದು ಹೇಳುತ್ತಾರೆ. ಇದಕ್ಕೆ ಸರಿಯಾಗಿ ಕ್ರಿ.ಶ. 1471ರ ಜನವರಿ 17ರಂದು ರಾಯ ಹುಟ್ಟಿದ್ದು ಎಂದು ತಿಳಿಸುತ್ತಾಳೆ. ತಾನು ಬರೆದ ಚಿತ್ರಗಳನ್ನು ರಾಗಲಾಪನೆಗಳನ್ನು ಮೆಚ್ಚುತ್ತಿದ್ದ ಜೊತೆಗೆ ಮಗಳೊಂದಿಗೆ ಚದರುಂಗವನ್ನು ಆಡುತ್ತಿದ್ದ ಬಗ್ಗೆ ವಿವರಣೆಗಳಿವೆ. ತಂದೆಗೆ ಹೃದಯ ಪ್ರಿಯ 'ಚಿನ್ನಮಾಂಬಾ, ನಾಗಮಾಂಬಾ, ಮನೋಹರ ನರಸಿಂಹ ದೇವರಾಯನ, ಪ್ರಿಯನಂದನ, ನಾಗಮಾಂಬಾ, ತನುಜ ಹೀಗೆ ತನ್ನ ಅಜ್ಜ, ಅಜ್ಜಿ, ತಂದೆ, ತಾಯಿಯರ ಪರಿಚಯ ನೀಡಿದ್ದಾಳೆ.[374] ಈಕೆ ದೊಡ್ಡ ರಸಗ್ರಹಣವಾರಿಣಿ ಎಂದೂ, ಚತುರ ಮುಖಿಯಾಗಿದ್ದಳೆಂದೂ, ರಸೆಜ್ಞೆ, ಗುಣಗ್ರಹಣ ಮತ್ತು ಔಚಿತ್ಯವನ್ನರಿತವಳೆಂದು ತಿಳಿಸಲಾಗಿದೆ.

ಜಗನ್ಮೋಹಿನಿ ಕೃಷ್ಣದೇವರಾಯನ 3ನೆಯ ರಾಣಿ ಒರಿಸ್ಸಾದ ರಾಜಕುಮಾರಿ ಗಜಪತಿಯ ಪ್ರತಾಪರುದ್ರನ ಮಗಳು. ಇವಳಿಗೆ ಲಕ್ಷ್ಮಿ, ಅನ್ನಪೂರ್ಣ, ಜಗನ್ಮೋಹಿನಿ, ತುಕ್ಕಾದೇವಿ ಎಂಬ ಹೆಸರುಗಳಿವೆ.[375] ಜನಗ್ಮೋಹಿನಿಯು ಒಬ್ಬ ವಿದ್ವಾಂಸಳು. ಈಕೆಯು ಕೆಲವು ಪದ್ಯಗಳನ್ನು ಬರೆದಂತೆ ಮುಕುಲನ ಅಭಿದಾವೃತ್ತ ಮಾತೃಕೆಯಿಂದ ವಲ್ಲಭದೇವನ ಸುಭಾಷಿತಾವಳಿಯಿಂದ ತಿಳಿದು ಬರುತ್ತದೆ. ರಾಜನಿಂದ ಅಗಲಿದಾಗ ಉಂಟಾದ ವಿರಹ ವೇದನೆಯನ್ನು ಐದು ಶ್ಲೋಕಗಳಲ್ಲಿ ಬರೆದಿದ್ದಾಳೆ. ಅದು 'ತುಕ್ಕಾ ಪಂಚಕ' ಅಥವಾ 'ಭೃಂಗ ಪಂಚಕ'ವೆಂದು ಪ್ರಸಿದ್ಧವಾಗಿದೆ.[376]

ವಿಜಯನಗರದ ತುಳುವ ಸಂತತಿಗೆ ಸೇರಲ್ಪಡುವ ಮತ್ತೊಬ್ಬ ರಾಣಿ 'ಓದುವ ತಿರುಮಲಾಂಭ' ಈಕೆ ಅಚ್ಯುತ ರಾಯನ ರಾಜ ಮಹಿಷಿ ಹಾಗೂ ಅತ್ಯಂತ ಪ್ರೀತಿ ಪಾತ್ರಳಾದ ರಾಣಿಯಾಗಿದ್ದಳು. ಸಂಸ್ಕೃತ ಸಾಹಿತ್ಯಕ್ಕೆ ಕೊಡುಗೆಯನ್ನಿತ್ತ ಕನ್ನಡತಿಯರಲ್ಲಿ ಕವಯಿತ್ರಿ ವಿಜಯಾ ಎರಡನೆಯವಳು ಗಂಗಾದೇವಿ, ಮೂರನೆಯವಳೇ ಇವಳು. ಇವಳು 'ವರದಾಂಭಿಕಾ ಪರಿಣಯ' ಎಂಬ ಚಂಪೂ ಕಾವ್ಯವನ್ನು ರಚಿಸಿದಳು.[377] ಇದು ಸಮಗ್ರವಾಗಿ ದೊರೆತಿರುವುದು ಕನ್ನಡಿಗರ ಪಾಲಿಗೆ ಸುದೈವವೇ

---

374 ಜಿ.ಎಸ್. ದೀಕ್ಷಿತ್,ಮತ್ತಿತರರು, ***ಕೃಷ್ಣದೇವರಾಯನ ಜೀವನ ಮತ್ತು ಸಾಧನೆ, ಪುಟ–99–100,*** ಪ್ರಾಚ್ಯವಸ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಬೆಂಗಳೂರು. 1997.

375 ಜಿ.ಎಸ್. ದೀಕ್ಷಿತ್, ಇತರರು, ***ಕೃಷ್ಣದೇವರಾಯನ ಜೀವನ ಮತ್ತು ಸಾಧನೆ,*** ಪು–114, ಪ್ರಾಚ್ಯವಸ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಬೆಂಗಳೂರು. 1997.

376 ಎನ್. ಚಿನ್ನಸ್ವಾಮಿ ಸೋಸಲೆ, ***ಸಾಮ್ರಾಜ್ಯ ಮತ್ತು ಸಂಸ್ಥಾನ,*** ಪು–130, ಪ್ರಸಾರಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.2004.

377 ಸರೋಜಿ, ಮಹಿಷಿ, ***ಕರ್ನಾಟಕದ ಕವಯಿತ್ರಿಯರು,*** ಪು–449–450, ಕರ್ನಾಟಕ ಸಹಕಾರಿ ಸಾಹಿತ್ಯ ಸಂಘ, ಧಾರವಾಡ. 1965.

ಸರಿ. ಕಾವ್ಯವು ನರಸರಾಜನ ರೂಪ, ಗುಣ, ಪರಾಕ್ರಮಗಳ ವರ್ಣನೆ, ಅವನ ದಿಗ್ವಿಜಯ ಕಾವೇರಿಯ ಸ್ತುತಿ, ನರಸ ರಾಜನಿಗೂ, ಚೋಳ ರಾಜನಿಗೂ ಆದ ಯುದ್ಧದ ವರ್ಣನೆ, ಸಮುದ್ರದ ವರ್ಣನೆ ನರಸರಾಜ ರಾಮೇಶ್ವರನನ್ನು ಪೂಜಿಸಿದ್ದು ಮುಸ್ಲಿಮರನ್ನು ಸದೆ ಬಡೆದ ವಿಷಯಗಳಿಂದ ಕೂಡಿದೆ. ಮುಂದೆ ಅಚ್ಯುತರಾಯನ ವರ್ಣನೆ, ಯವ್ವನ, ವಿದ್ಯಾಭ್ಯಾಸ, ವರದಾಂಬಿಕೆಯ ಪರಿಚಯ, ಪ್ರೇಮಾಂಕುರ, ವಿವಾಹ, ಕುಮಾರನಾದ ಜಿನವೆಂಕಟಾದ್ರಿಯ ಜನನ, ಯುವರಾಜ ಪಟ್ಟ ಕಟ್ಟಿದ ವಿಷಯಗಳಿಂದ ಕೊನೆಗೊಳ್ಳುತ್ತದೆ.[378]

ಈ ತಿರುಮಲಾಂಬಾ 16ನೇ ಶತಮಾನದ ಸಂಸ್ಕೃತ ಕವಯಿತ್ರಿ 'ವರದಾಂಬಿಕಾ ಪರಿಣಯ' ಎನ್ನುವ ಚಂಪೂಕಾವ್ಯದ ಕರ್ತೃ ಕಾವ್ಯ ಅಲಂಕಾರ ನಾಟಕ ಪುರಾಣ ಆಗಮ ಮತ್ತಿತರ ವಿದ್ಯೆಗಳಲ್ಲಿ ಪರಿಣಿತಳೂ ಆಗಿದ್ದ ಈಕೆ ಸ್ವಾಭಾವಿಕವಾಗಿಯೇ ಪ್ರತಿಭಾವಂತ ಕವಯಿತ್ರಿ ಮತ್ತು ವಿದುಷಿ, 'ರಾಜಾಧಿರಾಜ ಅಚ್ಯುತ ರಾಯ ಸಾರ್ವಭೌಮ', 'ಪ್ರೇಮ ಸರ್ವಸ್ವ ವಿಶ್ವಾಸಭುವಾ' ಎನ್ನುವ ಕಾವ್ಯೋಕ್ತಿಯು ಅವಳು ರಾಜ ಅಚ್ಯುತರಾಯನ ಆಸ್ಥಾನದ ವಿದುಷಿಯರಲ್ಲಿ ಪ್ರಮುಖಾಗಿದ್ದಳೆಂದು ತಿಳಿದು ಬರುತ್ತದೆ. ಆಶ್ರಯದಾತ ರಾಜನ ಸಂತೋಷಕ್ಕಾಗಿ ಆಕೆ 'ವರದಾಂಬಿಕಾ ಪರಿಣಯ'ವನ್ನು ರಚಿಸಿರುವ ಸಾಧ್ಯತೆಯನ್ನು ಇಲ್ಲಿ ತಿಳಿಯಬಹುದು.

ವಿಜಯನಗರದ ಚಕ್ರವರ್ತಿಯಾಗಿ ಅಚ್ಯುತರಾಯನು ರಾಜ್ಯಭಾರ ಮಾಡುತ್ತಿದ್ದ ಅವಧಿಯಲ್ಲಿ ಅಂದರೆ ಹದಿನಾರನೇ ಶತಮಾನದ ಮಧ್ಯಕಾಲದಲ್ಲಿ ರಚನೆಯಾಗಿರುವ ಕಾವ್ಯವು ವಿಜಯನಗರದ ಅರಸರ ಚಾರಿತ್ರಿಕ ವಿವರಗಳನ್ನು ಕೆಲಮಟ್ಟಿಗೆ ಒಳಗೊಂಡಿರುವುದರಿಂದಲೇ ಪ್ರಸ್ತುತ ಈ ಕಾವ್ಯಕ್ಕೆ ಚಾರಿತ್ರಿಕ ಮಹತ್ವವಿದೆ. ಕಾವ್ಯಶಕ್ತಿ, ಪ್ರತಿಭಾವಿಲಾಸ, ವರ್ಣನಾ ವೈಖರಿ ಮತ್ತು ಭಾಷಾ ಪಾಂಡಿತ್ಯದ ದೃಷ್ಟಿಯಿಂದ ತಿರುಮಲಾಂಬಾ ಅದ್ವಿತೀಯ ಕಾವ್ಯ ಪ್ರತಿಭೆಯುಳ್ಳ ಕವಯಿತ್ರಿಯಾಗಿ ಕಂಡುಬರುತ್ತಾಳೆ. ಓಜಸ್ಸು, ಮಾಧುರ್ಯ, ಗುಣಗಳಿಂದ ಕೂಡಿದ ಪ್ರೌಢವಾದ ಕಾವ್ಯಭಾಷೆ, ಏಕಾರ್ಥ–ನಾನಾರ್ಥಗಳಲ್ಲಿ ಪದಪ್ರಯೋಗ ಮಾಡುವ ಶಕ್ತಿ ಪ್ರಾಸ–ಅನುಪ್ರಾಸ. ಅಲಂಕಾರಗಳು ಪ್ರೌಢ ಪ್ರಯೋಗಗಳು, ಸುಂದರವಾದ ಉಪಮಾನಗಳು, ಒಟ್ಟಾರೆ ಚೇತೋಹಾರಿಯಾದ ಅಷ್ಟೇ ರಮಣೀಯವಾದ ಕಾವ್ಯ ಶೈಲಿಯಿಂದ ತಿರುಮಲಾಂಭ ಪಂಡಿತ ಕವಿಯಾಗಿ ಗಮನ ಸೆಳೆಯುತ್ತಾಳೆ.

---

[378] ಅದೇ. ಪು

ವರದಾಂಬಿಕಾ ಪರಿಣಯದ ವಸ್ತು ಈಗಾಗಲೇ ಹೇಳಿರುವಂತೆ ಯುದ್ಧ ಮತ್ತು ಪ್ರೇಮದ ಕಥೆಯನ್ನೊಳಗೊಂಡದ್ದು. ಈ ಯುದ್ಧ ತನ್ನ ಮಾವ ನರಸನಾಯಕ ಮತ್ತು ಪತಿ ಅಚ್ಯುತರಾಯನ ಕಾಲದ್ದಾಗಿ ತುಳು ರಾಜ ನರಸನಾಯಕನ ವಂಶಾವಳಿಯ ವರ್ಣನೆ ದೀರ್ಘವಾಗಿದೆ ನರಸರಾಜನ ದಿಗ್ವಿಜಯ ಪರಾಕ್ರಮ, ಚೋಳರಾಜ್ಯದ ವರ್ಣ ವರದಾಂಬಿಕೆಯೊಂದಿಗೆ ಪ್ರೇಮಾಂಕುರ ಈ ಎಲ್ಲದರ ವರ್ಣನೆ ಅದರಲ್ಲಿದ್ದ ತಿರುಮಲಾಂಭ ಕಾವ್ಯದ ಕೊನೆಯಲ್ಲಿ ತನ್ನನ್ನು ಸಹಜ ಪ್ರತಿಬೆಯ ಕವಯಿತ್ರಿ, ಬಹುಭಾಷಾ ವಿಶಾರದೆ, ಮಧುರ ಕಂಠವುಳ್ಳ ಕವಿಗಳಿಗೆ ಆಶ್ರಯದಾತೆ, ಶಾಸನಗಳನ್ನು ಬರೆದ ಲಿಪಿಕಾರಳು ಎಂದು ಹೇಳಿ ಕೊಂಡಿರುವುದು ಗಮನಾರ್ಹ.

ಹಂಪೆಯ ವಿಠ್ಠಲದೇವಾಲಯದ ಗರ್ಭಗೃಹದ ಉತ್ತರಕ್ಕೆ ತಳಪಾಯದಲ್ಲಿರುವ ಶಾಸನದಲ್ಲಿ 1533ರಲ್ಲಿ ದಾನವನ್ನು ಮಾಡಿದ ಬಗ್ಗೆ ಸಂಸ್ಕೃತ ಶ್ಲೋಕವಿದೆ. ಇದನ್ನು ಬರೆದವಳು ಓದುವ ತಿರುಮಲಮ್ಮ ಎಂದು ಶಾಸನದಲ್ಲೇ ಹೇಳಲಾಗಿದೆ. ಇದಲ್ಲದೆ ಕಾಂಚೀಪುರದಲ್ಲಿ ಅರಸರ ಮುಕ್ತ ತುಲಾಭಾರಕ್ಕೆ ಸಂಬಂಧಿಸಿದ ಮೂರು ಶ್ಲೋಕಗಳನ್ನು ಅವಳೇ ರಚಿಸಿದ್ದಾಗಿ ತಿಳಿದು ಬರುತ್ತದೆ. ಈಕೆ ಸಂಗೀತ ವಿದೂಷಿ, ವೈಯಾಕರಣೆ, ಪುರಾಣೇತಿ ಹಾಸ್ಯ ಪಂಡಿತೆ, ಸಕಲ ಕಲಾ ಪ್ರವೀಣೆ, ಬಹುಭಾಷಾ ನಿಪುಣೆ, ಇಷ್ಟೆಲ್ಲಾ ಪಾಂಡಿತ್ಯವಿದ್ದರೂ ವಿದ್ವಾಂಸರು ತನ್ನ ಕೃತಿಯನ್ನು ತಿದ್ದಬೇಕೆಂದು ವಿನಯದಿಂದ ಕೇಳಿಕೊಂಡಿದ್ದಾಳೆ.

> "ಕರಕೃತಮಪರಾಧಂ ಕ್ಸಂತುಮರ್ಹಂತಿ ಸಂತಃ ಮತ್ತು
> "ಅಕ್ಷರಂ ಮಂತ್ ಪರಿಭ್ರಷ್ಟಂ ಮಾತ್ರ್ಹೀನಂ ತುಯದ್ ಭವೇತ್'
> ಕ್ಸಂತುಮರ್ಹಂತಿ ವಿದ್ವಾಂಸ ಕ್ಷಮಾ ಹಿ ವಿದುಷಾಂ ಧನಮ್"

ಅಕ್ಷರ ಅಥವಾ ಮಾತ್ರೆ ಬಿಟ್ಟು ಹೋಗಿದ್ದರೆ ವಿದ್ವಾಂಸರು ಕ್ಷಮಿಸಬೇಕೆಂದು ಹೇಳುತ್ತಾಳೆ. ಇದರಲ್ಲಿ ರಾಣಿ 20 ವರ್ಷ ಆಳಿದ ಕೃಷ್ಣನ ಹಾಗೂ ಅಚ್ಯುತರಾಯನ ನಡುವಿನ ವೈಮನಸ್ಸಿನ ಮೇಲೆ ಬೆಳಕು ಚೆಲ್ಲುತ್ತಾಳೆ. ಪತಿ ಅಚ್ಯುತರಾಯನ ಚಿತ್ರವನ್ನು ಕಣ್ಣೆದುರಲ್ಲೇ ನಿಲ್ಲಿಸುತ್ತಾಳೆ. ಈ ವಿದ್ಯಾದರಿ ಇಲ್ಲಿ ಕವಿಯಾತ್ರಿಯು ಪದರಚನಾ ಪ್ರೌಢಿಮೆ, ಚಾತುರ್ಯ, ವರ್ಣನಾ ಕೌಶಲ್ಯಗಳು ವ್ಯಕ್ತವಾಗಿಯೆ ಜೊತೆಗೆ

ಸರೋವರದಲ್ಲಿ ಜಲಕ್ರೀಡೆಯನ್ನಾಡುವಾಗ ಮುಳು ಮುಳುಗಿ ಏಳುತ್ತಿದ್ದ ಮಿಂಚಿನ ಚಂಚಲಾಕ್ಷಿಯ ಮೋಡಗಳ ಅಂಚಿನಲ್ಲಿ ಮುಡಿ ಮುಳುಗುವ ಮಿಂಚಿನ ಬಳ್ಳಿಯಂತೆ, ಕಂಡಳು ಎಂದು ಮತ್ತೊಂದು ಪದ್ಯದಲ್ಲಿ ಸಹಜ ಸುಂದರ ವರ್ಣನೆ ನಿಸರ್ಗದ ಮಣಿಯಂತೆ ಅದರ ನಿರೀಕ್ಷಣೆ ಕವಿಯತ್ರಿಯ ಸ್ವಭಾವವನ್ನು ಒಳಗೊಂಡಿದೆ.[379] ಈ ಕೃತಿಯ ಪದ್ಯಗಳು ಆಕೆಯ ಪದ ಬಳಕೆಯ ಪ್ರೌಢಿಮೆ ಚಾತುರ್ಯ ವರ್ಣನಾ ಕೌಶಲ್ಯಗಳು ಗ್ರಂಥದುದ್ದಕ್ಕೂ ವ್ಯಕ್ತವಾಗಿದೆ.

ಈ ಕಾಲದಲ್ಲಿ ಕನ್ನಡ ಕವಿಯಿತ್ರಿಯರು ಒಬ್ಬರು ಕಂಡು ಬರುವುದಿಲ್ಲ. ಇಲ್ಲಿ ಹೆಚ್ಚಾಗಿ ಸಂಸ್ಕೃತ ಭಾಷೆಗೆ ಹೆಚ್ಚು ಪ್ರೋತ್ಸಾಹ ನೀಡಲಾಗಿತ್ತು. ತೆಲುಗು, ಕನ್ನಡ, ಪ್ರಭಾವವಿದ್ದರೂ ಸಹ ರಾಣಿವರ್ಗದವರಿಗೆ ಹೆಚ್ಚಾಗಿ ಸಂಸ್ಕೃತ ಶಿಕ್ಷಣ ನೀಡಲಾಗುತ್ತಿತ್ತು ಎಂದು ತಿಳಿದು ಬರುತ್ತದೆ.

ವಿಜಯನಗರ ಮನೆತನದ ಕಟ್ಟ ಕಡೆಯ ಮನೆತನವಾದ ಅರವೀಡು ಮನೆತನ, ತುಳುವ ಮನೆತನದೊಂದಿಗೆ ಬೆಸೆದುಕೊಂಡಿತ್ತು. ಶ್ರೀಕೃಷ್ಣ ದೇವರಾಯ ಮತ್ತು ತಿರುಮಲಾದೇವಿಯವರ ಪುತ್ರಿಯಾದ ತಿರುಮಲಾಂಬಳನ್ನು ಅಳಿಯ ರಾಮರಾಯನಿಗೆ ಕೊಟ್ಟು ವಿವಾಹ ಮಾಡಲಾಗಿತ್ತು. ಇವಳು ಒಬ್ಬ ಕವಯಿತ್ರಿಯಾಗಿದ್ದು ಸಂಸ್ಕೃತ ಭಾಷೆಯಲ್ಲಿ 'ಮಾರೀಚಿ ಪರಿಣಯ' ಎಂಬ ಕಾವ್ಯ ರಚಿಸಿದಳು. ಇದು ತುಳುವ ವಂಶದ ಬಗ್ಗೆ ಹಾಗೂ ಪತಿ ರಾಮರಾಯರ ಬಗ್ಗೆ ತಿಳಿಸುತ್ತದೆ. ವೆಂಗಳಾಂಬೆ ತುಳುವ ವಂಶದ ರಾಜಪುತ್ರಿ ಇವಳಿಗೆ ಮೋಹನಾಂಗಿ ಎಂಬ ಅಕ್ಕ ಇದ್ದಳು ಇವಳ ತಂಗಿ ವೆಂಗಳಾಂಬೆಯನ್ನು ಅನ್ನಪೂರ್ಣ ದೇವಿಯಲ್ಲಿ ತನ್ನ ತಂದೆ ಪಡೆದನೆಂದು 'ಮಾರೀಚ ಪರಿಣಯಮ್'ದಲ್ಲಿ ತಿಳಿಸಲಾಗಿದೆ. ಇಲ್ಲಿ ಅನ್ನಪುರ್ಣದೇವಿ ಎಂದರೆ ಚಿನ್ನಾದೇವಿಯೇ.[380]

ಹೀಗೆ ಶಾತವಾಹನರ ಕಾಲದಿಂದ ಹಿಡಿದು ವಿಜಯನಗರ ಸಾಮ್ರಾಜ್ಯದ ವರೆವಿಗೂ ರಾಣಿಯರು ವಿದ್ವಾಂಸೆಯರಾಗಿದ್ದು ಸಾಹಿತ್ಯ ಕೃಷಿಯನ್ನು ಮಾಡಿರುವುದು ಶ್ಲಾಘನೀಯವಾಗಿದೆ.

---

[379] ದೇವರಕೊಂಡಾರೆಡ್ಡಿ, ***ಕನ್ನಡ ವಿಶ್ವವಿದ್ಯಾಲಯ, ಶಾಸನ,*** ಸಂಪುಟ–3, ಶಾಸನ ಸಂಖ್ಯೆ–184.

[380] ಅದೇ, ಶಾ.ಸಂ–338, (ಪುಟ)

ಒಟ್ಟಿನಲ್ಲಿ ಅಕ್ಷರ ವಿದ್ಯೆಯಲ್ಲಿ ಸಿಗಲಾರದ ಸ್ಥಾನವನ್ನು ಕೆಲವರು ಕಲೆಯಲ್ಲಿ ತುಂಬಿಕೊಂಡಿದ್ದರೂ ಅದು ಅರಮನೆಯಲ್ಲಿ ಸ್ವಲ್ಪಮಟ್ಟಿಗಾದರೂ ಬೆಳೆದಿತ್ತು. ರಾಜಮನೆತನದವರಿಗೆ ಮಾತ್ರ ಸೀಮಿತವಾಗಿದ್ದು ಉನ್ನತ ವಿದ್ಯಾಭ್ಯಾಸ ಬರ–ಬರುತ್ತಾ ದೇವಾಲಯದ ವೇಶ್ಯೆಯರ ಪಾಲಿಗೆ ಸೀಮಿತವೆನಿಸಿದಾಗ ಇದರ ಗೌರವ ಕಡಿಮೆಯಾಯಿತು. ಅಂದರೆ ಶುದ್ಧ ಕಲೆಯಾದ ಸಂಗೀತ, ನೃತ್ಯಗಳು ಲಘುವಾಗಿ ಕಾಣತೊಡಗಿದವು. ಸ್ತ್ರೀ ಅಭ್ಯಸಿಸುವುದು ಮೈಲಿಗೆ ಎಂಬ ಭಾವನೆ ಸಮಾಜದಲ್ಲಿ ಬೆಳೆದು ಅವಳು ಕಲೆಯಿಂದಲೂ ದೂರ ಉಳಿಯುವಂತಾಯಿತು. ವಿಜಯನಗರದ ಸಾಮ್ರಾಜ್ಯದ ಪೀಳಿಗೆ ಸ್ತ್ರೀ ಸಮಾಜದಲ್ಲಿ ತನ್ನ ಸ್ಥಾನವನ್ನು ಉನ್ನತೀಕರಿಸಿಕೊಳ್ಳುವಲ್ಲಿ ಪ್ರಯತ್ನಿಸಿದ್ದರೂ ಸಹ ಅಷ್ಟೇನೂ ಬದಲಾವಣೆಗಳು ಸಾಧ್ಯವಾಗಲಿಲ್ಲ.

# ಅಧ್ಯಾಯ – 4

## ಕಲೆ ಮತ್ತು ವಾಸ್ತುಶಿಲ್ಪ ಕ್ಷೇತ್ರದಲ್ಲಿ ರಾಣಿಯರು

**ಭಾ**ರತೀಯರು ಸಂಪೂರ್ಣವಾಗಿ ದೇವತಾವಲಂಬಿಗಳು. ವೇದಕಾಲದ ಆರ್ಯರು ಪ್ರಕೃತಿಯ ವಿವಿಧ ರೂಪಗಳಾದ ಸೂರ್ಯ, ಚಂದ್ರ, ಅಗ್ನಿ, ವರುಣ, ಉಷಸ್ ಮೊದಲಾದವುಗಳನ್ನು ದೇವರೆಂದು ಭಾವಿಸಿ ಅವರಿಗೆ ಯಜ್ಞಯಾಗಾದಿಗಳ ಮೂಲಕ ಹವಿಸ್ಸುಗಳನ್ನಿತ್ತು ತೃಪ್ತಿಪಡಿಸಿ ಇಷ್ಟಾರ್ಥ ಪ್ರಾಪ್ತಿಯನ್ನೂ, ರೋಗ ರುಜಿನಾದಿ ಅನಿಷ್ಟಾರ್ಥ ನಿವೃತ್ತಿಯನ್ನು ಪಡೆಯುತ್ತಿದ್ದರು. ಆಗ ಇಂದ್ರೀಯ ಗ್ರಾಹ್ಯಗಳಾದ ಮೂರ್ತಿ ಪೂಜೆಗಳು ಇರಲಿಲ್ಲವೆನ್ನಬಹುದು. ಕಾಲಾನು ಕ್ರಮಣಿಕೆಯಲ್ಲಿ ಈ ಪ್ರಕೃತಿ ದೇವತೆಗಳೇ ಸೃಷ್ಟಿ ಸ್ಥಿತಿ ಯಾಧಿಕಾರಿಗಳಾದ ಬ್ರಹ್ಮ, ವಿಷ್ಣು, ಮಹೇಶ್ವರ (ತ್ರಿಮೂರ್ತಿ)ರ ಮೂರ್ತರೂಪವನ್ನು ಹೊಂದಿರಬೇಕು. ಇದೇ ಕಾಲದಲ್ಲಿ ಜೈನ ಮತ್ತು ಬೌದ್ಧಮೂರ್ತಿಗಳನ್ನು ಆ ಪಂಗಡಗಳ ಅನುಯಾಯಿಗಳು ಮೂರ್ತಿಗಳನ್ನು ನಿರ್ಮಿಸಿಕೊಂಡಿರಬೇಕು. ಈ ಮೂರ್ತವಾದ ದೇವತಾ ಪೂಜೆಗಳು ಪ್ರಾರಂಭವಾದಾಗಲೇ ಸೃಷ್ಟಿಗೋಚರವಾಗುವಂತೆ ಅವುಗಳನ್ನು ಸ್ಥಿರವಾಗಿ ಸ್ಥಾಪಿಸಿ ಅವುಗಳ ನಿವಾಸಗಳನ್ನು ಕಲ್ಪಿಸಲು ಪ್ರಯತ್ನಗಳು ನಡೆದಿರಬಹುದೆಂಬುದನ್ನು ವಿದ್ವಾಂಸರು ಒಪ್ಪುತ್ತಾರೆ. ದೇವಾಲಯಗಳ ನಿರ್ಮಾಣಕಾರ್ಯ ಬಹುಪುಣ್ಯದ ಫಲಪ್ರದವಾದದ್ದು ಅದೊಂದು ದೇವ ಮತ್ತು ಧರ್ಮಕಾರ್ಯ, ಇಹಪರ ಸೌಖ್ಯಕ್ಕೆ ಕಾರಣವಾದುದ್ದು, ಅಧಕ್ಕಾಗಿಯೇ 'ರಾಜಾಧಿರಾಜರುಗಳು, ರಾಣಿಯರು, ಸಾಮಂತರುಗಳು, ದಂಡನಾಯಕರುಗಳು, ವರ್ತಕರು, ಸ್ತ್ರೀಸಾಮಾನ್ಯರುಗಳು ಹಲವಾರು ದೇವಾಲಯಗಳನ್ನು ಕಟ್ಟಿಸಿದ್ದಾರೆ. ಆ ಮೂಲಕ ಕಲೆ ಮತ್ತು ವಾಸ್ತುಶಿಲ್ಪಕ್ಕೆ ನಾಂದಿಯನ್ನಾಕಿದರು.

ಕರ್ನಾಟಕದಲ್ಲಿ ವಾಸ್ತುಶಿಲ್ಪವು ಕಾಣಿಸಿಕೊಂಡದ್ದು ಯಾವಾಗ? ಎಂಬ ಪ್ರಶ್ನೆಗೆ ಅಶೋಕನ ಕಾಲಕ್ಕೂ ಮೊದಲು ಇಲ್ಲಿ ವಾಸ್ತುಶಿಲ್ಪವಿದ್ದುದ್ದುಂಟು, ಹಾಗಿದ್ದರೆ ಅವು ಉಳಿದು ಬಂದಿಲ್ಲ ಎಂಬ ಪ್ರಶ್ನೆಗಳಿಗೆ ಡಾ.ಎಂ. ಚಿದಾನಂದ ಮೂರ್ತಿಯವರು ತಮ್ಮ ಪಿಹೆಚ್.ಡಿ ಪ್ರಬಂಧದಲ್ಲಿ 'ದೇವಾಲಯಗಳನ್ನು ಸ್ಥಾಪಿಸುವ ಸಂಪ್ರದಾಯ ಅಶೋಕನಿಗಿಂತ ಈಚಿನದೆಂದು'

ಅಭಿಪ್ರಾಯಪಟ್ಟಿದ್ದಾರೆ.[1] ಚಿದಾನಂದ ಮೂರ್ತಿಯವರು ಮತ್ತು ಎ.ಎಸ್ ಅಲ್ತೇಕರ್‌ರವರ ವಾದವನ್ನು ಬೆಂಬಲಿಸಿರುವಂತೆ ತೋರುತ್ತದೆ.

ಜಿಹ್ವೇ ಕೀರ್ತಯ ಕೇಶವಂ ಮುರರಿಪುಂ ಚೆತೋಭಜ, ಶ್ರೀಧರಂ
ಪಾಣಿದ್ವಂದ್ವ ಸಮರ್ಚಯ, ಅಚ್ಯುತ ಕಥಾ ಶ್ರೋತ್ರದ್ವಯ ತ್ವಂ ಶ್ರುಣು
ಕೃಷ್ಣಂ ಲೋಕಯ ಲೋಚನದ್ವಯ, ಹರೇ ರಾಯಲಂಗಚ್ಛ ಅಂಘ್ರಿದ್ವಯ
ಜಿಘ್ರ ಘ್ರಾಣ ಮುಕುಂದ ಪಾದತುಳಿಸೀಂ, ಮೂರ್ಧನ್ನ ಮಾದ್ರೋಕ್ಷಜಂ[2]

ಎಂಬ ಶ್ಲೋಕದ ಮೂಲಕ ಡಾ. ಅನಂತ ರಂಗಾಚಾರ್‌ರವರು ದೇವಾಲಯಗಳ ನಿರ್ಮಾಣದ ಪ್ರಾಮುಖ್ಯತೆಯನ್ನು ಎತ್ತಿಹಿಡಿದಿದ್ದಾರೆ.

ಪ್ರಾಚೀನ ರಾಜಮನೆತನಗಳು ತಮ್ಮಾಡಳಿತದ ಕಾಲದಲ್ಲಿ ದೇವಾಲಯ ಸ್ಮಾರಕಗಳನ್ನು ನಿರ್ಮಿಸಿರುವಂತೆ ರಾಣಿಯರು ದೇವಾಲಯಗಳನ್ನು ಬಸದಿಗಳನ್ನು, ಸ್ಮಾರಕ ಮತ್ತು ಚೈತ್ಯಾಲಯಗಳನ್ನು, ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ನಿರ್ಮಿಸಿ ಕರ್ನಾಟಕದ ಸಾಂಸ್ಕೃತಿಕ ಇತಿಹಾಸಕ್ಕೆ ತಮ್ಮದೇ ಆದ ಬೃಹತ್ ಕೊಡುಗೆಗಳನ್ನು ನೀಡಿದ್ದಾರೆ. ಶಾತವಾಹನರ ಕಾಲದಿಂದ ವಿಜಯನಗರದ ಕಾಲದವರೆವಿಗೂ ಈ ಕೊಡುಗೆಗಳ ನಿರ್ಮಾಣಕಾರ್ಯ ಸಾಕಷ್ಟು ಪ್ರಯೋಗಗಳೊಂದಿಗೆ ನಡೆಯಿತು. ದಕ್ಷಿಣ ಭಾರತದ ದ್ರಾವಿಡ ಶೈಲಿ ಮತ್ತು ಉತ್ತರ ಭಾರತದ ನಾಗರಶೈಲಿಯ ಹಲವಾರು ಕಟ್ಟಡ, ಸ್ಮಾರಕಗಳನ್ನು ಮತ್ತು ಇವೆರಡು ಶೈಲಿಗಳ ಸಂಮಿಶ್ರಣವನ್ನು ಒಳಗೊಂಡ 'ವೇಸರ'ಶೈಲಿಯು ಕೆಲವು ದೇವಾಲಯಗಳನ್ನು ಕಟ್ಟಿಸಿ ಹೊಸ ಶೈಲಿಯನ್ನು ಬಳಕೆಗೆ ತಂದರು.

**ಕರ್ನಾಟಕವನ್ನಾಳಿದ ವಿವಿಧ ರಾಜಮನೆತನಗಳ ರಾಣಿಯರು ನಿರ್ಮಿಸಿದ ದೇವಾಲಯಗಳು**

ವಾತಾಪಿಯ ಚಾಲುಕ್ಯರು ತಮ್ಮ ಸಾಮ್ರಾಜ್ಯವನ್ನು ಕ್ರಿ.ಶ. 535ರಲ್ಲಿ ಸ್ಥಾಪಿಸುವ ಮೊದಲು ಕರ್ನಾಟಕದ ಬೇರೆ–ಬೇರೆ ಭಾಗಗಳಲ್ಲಿ ಪಾಟಲಿಪುತ್ರದ ಮೌರ್ಯರು, ಶಾತವಾಹನರು, ಚುಟುಮನೆತನದ ಸಾತಕರಣಿಯರು, ಬನವಾಸಿ ಕದಂಬರು ಕ್ರಿ.ಪೂ. 3ನೇ ಶತಮಾನದಿಂದ ಕ್ರಿ.ಶ.

---

[1] ಡಾ. ಎಂ. ಚಿದಾನಂದ ಮೂರ್ತಿ, **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ,** ಪು.173, ಮೈಸೂರು ವಿಶ್ವವಿದ್ಯಾಲಯ, ಮೈಸೂರು, 1976.

[2] ಡಾ.ಎನ್. ಅನಂತರಂಗಾಚಾರ್, **ಭಾರತೀಯ ದೇವಾಲಯಗಳು ಮತ್ತು ಸಂಸ್ಕೃತಿ,** ಪುಟ–1.

6ನೇ ಶತಮಾನದ ಆರಂಭದವರೆಗೆ ಆಳಿದರು. ಈ ಅರಸು ಮನೆತನಗಳ ಆಳ್ವಿಕೆಯ ಅವಧಿ ಸುಮಾರು 800 ವರ್ಷಗಳಾಗಿದ್ದರೂ ಅವರು ಕಲಾ ಸಂಸ್ಕೃತಿಗೆ (ದೇವಾಲಯಗಳ ನಿರ್ಮಾಣಕ್ಕೆ) ನೀಡಿದ ಪ್ರೋತ್ಸಾಹಗಳ ಬಗ್ಗೆ ಹೆಚ್ಚಿನ ಅಂಶಗಳು ತಿಳಿದು ಬರುವುದಿಲ್ಲ. ಕೇವಲ ಅವರ ಶಾಸನಗಳು ಮತ್ತು ಬೆರಳೆಣಿಕೆಯ ದೇವಾಲಯಗಳ ಅವಶೇಷಗಳು ಮಾತ್ರ ದೊರೆಯುತ್ತವೆ. ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ರಾಜಮನೆತನಗಳ ರಾಣಿಯರು ಕಲಾಪ್ರೌಢಿಮೆಯ ಕಡೆ ಮುಖ ಮಾಡಿದ್ದರು ಎಂಬುದು ಸ್ವಲ್ಪ ಕಠಿಣವಾದ ವಿಷಯವೇ ಸರಿ.

ಚುಟುವಂಶದ ರಾಣಿಯೋರ್ವಳು ನಾಗಾರ್ಜುನ ಕೊಂಡದಲ್ಲಿ ಮಹಿಶಾಸಕರಿಗೆ ಒಂದು ವಿಹಾರವನ್ನು ಕಟ್ಟಿಸಿದ್ದಾಳೆ.[3] ಇದು ನಮ್ಮ ಅಧ್ಯಯನದ ವ್ಯಾಪ್ತಿಗೆ ಸೇರದಿದ್ದರೂ, ಬಹಳ ಪ್ರಮುಖವಾಗಿದೆ. ವಿಣ್ಹುಕಡ ಚುಟುಕುಲಾನಂದ ಸಾತಕರ್ಣಿಯ ಮಗಳಾದ ಶಿವಸ್ಕಂದ ನಾಗಶ್ರೀಯು ನಾಗಪ್ರತಿಮೆಯನ್ನು ಕೆರೆ ಮತ್ತು ವಿಹಾರವನ್ನು ದಾನ ಮಾಡಿದ್ದಾಳೆ. ಪ್ರಾಯಶಃ ಆದಿ ಮದುಕೇಶ್ವರದ ಸಮೀಪದಲ್ಲಿ ಇಟ್ಟಿಗೆಯ ಬಂಧದ ಚಿಹ್ನೆ ಇರುವ ಕೆರೆಯೇ ಇದಾಗಿರಬೇಕು. ಅಕ್ಕಪಕ್ಕದಲ್ಲಿ ಇಟ್ಟಿಗೆ ಕಟ್ಟಡ ಅವಶೇಷಗಳು ಒಂದು ನಗರದ ಅಸ್ತಿತ್ವವನ್ನು ಸಾರುತ್ತವೆ ಎಂದು ಡಾ. ಅ.ಸುಂದರರವರು ಅಭಿಪ್ರಾಯಪಡುತ್ತಾರೆ.[4]

### 1) ಕದಂಬರ ಕಾಲ

ಕಂಚಿಯ ಪಲ್ಲವರಿಂದ ಇಂದಿನ ಉತ್ತರ ಕನ್ನಡ, ಶಿವಮೊಗ್ಗ, ಚಿತ್ರದುರ್ಗ, ಬಳ್ಳಾರಿ ಮೊದಲಾದ ಜಿಲ್ಲೆಗಳನ್ನೊಳಗೊಂಡ ಪ್ರದೇಶವನ್ನು ಶಾತವಾಹನರ ನಂತರ ರಾಜ್ಯಭಾರ ಮಾಡಿದವರು ಈ ಬನವಾಸಿಯ ಕದಂಬರು, ಧರ್ಮಕಲೆ ಮತ್ತು ಸಾಹಿತ್ಯ ಪ್ರಕಾರಗಳಲ್ಲಿ ಕರ್ನಾಟಕ ಸಂಸ್ಕೃತಿಯ ಕೆಲವು ಪ್ರಮುಖ ಲಕ್ಷಣಗಳಿಗೆ ಬಹುಮಟ್ಟಿಗೆ ಕದಂಬರ ಆಶ್ರಯ ಮತ್ತು ಪ್ರೋತ್ಸಾಹಗಳು ಪ್ರೇರಕ. ತಾಳಗುಂದದ ಶಾಂತಿವರ್ಮನ ತಾಳಗುಂದ ಸ್ತಂಭಶಾಸನ, ಅಲ್ಲಿಯ ಪ್ರಣವೇಶ್ವರ ಲಿಂಗವನ್ನು ಸಾತಕರ್ಣಿ ಅರಸರು ಪೂಜಿಸುತ್ತಿದ್ದರೆಂದು ತಿಳಿಸುತ್ತದೆ. ಇದರಿಂದ ಈ ಪ್ರಣವೇಶ್ವರ ದೇವಾಲಯ ಕದಂಬ ಪೂರ್ವ ಕಾಲದ್ದೆಂದು ರೂಪಿತವಾಗುತ್ತದೆ. ಆದರೆ ಈಗಿರುವ ಈ 'ಪ್ರಣವೇಶ್ವರ ದೇವಾಲಯ' ತನ್ನ ಮೂಲ ಸ್ವರೂಪವನ್ನು ಉಳಿಸಿಕೊಂಡಿಲ್ಲ, ಕಾರಣ ನಂತರದ ಅರಸು

---

[3] ಎ.ಇ. XX ಪುಟ–1, ನಾಗಾರ್ಜುನ ಕೊಂಡ, (ಕ್ರಿ.ಶ. 300) ಮತ್ತು ಎಂ.ಎಂ ಅಣ್ಣಿಗೇರಿ ಡಾ.ಆರ್. ಶೇಷಶಾಸ್ತ್ರಿ, 2007, ಶಾಸನ ಸಂಗ್ರಹ, ಪುಟ–124, ಕನ್ನಡ ಸಾಹಿತ್ಯ ಪರಿಷತ್ ಬೆಂಗಳೂರು.

[4] ಎಚ್.ಎಸ್.ಕೆ. ಅವಲೋಕನ, ಪು–53, **ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು**. 1985.

ಮನೆತನಗಳ ಕಾಲದಲ್ಲಿ ನಡೆದಿರಬಹುದಾದ ಜೀರ್ಣೋದ್ಧಾರಗಳೇ ಇದರ ವ್ಯತ್ಯಾಸಕ್ಕೆ ಕಾರಣಗಳಾಗಿವೆ. ಇಂತಹ ಜೀರ್ಣೋದ್ಧಾರ ಕಾರ್ಯವನ್ನು ವಿವರಿಸುವ ಶಾಸನ ಲಭ್ಯವಿದೆ. ಕದಂಬರ ಮೃಗೇಶವರ್ಮನ ರಾಣಿ ಪ್ರಭಾವಣಿಯನ್ನು ಶಾಸನ ಉಲ್ಲೇಖಿಸಿದೆ. ಕದಂಬರ ಕಾಲದಲ್ಲಿ ರಾಣಿಯರು ದೇವಾಲಯಗಳನ್ನು ನಿರ್ಮಿಸದಿದ್ದರೂ, ದೇವಾಲಯಗಳ ಜೀರ್ಣೋದ್ಧಾರವನ್ನು ನಡೆಸಿದ್ದಾರೆ.[5]

**2) ಗಂಗರ ಕಾಲ**

ಕರ್ನಾಟಕದಲ್ಲಿ ಆಳಿದ ಪ್ರಮುಖ ರಾಜವಂಶಗಳಲ್ಲಿ ಗಂಗಸಾಮ್ರಾಜ್ಯ ಒಂದು. ಗಂಗ ವಂಶದಲ್ಲಿ ತಲಕಾಡಿನ ಗಂಗ ಶಾಖೆ ಪ್ರಮುಖವಾದದ್ದು. ಇವರ ಕಾಲದಲ್ಲಿ ಜೈನಧರ್ಮ ನಾಡ ಧರ್ಮವಾಗಿತ್ತು. 'ನೀರ್ಗುಂಧ ವಿಷಯದ ಶ್ರೀಪುರುಷ ಗ್ರಾಮದಲ್ಲಿ ಕುಂದಾಚಿಯು ಲೋಕ ತಿಲಕ ಜಿನಾಲಯವನ್ನು ನಿರ್ಮಿಸಿದ್ದಾಳೆ. ಇದರ ಬಗ್ಗೆ ಶಾಸನೋಕ್ತವಿದೆ.[6]

ವ್ಯಾಪಾರಿಗಳು ಸೂರ್ಯದೇವಾಲಯವನ್ನು ಮಣ್ಣೆಯಲ್ಲಿ ಕಟ್ಟಿಸಿದ್ದಾರೆ. ಕ್ರಿ.ಶ. 806ರಲ್ಲಿ ಇನ್ದಪ್ಪರಸನ ಮಗಳು ಮಾಣಿಕಬ್ಬೆಯು ಮಣ್ಣೆಯಲ್ಲಿದ್ದ ವಿಜಯ ಜಿನಾಲಯಕ್ಕೆ ದಾನ ನೀಡಿದ್ದಾಳೆ.[7] ಕ್ರಿ.ಶ. 913ರಲ್ಲಿ ಜೊಗಬ್ಬೆಯ ಮಗಳು 'ಚಾವುಣ್ಡಬ್ಬೆ', ದೇಗುಲವನ್ನು ನಿರ್ಮಿಸಿದ್ದಾಳೆ.[8] ಸುಮಾರು ಕ್ರಿ.ಶ.650ರ ಕಾಲದ ಗುಬ್ಬಿಯ ಶಾಸನವೊಂದರಲ್ಲಿ ಗಂಗವೆಡಂಗ ರಾಚೆಯರಸರ ಅರಸಿಗಳಾಚ್ಚಿರರ ದೇಗುಲಮಂ ಮಾಡಿಸಿದಳ್ ಎಂದಿದೆ.[9]

**3) ಬಾದಾಮಿ ಚಾಲುಕ್ಯರು**

ಕ್ರಿ.ಶ. 530ರಲ್ಲಿ ಚಾಲುಕ್ಯರ ಆಳ್ವಿಕೆಯ ಸ್ಥಾಪನೆ ಮತ್ತು ಒಂದನೇ ಪುಲಕೇಶಿಯ ಆದೇಶವಿದೆ. ಕ್ರಿ.ಶ. 543ರಲ್ಲಿ ಬಾದಾಮಿಯಲ್ಲಿ ಅಭೇದ್ಯವಾದ ಕೋಟೆಯ ನಿರ್ಮಾಣ, ಹಿಂದೆಂದೂ ಕಂಡರಿಯದಷ್ಟು ನಿರ್ಮಾಣ ಚಟುವಟಿಕೆಗಳಿಗೆ ನಾಂದಿಯನ್ನು ಹಾಡಿದವು. ವೈದಿಕ ಸಂಪ್ರದಾಯಗಳ ಪುನರುಜ್ಜೀವನ, ಹಾಗೂ ಭಾಗವತ ಪಂಥಗಳ ಪ್ರಸಾರಕ್ಕೆ ಪ್ರಯತ್ನಿಸಿದರು. ಧಾರ್ಮಿಕ ತತ್ವಗಳನ್ನು

---

[5] ಡಾ.ಬಿ.ಆರ್. ಗೋಪಾಲ್, **ಬನವಾಸಿಯ ಕದಂಬರು, ಪು–13, 4, 29, 30,** 1983.

[6] ಎ.ಕ Vii, ನಾಗಮಂಗಲ, ಶಾ.ಸಂ. 149.

[7] ಎ.ಕ XVII ಚಿಕ್ಕಬಳ್ಳಾಪುರ, ಶಾ.ಸಂ. 149.

[8] ಎ.ಕ VI (ಪ) ಚಾಮರಾಜನಗರ, ಶಾ.ಸಂ.385, ಕ್ರಿ.ಶ. 913.

[9] ಎ.ಕ VIII (ಪ) ಗುಂಡ್ಲುಪೇಟೆ, ಶಾ.ಸಂ 102, ಕ್ರಿ.ಶ

ಪ್ರವರ್ತಿಸಲು ರಾಜರು, ರಾಣಿಯರು ಸ್ವತಃ ದೇವಾಲಯಗಳ ನಿರ್ಮಾಣಗಳನ್ನು ಕೈಗೆತ್ತಿಕೊಂಡು ಇತರರಿಗೆ ಮಾದರಿ ಹಾಕಿಕೊಟ್ಟರು. ಮೊದಲು ಬಾದಾಮಿ ಚಾಲುಕ್ಯ ಮನೆತನದ ಅರಸರುಗಳು ರಾಜ್ಯದ ವಿಸ್ತರಣೆ ಗಮನಕೊಟ್ಟ ಬಗ್ಗೆ ತಿಳಿದು ಬಂದರೂ ವಾಸ್ತುಶಿಲ್ಪದ ಅಭಿವೃದ್ಧಿಯನ್ನು ಕಡೆಗಣಿಸಿರಲಿಲ್ಲ ಎಂಬುದಕ್ಕೆ ಬಾದಾಮಿ, ಐಹೊಳೆ, ಪಟ್ಟದಕಲ್ಲು, ಮಹಾಕೂಟಗಳಲ್ಲಿ ಇವರ ಕಾಲದಲ್ಲಿ ನಿರ್ಮಾಣಗೊಂಡ ದೇವಾಲಯಗಳೇ ಸಾಕ್ಷಿಗಳಾಗಿವೆ. ಒಂದನೇ ಪುಲಕೇಶಿ, 1ನೇ ಕೀರ್ತಿವರ್ಮ ಮಂಗಳೇಶ, 2ನೇ ಪುಲಿಕೇಶಿ, ವಿಕ್ರಮಾದಿತ್ಯ, ವಿನಯಾದಿತ್ಯ, 2ನೇ ವಿಕ್ರಮಾದಿತ್ಯ, ಆಳ್ವಿಕೆ ನಡೆಸಿ ಕಲಾ ವಸ್ತು ಶಿಲ್ಪ ರಂಗವನ್ನು ಪ್ರೋತ್ಸಾಹಿಸಿದರು. ಅಂತೆಯೇ ರಾಣಿವರ್ಗದವರು ಪ್ರೋತ್ಸಾಹಿಸಿದರು.

ಇವರ ಕಾಲದಲ್ಲಿ ಅಧಿಕ ಸಂಖ್ಯೆಯ ದೇವಾಲಯಗಳು ನಿರ್ಮಾಣಗೊಂಡವು. ಇದಕ್ಕೆ ಮೂರು ಕಾರಣಗಳನ್ನು ಕೊಡಬಹುದು. ಒಂದನೆಯದಾಗಿ, ಒಂದನೇ ಪುಲಕೇಶಿಯಿಂದ ಹಿಡಿದು ಎಲ್ಲಾ ಚಾಲುಕ್ಯ ಅರಸರು ಸಾಮಾನ್ಯವಾಗಿ ಸೌಂದರ್ಯ ಪ್ರಜ್ಞೆವುಳ್ಳವರಾಗಿದ್ದರು ಮತ್ತು ಸ್ವತಃ ದೇವಾಲಯಗಳನ್ನು ನಿರ್ಮಿಸಿದರು. ಎರಡನೆಯದಾಗಿ, ಈಗಾಗಲೇ ತಿಳಿಸರುವಂತೆ ಭಾರತದಲ್ಲಿ ಪುನರುಜ್ಜೀವನಗೊಂಡ ವೈಧಿಕ ಧರ್ಮದ ಪ್ರಭಾವ ದಕ್ಷಿಣ ಭಾರತದ ಮೇಲೆಯೂ ಆಯಿತು. ಬಾದಾಮಿ ಚಾಲುಕ್ಯರು ತಮ್ಮನ್ನು ತಾವು ಪರಮ ಭಾಗವತರು ಪರಮ ಮಹೇಶ್ವರರು ಎಂದು ಹೇಳಿಕೊಂಡು ದೇವಾಲಯಗಳ ನಿರ್ಮಾಣಕ್ಕೆ ಅಸ್ತಿಭಾರವನ್ನಾರೆದರು. ಕೊನೆಯದಾಗಿ, 200 ವರ್ಷಗಳಿಗಿಂತ ಅಧಿಕ ಅವಧಿಗೆ ಸಾಮ್ರಾಜ್ಯವನ್ನಾಳಿದ ಇವರು ರಾಜಕೀಯ ಸುಭದ್ರತೆ ಇದರಲ್ಲಿತ್ತು. ಇದರ ಫಲವಾಗಿ ಆರ್ಥಿಕ ಅಭಿವೃದ್ಧಿ ಸಾಧ್ಯವಾಯಿತು. ಇವೆಲ್ಲವೂ ದೇವಾಲಯ ಮತ್ತು ಅಗ್ರಹಾರಗಳ ಸ್ಥಾಪನೆಗೆ ಪೂರಕ ಸಂಗತಿಗಳಾದವು.

ವಿನಯವತಿಯು ವಿನಯಾದಿತ್ಯನ ರಾಣಿ. ಈಕೆ ಬಾದಾಮಿಯಲ್ಲಿ ಬ್ರಹ್ಮ, ವಿಷ್ಣು, ಮಹೇಶ್ವರೆಂಬ ತ್ರಿಮೂರ್ತಿಗಳ ವಿಗ್ರಹಗಳ ದೇವಾಲಯವನ್ನು ನಿರ್ಮಿಸಿ ಪ್ರತಿಷ್ಠಾಪಿಸಿದಳು. ಈ ದೇವಾಲಯ ತ್ರಿಕೂಟದ್ದಾಗಿದ್ದು 3 ಗರ್ಭಗುಡಿಗಳನ್ನು ಹೊಂದಿದ ರಚನೆಯಾಗಿದೆ. ಕ್ರಿ.ಶ. 699ರಲ್ಲಿ ರಚನೆಯಾಗಿರುವ ಈ ದೇವಾಲಯ ಕರ್ನಾಟಕದ ಪ್ರಪ್ರಥಮ ತ್ರಿಕೂಟ ದೇವಾಲಯವಾಗಿದೆ.[10]

---

[10] ಕರ್ನಾಟಕ ಇನ್ಸ್ಕ್ರಿಪ್ಸನ್ I ನಂ.2

ಈ ದೇವಾಲಯವನ್ನು ಜಂಬುಲಿಂಗದೇವಾಲಯ, ಜಂಬುನಾಥ ದೇವಾಲಯವೆಂದೂ ಕರೆಯುವುದುಂಟು. ಇಲ್ಲಿ ಪೂರ್ವ, ಉತ್ತರ ಮತ್ತು ದಕ್ಷಿಣ ಮುಖನಾದ ಮೂರು ಗರ್ಭಗೃಹಗಳಿವೆ. ಇವುಗಳಿಗೆ ಸಮಾನವಾದ ಒಂದು ಚೌಕವಾದ ಸಭಾ ಮಂಟಪವಿದೆ. ಮುಂಭಾಗದಲ್ಲಿ ಕಂಭಗಳಿರುವ ತೆರೆದ ಕೈಸಾಲೆಯಿದೆ. ಸಭಾ ಮಂಟಪವನ್ನು ಒಂದು ಮಧ್ಯಾಂಗಣ ಮತ್ತು ನಾಲ್ಕು ಪಕ್ಕದ ಹಾದಿಗಳಾಗಿ ವಿಂಗಡಿಸಲಾಗಿದೆ. ಮಧ್ಯಾಂಗಣ ಚಾವಣಿಯ ತುಂಬಾ ಶಿವ, ಬ್ರಹ್ಮ, ವಿಷ್ಣು ಇವರ ಶಿಲ್ಪಗಳು ತುಂಬಿವೆ. ಎರಡೂ ಗರ್ಭಗೃಹಗಳ ಎದುರುಗಿರುವ ಚಾವಣಿಯಲ್ಲಿ ಮತ್ಸಚಕ್ರ ಮತ್ತು ನಂದ್ಯಾವರ್ತ, ಸ್ವಸ್ತಿಕಗಳೂ, ಗಂಧರ್ವರ ಶಿಲ್ಪಗಳೂ ಇವೆ. ಈ ಅಲಂಕಾರ ಪಟ್ಟಿಕೆಗಳು ಮುಖ ಭಾಗದ ಮಂಟಪದ ಚಾವಣಿಯಲ್ಲಿರುವ ನಾಗರಾಜ ಶಿಲ್ಪವೂ ದೇವಾಲಯದ ದಕ್ಷಿಣಕ್ಕೆ ಗುಹೆಗಳಲ್ಲಿರುವ ಇಂಥವೇ ಶಿಲ್ಪಗಳಿಂದ ನೇರವಾಗಿ ಪ್ರಭಾವಿತವಾದವುಗಳು. ಸಭಾಮಂಟಪ ಮತ್ತು ಮುಖಮಂಟಪಗಳಲ್ಲಿರುವ ಸ್ತಂಭಗಳು ಪಟ್ಟಿ ಮತ್ತು ಪದಕ ಅಲಂಕರಣದಿಂದ ತುಂಬಿವೆ. ನೆತ್ತಿಯ ಮೇಲೆ ತರಂಗ ಚಾಚುಗಳೂ ಇವೆ. ಗರ್ಭಗೃಹಗಳ ಮೇಲೆ ಕಟ್ಟಿದ್ದ ಮೂರು ಶಿಖರಗಳು ಈಗ ಕಣ್ಮರೆಯಾಗಿವೆ. ಉತ್ತರ ದಿಕ್ಕಿನ ಒಂದು ಶಿಖರದ ಬದಲಿಗೆ 17–18ನೇ ಶತಮಾನದಲ್ಲಿ ಒಂದು ಇಟ್ಟಿಗೆಯ ಶಿಖರವನ್ನು ನಿರ್ಮಿಸಲಾಯಿತು. ವಿನಯಾದಿತ್ಯನ ಮಗಳು, ವಿಜಯಾದಿತ್ಯನ ಸೋದರಿಯಾದ ಕುಂಕುಮ ಮಹಾದೇವಿ ಲಕ್ಷ್ಮೇಶ್ವರದ ಪುಲಿಗೆರೆಯಲ್ಲಿ ಆನೆಸಜ್ಜೆ ಬಸದಿಯನ್ನು ಕಟ್ಟಿಸಿ ಗೌರವಕ್ಕೆ ಪಾತ್ರಳಾಗಿದ್ದಾಳೆ.[11]

ಪಟ್ಟದಕಲ್ಲಿನ ಶಾಸನವೊಂದರಲ್ಲಿ ವಿಜಯಾದಿತ್ಯನು ನೀಡಿದ್ದ ಕೆಲವು ಮರ್ಯಾದೆಗಳನ್ನು ರಾಣಿ ಲೋಕ ಮಹಾದೇವಿಯು ನವೀಕರಿಸಿದ್ದುದು ದಾಖಲಾಗಿದೆ.[12] ಇದು ರಾಣಿಯರು ದೇವಾಲಯಗಳ ಜೀರ್ಣೋದ್ಧಾರ ಕಾರ್ಯಗಳನ್ನು ಮಾಡುತ್ತಿದ್ದರೆಂದು ಅರಿಯಬಹುದು.

ಇನ್ನು ಎರಡನೆಯ ವಿಕ್ರಮಾದಿತ್ಯನ ಕಾಲದಲ್ಲಿ ನಿರ್ಮಾಣಗೊಂಡ ಶೈವದೇವಾಲಯಗಳ ಸಂಖ್ಯೆ ಅಧಿಕ. ಐಹೊಳೆ, ಪಟ್ಟದಕಲ್ಲು ಮತ್ತು ಮಹಾಕೂಟಗಳಲ್ಲಿ ಶೈವದೇವಾಲಯಗಳನ್ನು ಕಾಣಬಹುದು. ಪಲ್ಲವರ ಈ ದೇವಾಲಯವನ್ನು ಜುಂಬುಲಿಂಗ ದೇವಾಲಯ ಅಥವಾ ಜುಂಬುನಾಥ ದೇವಾಲಯವೆಂದೂ ಕರೆಯುವುದುಂಟು. ಇಲ್ಲಿ ಪೂರ್ವ, ಉತ್ತರ ಮತ್ತು ದಕ್ಷಿಣ ಮುಖವಾದ

[11] ಡಾ.ಎ. ಮರಿಗೆಪ್ಪ, (ಪ್ರ.ಸಂ) ಬಾದಾಮಿ ಚಾಲುಕ್ಯರು, (ಲೇಖನ ಸಂ–1) ಪು.322, ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. 2009.

[12] ಐ.ಎ X ಪುಟ–166.

ಮೂರು ಗರ್ಭಗೃಹಗಳಿವೆ. ಇವುಗಳಿಗೆ ಸಮಾನವಾದ ಒಂದು ಚಿಕ್ಕದಾದ ಸಭಾಮಂಟಪವಿದೆ. ಮುಂಭಾಗದಲ್ಲಿ ಕಂಬಗಳಿರುವ ತೆರೆದ ಕೈಸಾಲೆಯಿದೆ ಸಭಾ ಮಂಟಪವನ್ನು ಒಂದು ಮಧ್ಯಾಂಗಣ ಮತ್ತು ನಾಲ್ಕು ಪಕ್ಕದ ಹಾದಿಗಳಾಗಿ ವಿಂಗಡಿಸಲಾಗಿದೆ. ಮಧ್ಯಾಂಗಣ ಚಾವಣಿಯ ತುಂಬಾ ಶಿವ, ಬ್ರಹ್ಮ, ವಿಷ್ಣು ಇವರ ಶಿಲ್ಪಗಳು ತುಂಬಿವೆ. ಎರಡೂ ಗರ್ಭಗೃಹಗಳ ಎದುರಿಗಿರುವ ಚಾವಣಿಯಲ್ಲಿ ಮತ್ಸಚಕ್ರ ಮತ್ತು ನಂಧ್ಯಾವರ್ತ, ಸ್ವಸ್ತಿಕಗಳೂ, ಗಂಧರ್ವರ ಶಿಲ್ಪಗಳೂ ಇವೆ. ಈ ಅಲಂಕಾರ ಪಟ್ಟಿಕೆಗಳು ಮುಖಭಾಗದ ಮಂಟಪದ ಚಾವಣಿಯಲ್ಲಿರುವ ನಾಗರಾಜ ಶಿಲ್ಪವೂ ದೇವಾಲಯದ ದಕ್ಷಿಣಕ್ಕೆ ಗುಹೆಗಳಲ್ಲಿರುವ ಇಂಥವೇ ಶಿಲ್ಪಗಳಿಂದ ನೇರವಾಗಿ ಪ್ರಭಾವಿತವಾದವುಗಳಾಗಿವೆ.

ಸಭಾಮಂಟಪ ಮತ್ತು ಮುಖಮಂಟಪಗಳಲ್ಲಿರುವ ಸ್ತಂಭಗಳು ಪಟ್ಟಿ ಮತ್ತು ಪದಕ ಅಲಂಕರಣದಿಂದ ತುಂಬಿವೆ. ನೆತ್ತಿಯ ಮೇಲೆ ತರಂಗ ಚಾಚುಗಳೂ ಇವೆ. ಗರ್ಭಗೃಹಗಳ ಮೇಲೆ ಕಟ್ಟಿದ್ದ ಮೂರು ಶಿಖರಗಳು ಈಗ ಕಣ್ಮರೆಯಾಗಿವೆ. ಉತ್ತರ ದಿಕ್ಕಿನ ಒಂದು ಶಿಖರದ ಬದಲಿಗೆ 17–18ನೇ ಶತಮಾನದಲ್ಲಿ ಒಂದು ಇಟ್ಟಿಗೆಯ ಶಿಖರವನ್ನು ನಿರ್ಮಿಸಲಾಯಿತು. ಮಾಮಲ್ಲನು ಚಾಲುಕ್ಯರನ್ನು ಯುದ್ಧದಲ್ಲಿ ಗೆದ್ದು ಹನ್ನೆರಡು ವರ್ಷಗಳ ಕಾಲ ವಾತಾಪಿಯನ್ನು (ಬಾದಾಮಿ) ಆಕ್ರಮಿಸಿಕೊಂಡಿದ್ದ ಚಾಲುಕ್ಯರದ ನಂತರದ ರಾಜನಾದ ಇಮ್ಮಡಿ ವಿಕ್ರಮಾದಿತ್ಯನು ತನ್ನ ಪಿತೃಗಳಿಗಾಗಿದ್ದ ಅಪಮಾನದ ಸೇಡಿ ತೀರಿಸಿಕೊಳ್ಳಲು ಪಲ್ಲವರ ರಾಜರನ್ನು ಗೆದ್ದು ಮೂರು ಬಾರಿ ದಂಡೆತ್ತಿ ಹೋಗಿ ಕಾಂಚೀಪುರವನ್ನು ಆಕ್ರಮಿಸಿದನು. ಅಲ್ಲಿನ ದೇವಾಲಯಗಳಿಗೆ ಬ್ರಾಹ್ಮಣರಿಗೆ ಸೌಜನ್ಯ ಮತ್ತು ಕರುಣೆಗಳಿಂದ ಕಾಂಚೀಪುರದ ಕೈಲಾಸನಾಥ ದೇವಾಲಯಗಳಿಗೆ ದಾನ–ದತ್ತಿ ನೀಡಿದನು. ಇದನ್ನು ಅದೇ ದೇವಾಲಯದ ಶಾಸನವೊಂದು ವಿವರಿಸುತ್ತದೆ. ಅಲ್ಲಿಂದ ಹಿಂತಿರುಗುವಾಗ ಆ ದೇವಾಲಯದ ಶಿಲ್ಪಶೈಲಿಯನ್ನು ತನ್ನ ರಾಜ್ಯಕ್ಕೆ ತೆಗೆದುಕೊಂಡು ಬಂದನು.

ಕ್ರಿ.ಶ. 740ರಲ್ಲಿ ಎರಡನೆಯ ವಿಕ್ರಮಾದಿತ್ಯನ ಇಬ್ಬರು ರಾಣಿಯರಾದ ‘ಲೋಕಮಹಾದೇವಿ ಮತ್ತು ತ್ರೈಲೋಕ್ಯಮಹಾದೇವಿಯರು ತಮ್ಮ ರಾಜನು ಕಂಚಿಯ ಪಲ್ಲವ ಅರಸನ ಮೇಲೆ ಸಾಧಿಸಿದ ವಿಜಯದ ನೆನಪಿಗಾಗಿ ಕ್ರಮವಾಗಿ ಪಟ್ಟದಕಲ್ಲುವಿನಲ್ಲಿ ಲೋಕೇಶ್ವರ ದೇವಾಲಯವನ್ನು (ಇಂದಿನ ವಿರುಪಾಕ್ಷಗುಡಿ) ಮತ್ತು ತ್ರೈಲೋಕೇಶ್ವರ ದೇವಾಲಯವನ್ನು (ಇಂದಿನ ಮಲ್ಲಿಕಾರ್ಜುನಗುಡಿ) ಕಟ್ಟಿಸಿರುವರು. ಈ ದೇವಾಲಯಗಳನ್ನು ಮೊದಲು ಈ ರಾಣಿಯರ ಹೆಸರುಗಳಿಂದಲೇ ಕರೆಯಲಾಗುತ್ತಿತ್ತು. ಇವರು ಹೈಹಯ ವಂಶದ ಸೋದರಿಯರು ಲೋಕೇಶ್ವರ ದೇವಾಲಯದ

ಸೂತ್ರಧಾರಿ ಸರ್ವಸಿದ್ಧಿ ಆಚ ಮೂರಿಬಾರಿ ಪೆರ್ಜೆಟಿಪು ಎಂಬ ಘನತರ ಗೌರವವನ್ನು ಸಲ್ಲಿಸಿರುವರು. ಲೋಕೇಶ್ವರ ದೇವರಿಗೆ ನರೆಯಂಗಲ್ಲಿನ ಪನ್ನಾಸ (ಎಲೆಯ ಸುಂಕವಿರಬಹುದು)ವನ್ನು[13] ವಿಕ್ರಮಾದಿತ್ಯ ಅರಸನು ಬಿಟ್ಟಿರುವುದನ್ನು ಶಾಸನವೊಂದು ತಿಳಿಸುತ್ತದೆ.

ವಿರುಪಾಕ್ಷ ದೇವಾಲಯವು ಬಹುದೊಡ್ಡದು. ಅದರ ಪಕ್ಕದಲ್ಲಿರುವ ಮಲ್ಲಿಕಾರ್ಜುನ ದೇವಾಲಯವು ಸಣ್ಣದು. ಆದರೂ ಒಂದೇ ತೆರನಾಗಿವೆ. ಈ ದೇವಾಲಯಗಳ ಯೋಜನೆ ಶಿಲ್ಪಗಳು, ವಿನ್ಯಾಸ, ಇವುಗಳಲ್ಲಿ ಕಂಚಿಯ ಕೈಲಾಸ ದೇವಾಲಯವನ್ನು ಹೋಲುತ್ತವೆ. 67 ಮೀಟರ್ ಉದ್ದ 32 ಮೀಟರ್ ಅಗಲದ ವಿರುಪಾಕ್ಷದೇವಾಲಯವು ಆಯತಾಕಾರದಲ್ಲಿವೆ. ಸುತ್ತಲೂ ಪ್ರಕಾರ ಪೂರ್ವ ಪಶ್ಚಿಮ ದಿಕ್ಕುಗಳಲ್ಲಿ ದ್ವಾರಗಳು ಪ್ರಾಕಾರದೊಳಗೆ ಹೊಂದಿಕೊಂಡಂತೆ ಸಣ್ಣಗುಡಿಗಳು, ಪೂರ್ವದ್ವಾರದಿಂದ ನದಿಗೆ ಹಾದಿಯಿದೆ. ಅಲ್ಲಿಯ ದ್ವಾರದ ಮೇಲೆ ಕಚ್ಚಾಕಾರದ ಶಿಲಾ ಗೋಪುರವಿದೆ. ಇದು ನಂತರದ ಬೃಹದಾಕಾರದ ಗೋಪುರವೆನಿಸುತ್ತದೆ. ಪ್ರಾಕಾರವನ್ನು ಹೊಕ್ಕಾಗ 7.5 ಮೀಟರ್ ಚೌಕಾಕಾರದ ತಳವಿನ್ಯಾಸದ ನಂದಿಮಂಟಪ ಇದೆ. ಇದು 2.5 ಮೀಟರ್ ಎತ್ತರದ ಜಗುಲಿಯ ಮೇಲಿದೆ. ನಾಲ್ಕು ವೃತ್ತಾಕಾರದ ಕುಬ್ಜ ಕಂಬಗಳು ಮಂಟಪವನ್ನು ಹೊತ್ತಿವೆ. ಸುತ್ತಲು ಆನೆ, ಕುಬ್ಜರು, ಕಿನ್ನರ, ಮಿಥುನ, ಇಂದ್ರಾಣಿ, ಶುಕಭಾಷಣಿ ಮುಂತಾದ ಉಬ್ಬು ಶಿಲ್ಪಗಳು ಇವೆ.

ಈ ದೇವಾಲಯವು ಗೋಪುರದಿಂದ 5 ಮೀಟರ್ ದೂರದಲ್ಲಿದೆ. ಅಂತರಾಳವನ್ನು ಸೇರಿದಂತೆ ಸಾಂಧಾರ ಗರ್ಭಗೃಹ ಹಿರಿದಾದ ಸಭಾಮಂಟಪ ಇದರ ಮೂರು ದಿಕ್ಕುಗಳಿಗೂ ಮುಖಮಂಟಪಗಳಿವೆ. ಆನೆ, ಸಿಂಹ, ಇತ್ಯಾದಿ, ಶಿಲ್ಪಗಳಿಂದ ಅಲಂಕೃತವಾಗಿರುವ ಎತ್ತರದ ಅದಿಷ್ಠಾನದ ಮೇಲೆ ಮುಖ ಮಂಟಪವಿದೆ. ಮುಂಭಾಗದಲ್ಲಿ ದೇವಾಲಯ ಪ್ರವೇಶಿಸಲು ಮೆಟ್ಟಿಲುಗಳಿವೆ. ಎರಡೂ ಕಡೆ ಕಕ್ಷಾಸನಗಳು ಎರಡು ಶಿಲ್ಪಾಲಂಕೃತ ಕಂಭಗಳು ಇವೆ. ಪೂರ್ವ ದಿಕ್ಕಿನ ಮುಖ ಮಂಟಪದಲ್ಲಿ ಕಂಭಗಳಲ್ಲಿ ದ್ವಾರಪಾಲಕರ, ಪದ್ಮನಿಧಿ ಮತ್ತು ಶಂಕನಿದಿಗಳ ಶಿಲ್ಪಗಳಿವೆ. ಸೂರಿನಲ್ಲಿ ರಥಾರೂಢನಾಗಿ ಸಂಜ್ಞಾ ಮತ್ತು ಛಾಯಾ ದೇವಿಯರೊಡಗೂಡಿ ಮೋಡಗಳಲ್ಲಿ ಚಲಿಸುತ್ತಿರುವ ಸೂರ್ಯನ ವಿಗ್ರಹವಿದೆ. ದಕ್ಷಿಣ ಮುಖಮಂಟಪದಲ್ಲಿ ನರಸಿಂಹ–ಹಿರಣ್ಯಾಕಶಿಪುಗಳ ದ್ವಂದ್ವಯುದ್ಧ, ರಾವಣ ಕೈಲಾಸವನ್ನು ಎತ್ತಿ ಹಿಡಿದಿರುವ ದೃಶ್ಯಗಳಿವೆ. ಉತ್ತರ ಮುಖಮಂಟಪದಲ್ಲಿ ಗಜೇಂದ್ರ ಮೋಕ್ಷಕ್ಕೆ ಸಂಬಂಧಿಸಿದ ಶಿಲ್ಪಗಳಿವೆ.

---

[13] ಐ.ಎ X ಪುಟ–167.

ಸಭಾಮಂಟಪ ವಿಶಾಲವಾಗಿದ್ದು 18 ಕಂಭಗಳನ್ನು ನಾಲ್ಕು ಸಾಲುಗಳಲ್ಲಿ ನಿಲ್ಲಿಸಲಾಗಿದೆ. ಅವುಗಳ ಮೇಲೆ ರಾಮಾಯಣ, ಮಹಾಭಾರತ, ಭಾಗವತಕ್ಕೆ ಸಂಬಂಧಿಸಿದ ಚಿತ್ರ ಶಿಲ್ಪಗಳನ್ನು ಕೆತ್ತಲಾಗಿದೆ. ಭುವನೇಶ್ವರಿಯಲ್ಲಿ ಸುರಳಿ ಸುತ್ತಿದ ನಾಗಾ ಮತ್ತು ಗಜಲಕ್ಷ್ಮಿಯರ ವಿಗ್ರಹಗಳಿವೆ. ಅಂತರಾಳದ ದ್ವಾರಬಂಧವು ಅಲಂಕಾರಮಯವಾಗಿದೆ. ಚೌಕಾಕಾರದ ಗರ್ಭಗೃಹದಲ್ಲಿ ಅದೇ ಆಕಾರದ ಪಾಣಿಪೀಠದ ಮೇಲೆ ಶಿವಲಿಂಗವಿದೆ.

ದೇವಾಲಯದ ಹೊರಗಿನ ಏರು ವಿನ್ಯಾಸದ ಭಿತ್ತಿಯಲ್ಲಿ ಕೆಳಗೆ ಪಟ್ಟಿಕೆಗಳು ನಂತರ ಅಧಿಷ್ಠಾನ, ಭಿತ್ತಿಯಲ್ಲಿ ಹುದುಗು ಕಂಭಗಳು, ಕೋಷ್ಟಕಗಳು ಅದರ ಮೇಲೆ ದಿಂಡಿನಲ್ಲಿ ಕಪೋತ ಶಾಲಾಕೂಟ ಹಾರಗಳ ಅಲಂಕರಣವಿದೆ ಕೋಷ್ಠಕಗಳಲ್ಲಿ ಲಿಂಗೋದ್ಭವಮೂರ್ತಿ, ನಟರಾಜ, ಹರಿಹರ, ನರಸಿಂಹ ಮುಂತಾದ ಉಬ್ಬುಶಿಲ್ಪಗಳಿವೆ. ಗರ್ಭಾಲಯದ ಮೇಲೆ ತ್ರಿತಲಗಳ ದ್ರಾವಿಡ ವಿಮಾನವಿದೆ. ಗರ್ಭಗೃಹದ ಹೊರಭಾಗದ ವಾಸ್ತು ಅಂಶಗಳು, ಪ್ರತಿತಳದಲ್ಲೂ ಮೆಟ್ಟಿಲು ಮೆಟ್ಟಿಲಾಗಿ ಕಾಣುವಂತೆ ರೂಪಿಸಿದೆ, ಮೇಲೆ ಚೌಕಾಕಾರದ ಸ್ತೂಪಿ ಮತ್ತು ಕಲಶವಿದೆ. ಬಾದಾಮಿ ಚಾಲುಕ್ಯರ ರಾಣಿಯರು ಕಟ್ಟಿಸಿರುವ ದೇವಾಲಯಗಳಲ್ಲೆಲ್ಲಾ ಅತಿ ವಿಸ್ತಾರವಾದ ದೇವಾಲಯ ಇದೆ. ಇದನ್ನು ನಿರ್ಮಾಣ ಮಾಡಿದ ಶಿಲ್ಪಿಗಳು ಸರ್ವಸಿದ್ಧಿ, ಆಚಾರಿ, ಬಲದೇವ ಮುಂತಾದವರು.[14]

ಸಮಕಾಲೀನ ನಿರ್ಮಾಣವಾದ ಮಲ್ಲಿಕಾರ್ಜುನ ದೇವಾಲಯವನ್ನು ಇಮ್ಮಡಿ ವಿಕ್ರಮಾದಿತ್ಯನ ಎರಡನೆಯ ರಾಣಿ ತ್ರೈಲೋಕ್ಯಮಹಾದೇವಿ ನಿರ್ಮಿಸಿದಳು. ಇದು ವಿರುಪಾಕ್ಷ ದೇವಾಲಯದ ಪ್ರತಿರೂಪವೇ ಆಗಿದೆ. ಆದರೆ ಚಿಕ್ಕದು ಪ್ರಾಕಾರದ ಗೋಡೆ, ನಂದಿಮಂಟಪಗಳು, ಶಿಥಿಲಗೊಂಡಿವೆ. ಗರ್ಭಗುಡಿಯ ಮೇಲಿನ ವಿಮಾನವು ವೃತ್ತಾಕಾರದಲ್ಲಿದೆ. ಮುಖಮಂಟಪದ ಕಂಬಗಳಮೇಲೆ ಸುಂದರಿಯರ ವಿಗ್ರಹಗಳಿವೆ. ದ್ವಾರಬಂಧದ ಮೇಲೆ ಅಲಂಕಾರಗಳಿವೆ. ಒಳಗಿನ ಗರ್ಭಗೃಹದಲ್ಲಿ ಶಿವಲಿಂಗವಿದೆ. ಸಭಾಮಂಟಪದ ಕಂಭಗಳ ಮೇಲೆ ಹಲವು ಚಿತ್ರಾವಳಿಗಳಿವೆ. ಭುವನೇಶ್ವರಿಯಲ್ಲಿ ನಂದಿಯೊಂದಿಗೆ ಇರುವ ಪಾರ್ವತಿ ಪರಮೇಶ್ವರರ ಶಿಲ್ಪವಿದೆ. ವಿರೂಪಾಕ್ಷ ದೇವಾಲಯಕ್ಕಿಂತಲೂ ಉತ್ತಮವಾದ ಶಿಲಾ ವಿನ್ಯಾಸಗಲು ಇಲ್ಲಿ ಕಾಣಿಸುತ್ತವೆ.

ಈ ದೇವಾಲಯಗಳನ್ನು ನಿರ್ಮಿಸಿದ ಶಿಲ್ಪಗಳು ಶಿಲ್ಪಶಾಸ್ತ್ರ ವಿಶಾರದರಾಗಿದ್ದರು ಎಂಬುದು ದೇವಾಲಯಗಳನ್ನು, ಶಿಲಾವಿನ್ಯಾಸವನ್ನು ಇಲ್ಲಿ ಸಂತುಲಿನ ಪ್ರಮಾಣವನ್ನು ಗಮನಿಸಿದರೆ

---

[14] ಎ.ಎಮ್ ಅಣ್ಣಿಗೇರಿ, ಪಟ್ಟದಕಲ್ಲು ಗುಡಿಗಳ, ನಂ. 24, ಧಾರವಾಡ ಮತ್ತು ಪು–151–152. 1960.

ಯಾರಾದರೂ ಅಂಗೀಕರಿಸುತ್ತಾರೆ. ಸತ್ಯಾಶ್ರಯನ ರಾಣಿಯಾದ ಲೋಕಮಹಾದೇವಿ ಪಟ್ಟದಕಲ್ಲುವಿನಲ್ಲಿ ವಿರುಪಾಕ್ಷ ದೇವಾಲಯವನ್ನು ಕಟ್ಟಿದಕ್ಕೆ ಅವನಿಗೆ ಮೂರುಬಾರಿ ಉತ್ಸವವನ್ನು ಮಾಡಿ, ಪಟ್ಟವನ್ನು ಕಟ್ಟಿ 'ತ್ರಿಭುವನಾಚಾರಿ' ಎಂದು ಹೆಸರಿಟ್ಟ ವಿಷಯವನ್ನು ಶಾಸನ ತಿಳಿಸುತ್ತದೆ.[15]

"ಸ್ವಸ್ತಿ ಶ್ರೀವಿಕ್ರಮಾದಿತ್ಯ ಶ್ರೀಪೃಥ್ವಿವಲ್ಲಭ ಮಹಾದೇವಿಯರಾ ದೇಗುಲಾಮಾನ್ ಮಾಡಿದ ಸೂತ್ರದಾರ ಶ್ರೀಗುಂಡನ ನಿವಾರಿತಾಚಾರಿಗೆ ಮೂಮೆ ಪೆರ್ಜಿಟಿಪು ಪಟ್ಟಮು ತ್ರಿಭುವನಚಾರಿಯೆಂದು ಪೆಸರಿಟ್ಟು ಪ್ರಸಾದಂಗೆಯ್ದಾ ಪೃಥಿವಿಯೂ ಬಿನ್ನಾಣಿಗಳಾ ಬಳ್ಳಿಗವಾರ್ತೆ ಇಲ್ಲ ದೋಸಿಗನ ಕವದ್ದು ಮಿರ್ದೊರ್ಗೆ ಪರಿಹಾರಂ" ಅವನಿಗೆ ದೇವಾಲಯದ ನಿರ್ಮಾಣ ಕಾರ್ಯದಲ್ಲಿ ಸಹಕರಿಸಿದ ಕುಶಲ ಕರ್ಮಿಗಳಿಗೆ ಕೆಲವಾರು ಸೌಲಭ್ಯಗಳನ್ನು ರಾಣಿಕೊಟ್ಟಂತಹ ವಿಷಯಗಳನ್ನು ಶಾಸನ ಉಲ್ಲೇಖಿಸಿದೆ. ಇದು ರಾಜಮನೆತನದ ರಾಣಿಯ ಸಂಪತ್ತಿನ ಎಲ್ಲೆಯನ್ನೂ ಸಹ ಶಾಸನ ತಿಳಿಯಪಡಿಸುತ್ತದೆ.

ಅಲಂಪೂರದ ಗರುಡಬ್ರಹ್ಮನ ಗುಡಿಯ ಹಿಂದೆ, ಚಾಲುಕ್ಯರ ವಿನಯಾದಿತ್ಯನ ಪಟ್ಟದ ರಾಣಿ ಕಟ್ಟಿಸಿರುವ ಸ್ವರ್ಗದ ಬ್ರಹ್ಮಗುಡಿ' ಇದೆ. ಇದರ ಮುಖಮಂಟಪದ ಎರಡೂ ಕಡೆ ಮೃಗ ಶರೀರಿಗಳಾದ ದ್ವಾರಪಾಲಕರಿದ್ದಾರೆ. ಗೋಡೆಯ ಕೋಷ್ಟಕಗಳಲ್ಲಿ ಗಂಗಾವತಣ, ತ್ರಿಪುರಾಂತಕ, ನಟರಾಜ, ತ್ರಿವಿಕ್ರಮ ಲಿಂಗೋದ್ಭವ, ಮೂರ್ತಿಗಳ ಶಿಲ್ಪಿಗಳಿವೆ. ಅಧಿಷ್ಠಾನದ ತಂತ್ರಗಳಲ್ಲಿ ಸಂಗೀತ ಲೋಲುಪಾರದ ಗಣಗಳು, ಗೋಡೆಗಳ ಮೇಲ್ಮಟ್ಟದಲ್ಲಿ ಶಿಲ್ಪಗಳು, ಮಂಟಪದ ಕಂಭಗಳ ತುದಿಗಳಲ್ಲಿ ಪೂರ್ಣಕಂಭ ಮತ್ತು ಸಿಂಹಲಲಾಟ ಇತ್ಯಾದಿ ಅಲಂಕರಣಗಳಿವೆ.[16]

### 4) ರಾಷ್ಟ್ರಕೂಟರ ಕಾಲ

ದಂತಿದುರ್ಗನ ಕಾಲದಲ್ಲಿ ರಾಷ್ಟ್ರಕೂಟರು ಪ್ರಾಮುಖ್ಯತೆ ಪಡೆದರು. ಬಾದಾಮಿ ಚಾಲುಕ್ಯರನ್ನು ಸೋಲಿಸಿ ಸ್ವತಂತ್ರ್ಯ ರಾಜ್ಯವನ್ನು ಸ್ಥಾಪಿಸಿದರು. ಒಂದನೇ ಕೃಷ್ಣ, ಮೂರನೇಗೋವಿಂದ, ಒಂದನೇ ಅಮೋಘವರ್ಷ, ಎರಡನೇ ಕೃಷ್ಣ, ಮೂರನೇ ಇಂದ್ರ, ಮೂರನೇ ಕೃಷ್ಣ ಅರಸರುಗಳು ಪ್ರಮುಖರು. ಇವರು ಚಾಲುಕ್ಯರಂತೆ ದಿಗ್ವಿಜಯಿಶಾಲಿಗಳು, ಸಾಹಿತ್ಯ ಪ್ರೇಮಿಗಳು, ಕಲಾಸಕ್ತರು ಆದ್ದರಿಂದ ದಾನದತ್ತಿಗಳನ್ನು ನೀಡುವುದರೊಂದಿಗೆ ಇತರರು ನಿರ್ವಹಿಸಿದ ದೇವಾಲಯಗಳನ್ನು ಜೀರ್ಣೋದ್ದಾರ ಕಾರ್ಯಗಳನ್ನು ಮಾಡಿದ್ದಾರೆ.

---

[15] ಐ.ಎ IX, ಪುಟ–74, ಕ್ರಿ.ಶ. 750 ಮತ್ತು ಕ್ಷೇತ್ರಕಾರ್ಯ ದಿನಾಂಕ 29–8–2010. ಪಟ್ಟದ ಕಲ್ಲು

[16] ಅದೇ. ಪುಟ–159.

ಮೊದಲನೆಯ ಕೃಷ್ಣನು ಎಲ್ಲೋರದಲ್ಲಿ ಸುಪ್ರಸಿದ್ಧ ಕೈಲಾಸನಾಥ ದೇವಾಲಯವನ್ನು ಕೊರೆಯಿಸಿದ. ರಾಷ್ಟ್ರಕೂಟರ ಕಾಲದಲ್ಲಿ ದೇವಾಲಯಗಳ ನಿರ್ಮಾಣಕಾರ್ಯ ಭರದಿಂದ ಸಾಗಿದುದಲ್ಲದೆ ಅನೇಕ ಜೈನ ಮತ್ತು ವೈದಿಕ ಗುಹದೇವಾಲಯಗಳನ್ನು ಸಹ ಕೊರೆಯಿಸಿದರು. ಉತ್ತರ ಕರ್ನಾಟಕದಲ್ಲಿ ರಾಷ್ಟ್ರಕೂಟರ ಕಾಲದ ದೇವಾಲಯಗಳ ಸಂಖ್ಯೆ ದಕ್ಷಿಣ ಕರ್ನಾಟಕಕ್ಕಿಂತ ಅಧಿಕವಾಗಿವೆ. ಐಹೊಳೆ, ಪಟ್ಟದಕಲ್ಲು, ಸಿರಿವಾಳ, ಹೊಳ್ಳೂರು, ಸವಡಿ, ಇಚಿಡಿ, ಶ್ರವಣಬೆಳಗೊಳ, ಬೇಲೂರು, (ಬಾದಾಮಿ ಬಳಿ)ರೋಣ, ಕೊಣ್ಣೂರು, ಕಳಸಾಪುರ, ಲಕ್ಕುಂಡಿ, ಯಂಕಂಚಿ, ಲಕ್ಷ್ಮೇಶ್ವರ, ನರೇಗಲ್, ಕುಡುತಿನಿ, ಕೊಳಗಲ್ಲು, ಹೊಸಮಹಾಕೂಟ, ಶಿರಸ್ತಹಳ್ಳಿ ಮಾವಳಿ, ಗದಗ, ರಾಜೂರು, ಕುಕನೂರು, ಮತ್ತು ಗೌಜ ಮುಂತಾದ ಸ್ಥಳಗಳಲ್ಲಿ ರಾಷ್ಟ್ರಕೂಟರ ಕಾಲದ ದೇವಾಲಯಗಳನ್ನು ಕಾಣಬಹುದು.

ರಾಷ್ಟ್ರಕೂಟ ಧ್ರುವ ರಾಜನ ರಾಣಿ ಶೀಲಮಹಾದೇವಿ, ಶ.ಕ. 708ರಲ್ಲಿ ಇಬ್ಬರು ಬ್ರಾಹ್ಮಣರಿಗೆ ನಂದಿಪುರ ದಾರಿಯಲ್ಲಿ ಕೋಟೆಪದ್ರ ಎಂಬ ಗ್ರಾಮವನ್ನು ದಾನಮಾಡಿದ್ದಾಳೆ. ಈ ಮನೆತನದಲ್ಲಿ ಈ ಉಲ್ಲೇಖಿತ ರಾಣಿಯಾಗಲೀ, ಇನ್ನು ಉಳಿದ ಯಾವ ರಾಣಿಯರಾಗಲೀ ದೇವಾಲಯಗಳನ್ನು ನಿರ್ಮಿಸಿರುವಂತೆ ಕಾಣಸಿಗುವುದಿಲ್ಲ. ಆದರೆ ಕನ್ನರನ ರಾಣಿ ಚಂಡಿಯಬ್ಬೆಯು ನಂದಾವರದ ಬಸದಿಯನ್ನು ನಿರ್ಮಿಸಿರುವ ಬಗ್ಗೆ ಶಾಸನಾಧಾರಗಳಿಂದ ತಿಳಿಯಬಹುದು.[17]

ರಾಷ್ಟ್ರಕೂಟರ ಸಾಮಂತರಾದ ನೊಳಂಬವಂಶದ ರಾಣಿಯರು ಆಡಳಿತ, ಧಾರ್ಮಿಕ ಮತ್ತು ದಾನದತ್ತಿ ಚಟುವಟಿಕೆಗಳಲ್ಲಿ ಆಸಕ್ತರಾಗಿದ್ದರು. ನೊಳಂಬ ರಾಜನನ್ನು ವಿವಾಹವಾಗಿದ್ದ ಕದಂಬ ಮನೆತನದ ದೀವಳಬ್ಬರಸಿಯು ನೊಳಂಬ ನಾರಾಯಣ ದೇವಾಲಯವನ್ನ ಕಟ್ಟಿಸಿದಳು, ಜೊತೆಗೆ ಎಳನಗರ ಗ್ರಾಮವನ್ನು ದಾನ ನೀಡಿದಳು. ತನ್ನ ಹೆಸರಿನಲ್ಲಿಯೇ 'ದೀವಲಬ್ಬಾಸಮುದ್ರಂ' ಎಂಬ ಕೆರೆಯನ್ನು ಸಹ ಕಟ್ಟಿಸಿದ್ದಳು.[18]

### 5) ಕಲ್ಯಾಣದ ಚಾಲುಕ್ಯರ ಕಾಲ

ರಾಷ್ಟ್ರಕೂಟರ ಪತನಾಂತರ ಕ್ರಿ.ಶ. 973ರ ಸುಮಾರಿಗೆ ಕಲ್ಯಾಣದ ಚಾಲುಕ್ಯರು ತಮ್ಮ ಅಧಿಪತ್ಯವನ್ನು ಸ್ಥಾಪಿಸಿದರು. ಇವರು ಕರ್ನಾಟಕವನ್ನೇ ಅಲ್ಲದೇ ಆಂಧ್ರಪ್ರದೇಶ ಮತ್ತು ಮಹಾರಾಷ್ಟ್ರದ

---

[17] ಎಸ್.ಐ.ಐ. IX, ಶಾ.ಸಂ. 62, ಹಾಳಹರವಿಶಾಸನ.

[18] ಡಾ.ಹೆಚ್.ಎಸ್. ಗೋಪಾಲರಾವ್, **ಕನಕಸಿರಿ,** ಪು–512, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು. 1999,

ಕೆಲವು ಪ್ರದೇಶಗಳನ್ನು 200 ವರ್ಷಗಳಿಗಿಂತಲೂ ಮೇಲ್ಪಟ್ಟು ಆಳಿದರು. ಕಲ್ಯಾಣದ ಚಾಲುಕ್ಯರ ಕಾಲದ ಸುಪ್ರಸಿದ್ಧ ರಾಜಕೀಯ ಅರಸು, ಆರನೇ ವಿಕ್ರಮಾದಿತ್ಯನು ವಿಸ್ತಾರವಾದ ಪ್ರದೇಶವನ್ನು ಆಳಿದನು. ಕಲ್ಯಾಣದ ಚಾಲುಕ್ಯರು ತಮ್ಮ ಕಾಲಾವಧಿಯಲ್ಲಿ ವಿಫುಲ ಸಂಖ್ಯೆಯ ದೇವಾಲಯಗಳನ್ನು ನಿರ್ಮಿಸಿದ್ದಾರೆ. ಇವರ ಕಾಲದ ದೇವಾಲಯಗಳನ್ನು ಔರಂಗಬಾದದ ಕೊಡದಿಂದ ತುಮಕೂರು ಜಿಲ್ಲೆಯ ಅರಳುಗುಪ್ಪೆಯವರೆವಿಗೂ, ಕೊಲ್ಲಾಪುರದಿಂದ ಮಹಬೂಬನಗರ ಜಿಲ್ಲೆಯ ಪಾನಗಲ್ಲುವರೆಗೂ ಕಾಣಬಹುದು. ಇವುಗಳ ಜೊತೆಗೆ ಇವರ ವಾಸ್ತುಶಿಲ್ಪವನ್ನು ನಿರೂಪಿಸುವ ಬಹುಸಂಖ್ಯೆಯ ದೇವಾಲಯಗಳು ಬಳ್ಳಾರಿ, ಧಾರವಾಡ ಮತ್ತು ಶಿವಮೊಗ್ಗ ಜಿಲ್ಲೆಗಳಲ್ಲಿವೆ.

ಈ ದೇವಾಲಯಗಳನ್ನು ಹೆಚ್ಚಾಗಿ ತುಂಗಭದ್ರಾ ನದಿಯ ಎರಡೂ ದಂಡೆಗಳ ಮೇಲೆ ಸುತ್ತ–ಮುತ್ತಾ ಕಟ್ಟಲಾಗಿದೆ. ಇವರ ಕಾಲದ ಪ್ರಮುಖ ಕಲಾ ಕೇಂದ್ರಗಳೆಂದರೆ, ಅಬ್ಬಲೂರು, ಅಂಬಳಿ, ಅಣ್ಣಿಗೇರಿ, ಅಮರಗೋಳ, ಅನವಟ್ಟಿ, ಅಮೃತಕುಂಡ, ಬಾಗಳಿ, ಬಾಳಂಬೀಡು, ಬಂಕಾಪುರ, ಬಳ್ಳಿಗಾವೆ, ಬಂದಳಿಕೆ, ಭಾರಂಗಿ, ಬಾದಾಮಿ, ಐಹೊಳೆ, ಚೌಡನಪುರ, ಡಂಬಳ, ದೇಗಾವಿ, ಗೇರುಸೊಪ್ಪು, ಗಬ್ಬೂರು, ಗಳಗನಾಥ, ಗದಗ, ಹಲಸಿ, ಹೂಲಿ, ಹಂಪಿ, ಹೂವಿನ ಹಡಗಲಿ, ಹೀರೆಹಡಗಲಿ, ಹಲವಾಗಲಿ, ಹಾವೇರಿ ಹರಳಹಳ್ಳಿ, ಹಾನಗಲ್, ಹುಂಚ, ಇಟಗಿ, ಜಲಸಂಗಿ, ಹರಿಹರ, ಕುಡುತಿನಿ, ಕುರುಗೋಡು, ಕುಮಾರಸ್ವಾಮಿಗುಡ್ಡ, ಕೊಳಗಲ್ಲು, ಕೋಗಳಿ, ಕುಂದಗೋಳು, ಕುಕ್ಕನೂರು, ಕುರುವತ್ತಿ, ಲಕ್ಕುಂಡಿ, ಲಕ್ಷ್ಮೇಶ್ವರ, ಮಾಗಳಿ, ನೀರಗುಂದ, ನೀಲಾಂಗ, ನಾಗಾವಿ, ನಾರಾಯಣಪುರ, ನೇರಳಗಿ, ರಟ್ಟಹಳ್ಳಿ, ಸೇಡಂ, ತಿಳವಳ್ಳಿ ಮತ್ತು ಉಣಕಲ್ ಮುಂತಾದವು.

ಕಲ್ಯಾಣಚಾಲುಕ್ಯರ ಚಕ್ರವರ್ತಿಗಳು ಚತುಸ್ಸಮಯ ಸಮುದ್ದರಣರು ಎಂದು ಕರೆದುಕೊಂಡಿದ್ದರು. ರಾಜನೋ ಬಹುವಲ್ಲಭಾ ಎಂಬ ಮಾತು ಆರನೇ ವಿಕ್ರಮಾದಿತ್ಯನಿಗೆ ಸಲ್ಲುತ್ತದೆ. ಆರನೇ ವಿಕ್ರಮಾದಿತ್ಯ ಹಲವಾರು ಜನ ರಾಜಕುಮಾರಿಯನ್ನು ತನ್ನ ರಾಣಿಯರನ್ನಾಗಿ ಮಾಡಿಕೊಳ್ಳುವುದರ ಮೂಲಕ ವಿವಿಧ ಮತಗಳನ್ನು ಪ್ರೋತ್ಸಾಹಿಸಿರುವರೆಂದು ಚೆನ್ನಕ್ಕ ಎಲಿಗಾರರವರು. ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ ಎಂಬ ಕೃತಿಯಲ್ಲಿ ವ್ಯಕ್ತಪಡಿಸಿದ್ದಾರೆ.[19] ಇವನು ಇಪ್ಪತ್ತು ಜನ ರಾಣಿಯರನ್ನು ಹೊಂದಿದ್ದ ಎಂಬುದು ಗಮನಾರ್ಹ. ಈ ಕಾಲದಲ್ಲಿ ರಾಣಿಯರು ದೇವಾಲಯಗಳ ಗಮನಾರ್ಹ. ಈ ಕಾಲದಲ್ಲಿ ರಾಣಿಯರು ದೇವಾಲಯಗಳ

---

[19] ಡಾ.ಚೆನ್ನಕ್ಕ ಎಲಿಗಾರ, **ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ,** ಪು–137, ಧಾರವಾಡ–ಪ್ರಸಾರಂಗ, ಕರ್ನಾಟಕ ವಿಶ್ವವಿದ್ಯಾಲಯ, 1990,

ನಿರ್ಮಾಣ ಕಾರ್ಯಗಳಿಗಿಂತ ಹೆಚ್ಚಿನ ದೇವಾಲಯಗಳ ಅಭಿವೃದ್ಧಿಗಾಗಿ, ದಾನ, ದತ್ತಿಗಳನ್ನು ನೀಡುವುದರ ಮೂಲಕ ಪ್ರೋತ್ಸಾಹಿಸಿದ್ದಾರೆ. ರಾಣಿಯರು ದೇವಾಲಯಗಳಿಗೆ (ಧಾರ್ಮಿಕ ಕಾರ್ಯಗಳಿಗೆ) ನೀಡಿರುವ ದಾನ–ದತ್ತಿಗಳ ಕೊಡುಗೆಗಳನ್ನು ಈಗಾಗಲೇ ನಾವು ಧಾರ್ಮಿಕ ಕ್ಷೇತ್ರದಲ್ಲಿ ರಾಣಿಯರು ಎಂಬ ಉಪ ಅಧ್ಯಾಯದಲ್ಲಿ ವಿವರಿಸಲಾಗಿದೆ.

ರಾಣಿಯರು ಧಾರ್ಮಿಕ ಕ್ಷೇತ್ರದಲ್ಲಿ ಎಷ್ಟು ಪ್ರಭಾವ ಬೀರಿದ್ದರು ಎಂಬುದಕ್ಕೆ ಆ ರಾಣಿಯರ ಹೆಸರಿನ ದೇವಾಲಯಗಳನ್ನು ಸಮೀಕರಿಸಬಹುದು. ಹಿರಿಯ ಕೇತಲದೇವಿಯ ಕೇತಲೇಶ್ವರ ದೇವಾಲಯವನ್ನು[20] ಮಾಳಲದೇವಿಯು ಮಾಳಲೇಶ್ವರ ದೇವಾಲಯವನ್ನು ಯಳವಟ್ಟಿಯಲ್ಲಿ ನಿರ್ಮಿಸಿರುವುದನ್ನು ಹೆಸರಿಸಬಹುದು.[21] ಕಲ್ಕೇರಿಶಾಸನದ ಪ್ರಕಾರ ಆರನೇ ವಿಕ್ರಮಾದಿತ್ಯನ ರಾಣಿಯರಲ್ಲಿ ಒಬ್ಬಳಾದ ಮಾಳಲದೇವಿ, ಶಿವಾಲಯ, ಆದಿತ್ಯಾಲಯ, ವಿಷ್ಣುಗೃಹ, ಬುದ್ಧವಿಹಾರ, ನಾಗಾಲಯಗಳನ್ನು ಮಾಡಿಸಿದಳೆಂಬ ವಿಷಯವನ್ನು ತಿಳಿಸುತ್ತದೆ.[22] ಈಕೆ ಚುತಸ್ಸಮಯ ಸಮುದ್ದರಣ್ ಆಗಿದ್ದಳೆಂಬುದು ಮೇಲಿನ ಆಧಾರದಿಂದ ತಿಳಿಯಬಹುದಾಗಿದೆ.

ಪ್ರಾಪ್ತವಾಗಿರುವ ಶಾಸನಗಳ ಪ್ರಕಾರದ ಆಧಾರಗಳಿಂದ ಕಲ್ಯಾಣ ಚಾಲುಕ್ಯ ಅರಸರಲ್ಲಿ ಪ್ರಸಿದ್ಧನಾದ ಆರನೆಯ ವಿಕ್ರಮಾದಿತ್ಯನ ಕುಟುಂಬದವರು ಬಿಟ್ಟರೆ ಬೇರೆ ಯಾರೂ ಈ ದೇವಾಲಯಗಳ ವಿನಹ ಮತ್ತಾರು ದೇವಾಲಯಗಳ ನಿರ್ಮಾಣದಲ್ಲಿ ಭಾಗಿಯಾದಂತೆ ಕಾಣುವುದಿಲ್ಲ. ಆರನೆಯ ವಿಕ್ರಮಾದಿತ್ಯನ ದೀರ್ಘಕಾಲದ ಆಳ್ವಿಕೆಯ ಸಂದರ್ಭವು ಅವರ ಕುಟುಂಬದ ಬಹುತೇಕ ಜನ ಅದರಲ್ಲೂ ವಿಶೇಷವಾಗಿ ರಾಣಿಯರು ದೇವಾಲಯಗಳ (ವಾಸ್ತುಶಿಲ್ಪ) ನಿರ್ಮಾಣ ಕಾರ್ಯ ಮತ್ತು ದಾನ ಇತ್ಯಾದಿ ಧಾರ್ಮಿಕ ಕಾರ್ಯದಲ್ಲಿ ತಮ್ಮನ್ನು ಹೆಚ್ಚಾಗಿ ತೊಡಗಿಸಿ ಕೊಂಡಿರುವುದು ಸಾಧ್ಯವಾಗಿದೆ.

ಮಹಾಮಂಡಳೇಶ್ವರನಾಗಿದ್ದ ವಿಜಯ ಪಾಂಡ್ಯದೇವನ ಪಾದಜೀವಿಯೆನಿಸಿದ್ದ 'ಸೋಮಲದೇವಿ' ಸೋಮ ಎಂಬ ಹೆಸರಿನ ದೇವಾಲಯವನ್ನು ನಿರ್ಮಿಸಿ ದತ್ತಿಯನ್ನು ನೀಡಿದ್ದಾಳೆ.[23] ಚಾಲುಕ್ಯರ ರವಿದೇವ ದಂಡನಾಯಕನ ಪತ್ನಿ ರೆಬ್ಬಲಾ ದೇವಿಯು ಹೂವಿನ ಹಡಗಲಿಯಲ್ಲಿ ಕ್ರಿ.ಶ.

---

[20] ಎಸ್.ಐ.ಐ. IX –I, 159 ಸಿರಗುಪ್ಪಾ, ತಾ॥ ಬಳ್ಳಾರಿ, ಕ್ರಿ.ಶ. 1092

[21] ಎಸ್.ಐ.ಐ IX – ii 175 ಚಿನ್ನತುಂಬಲ, ತಾ॥ ಅಡೋನಿ, ಕ್ರಿ.ಶ. 1107.

[22] ಎಸ್.ಐ.ಐ – xx & VKI – IV – 49, ಕ್ರಿ.ಶ. 1076.

[23] ಎ.ಕ. Xi – ದಾವಣಗೆರೆ ಶಾ. ಸಂಖ್ಯೆ 5, ಆನೆಕೊಂಡ, ಕ್ರಿ.ಶ 1166.

1909ರಲ್ಲಿ ಕೇಶವ ದೇವಾಲಯವನ್ನು ನಿರ್ಮಿಸಿದ್ದಾಳೆ.[24] ಚಾಲುಕ್ಯರ ರಾಜಕುಮಾರಿ ಅಕ್ಕಾದೇವಿಯು ಅರಸೀ ಬೀದಿಯಲ್ಲಿ 'ಗುಣದ ಬೆಡಂಗಿ' ದೇವಾಲಯವನ್ನು,[25] ಮತ್ತು ಸೊಡಿಯಲ್ಲಿ ಶಿವಾಲಯವೊಂದನ್ನೂ ಸಹ ನಿರ್ಮಿಸಿರುವುದು ವಿಶೇಷ.[26]

ದಕ್ಷಿಣ ಭಾರತವನ್ನು ಒಟ್ಟಾಗಿ ಆಕ್ರಮಿಸಿಕೊಂಡ ಆರನೇ ವಿಕ್ರಮಾದಿತ್ಯ ತನ್ನ ಚಿಕ್ಕಪುಟ್ಟ ವಿಭಾಗಗಳನ್ನು ತನ್ನ ರಾಣಿಯರ ಆಡಳಿತಕ್ಕೆ ಬಿಟ್ಟುಕೊಟ್ಟಿದ್ದ ಅವರಲ್ಲಿ ಲಕ್ಷ್ಮೀದೇವಿ ವಿಕ್ರಮಾದಿತ್ಯನ ಆಡಳಿತದ ಐದನೇಯ ವರ್ಷ ಅಂದರೆ ಕ್ರಿ.ಶ. 1080ರಲ್ಲಿ ಮುಂಡರಗಿ ತಾಲ್ಲೂಕಿನ ಡೋಣಿಯನ್ನು ಆಳುತ್ತಿದ್ದಳು. ಶಿವಶರಣೆಯಾಗಿದ್ದ ಇವಳು ತವರೂರಾದ ಖೇಡಗಿಯಲ್ಲಿ ಕಂಕೇಶ್ವರ ದೇವಾಲಯವನ್ನು ನಿರ್ಮಿಸಿದ್ದಳು.[27] ಅಲ್ಲದೇ ಅದನ್ನು ತನ್ನ ತಂದೆ ಕಂಕೋಜನ ಹೆಸರಿನಲ್ಲಿ ನಿರ್ಮಿಸಿ ಅದಕ್ಕೆ ಪೂಜೆ, ಪುನಸ್ಕಾರಗಳಿಗಾಗಿ ಭೂಮಿ, ನಿವೇಶನ, ಹೂವಿನ ತೋಟಗಳನ್ನು ಈಕೆ ದಾನವಾಗಿ ನೀಡಿದಳು. ಇದು ಸಾಮಾನ್ಯವಾಗಿ ಹೆಣ್ಣು ಮಕ್ಕಳು ತಮ್ಮ ತವರೂರಿನ ಮೇಲಿನ ಪ್ರೀತಿಗೆ ಕನ್ನಡಿ ಹಿಡಿದಂತಿದೆ.

### 6) ಹೊಯ್ಸಳರ ಕಾಲ

ಹೊಯ್ಸಳರ ಸಾಮ್ರಾಜ್ಯ ಸಳ ನಿಂದ ಪ್ರಾರಂಭವಾಗುತ್ತದೆ. ಹತ್ತನೆಯ ಶತಮಾನದ ಅಂತ್ಯದಲ್ಲಿ ಆರಂಭವಾದ ಹೊಯ್ಸಳ ಸಾಮ್ರಾಜ್ಯ ಕಾಲಕ್ರಮೇಣ ವಿಸ್ತೀರ್ಣದಲ್ಲಿ ಹೆಚ್ಚುತ್ತಾ ದಕ್ಷಿಣ ಭಾರತದ ಪ್ರಮುಖ ರಾಜ್ಯಗಳಲ್ಲಿ ಒಂದಾದ ಕರ್ನಾಟಕದ ಸಾಂಸ್ಕೃತಿಕ ಬೆಳವಣಿಗೆಯಲ್ಲಿ ಮಹತ್ವದ ಪಾತ್ರವಹಿಸಿತು. ಹೊಯ್ಸಳ ಸಾಮ್ರಾಜ್ಯದಲ್ಲಿ ವಿಷ್ಣುವರ್ಧನ ಅತ್ಯಂತ ಪ್ರಬಲ ಮತ್ತು ಪ್ರಮುಖ ಅರಸ, ಒಂದನೇ ನರಸಿಂಹ, ಎರಡನೇ ಬಲ್ಲಾಳ, ಎರಡನೇ ನರಸಿಂಹ, ಸೋಮೇಶ್ವರ, ಮೂರನೇ ಬಲ್ಲಾಳರು, ಇತರೆ ಪ್ರಮುಖ ರಾಜರು. ಇವರಲ್ಲಿ ಅನೇಕರು ಕಲೆ ಮತ್ತು ಸಾಹಿತ್ಯ, ಸಂಗೀತ ಪ್ರಿಯರು ಮತ್ತು ಪೋಷಕರು ಆಗಿದ್ದರು. ಸಾಂಸ್ಕೃತಿಕ ಚಟುವಟಿಕೆಗಳು ಇವರ ಕಾಲದಲ್ಲಿ ನಿರಂತರವಾಗಿ ನಡೆದವು. ವಾಸ್ತುಶಿಲ್ಪ ಕಲೆಗೆ ಇವರ ಕೊಡುಗೆಗಳು ಅಪಾರ ಹೊಯ್ಸಳರ ಕಾಲದಲ್ಲಿ ನೂರಾರು

---

[24] ಡಾ. ಸಿಂದಗಿ, ರಾಜಶೇಖರ, **ಕರ್ನಾಟಕದ ವಾಸ್ತುಶಿಲ್ಪ, ಚಿತ್ರಕಲೆ,** ಪುಟ–90. 1988.

[25] ಅದೇ,

[26] ಅದೇ,

[27] ಡಾ. ಚೆನ್ನಕ್ಕ ಪಾವಟಿ, **ಕರ್ನಾಟಕ ಶಾಸನೋಕ್ತ ಮಹಿಳೆ,** ಪು–73. ಕರ್ನಾಟಕ ಇತಿಹಾಸ ಸಂಶೋಧನ ಮಂಡಲ, ಧಾರವಾಡ. 2007–08.

ದೇವಾಲಯಗಳು, ಜೈನ ಬಸದಿಗಳು ನಿರ್ಮಾಣಗೊಂಡವು. ಇದಕ್ಕೆ ಅರಸ, ಅರಸಿಯರು, ದಂಡನಾಯಕರುಗಳು, ಮಂತ್ರಿಗಳು, ಅಧಿಕಾರಿಗಳು, ವ್ಯಾಪಾರಿಗಳು, ಮತ್ತು ಶ್ರೀಮಂತವರ್ಗದವರ ವಿಶಾಲ ಮನೋಭಾವನೆ ಮತ್ತು ಪೋಷಣೆಯೇ ಕಾರಣವಾಗಿತ್ತು. ಅರಸ ಮತ್ತು ಅರಸಿಯರು ಸ್ವತಃ ದೇವಾಲಯಗಳನ್ನು ಕಟ್ಟಿದ್ದರು.

ಹೊಯ್ಸಳರ ವಾಸ್ತುಶಿಲ್ಪಗಳು ಕರ್ನಾಟಕದ ಅನೇಕ ಭಾಗಗಳಲ್ಲಿ ಕಂಡುಬಂದರೂ ಅವು ಹೆಚ್ಚಾಗಿ ಹಾಸನ, ಚಿಕ್ಕಮಂಗಳೂರು, ತುಮಕೂರು, ಚಿತ್ರದುರ್ಗ, ಶಿವಮೊಗ್ಗ ಮತ್ತು ಬೆಂಗಳೂರು ಮತ್ತು ರಾಮನಗರ ಜಿಲ್ಲೆಗಳಲ್ಲಿ ಕೇಂದ್ರಿಕೃತವಾಗಿವೆ. ನೂರಾರು ಹಳ್ಳಿಗಳಲ್ಲಿ ಇವರ ಕಾಲದ ದೇವಾಲಯಗಳ ಕುರುಹುಗಳಿವೆ. ಅರಸೀಕೆರೆ, ಅಡಗೂರು, ಆನೆಕೆರೆ, ಅನೆಕನ್ನಂಬಾಡಿ, ಅನೆಕೊಂಡು, ಅರಳಗುಪ್ಪೆ, ಅಂಗಡಿ, ಅಗ್ರಹಾರ, ಬಾಳ್ಗುಳಿ, ಅಘಾಲಯ, ಅಮೃತಪುರ, ಚಿಕ್ಕ, ಭದ್ರಾವತಿ, ಬೇಲೂರು, ಬಿಂಡಗನವಲೆ, ಬೆಳ್ಳೂರು, ಬಸರಾಳು, ಬೆಳವಡಿ, ಬಂದಣಿಕೆ, ಬಸ್ತಿಹಳ್ಳಿ, ಚೆನ್ನರಾಯಪಟ್ಟಣ, ಚಿಕ್ಕಹನಸೊಗೆ, ಚಟ್ಟಟ್ಟಹಳ್ಳಿ, ದಿಂಡಗನೂರು, ದೊಡ್ಡಗದ್ದಹಳ್ಳಿ ದೇವನೂರು, ಗ್ರಾಮ, ಗೋವಿಂದನಹಳ್ಳಿ ಗೊರೂರು, ಹಳೇಬೀಡು, ಹುಲಿಕಲ್, ಹೊಸಹೊಳಲು, ಹರಿಹರಪುರ, ಹಾರ್ನಹಳ್ಳಿ, ಹುಲ್ಲೇಕೆರೆ, ಹಾಲುವಣ, ಹರಿಹರ, ಹಿರಿಸಾವೆ, ಹೊನ್ನಾಳಿ, ಹುಂಚ, ಜಾವಗಲ್, ಜಿನನಾಥಪುರ, ಕಂಬಂದಹಳ್ಳಿ, ಕೊಡಲೂರು, ಶಾಂತಿಗ್ರಾಮ, ಚಾಮರಾಜನಗರ, ಕೋಗಳಿ, ಶಿವಗಂಗೆ, ಶ್ರವಣಬೆಳಗೊಳ, ನಾಗಮಂಗಲ ಮತ್ತು ನಾಗಲಾಪುರ ಮುಂತಾದ ನೂರಾರು ಕಡೆಗಳಲ್ಲಿ ನಿದರ್ಶನಗಳಿವೆ.

ಹೊಯ್ಸಳರ ಕಾಲದಲ್ಲಿ ವಿಷ್ಣುವರ್ಧನ ಹಿರಿಯ ರಾಣಿ ಶಾಂತಲೆಯ ಜೊತೆಗೆ ಬೇಲೂರಿನಲ್ಲಿ ವಿಜಯನಾರಾಯಣ ದೇವಾಲಯವನ್ನು[28] ತಲಕಾಡಿನಲ್ಲಿ ಕೀರ್ತಿನಾರಾಯಣ ದೇವಾಲಯವನ್ನು ನಿರ್ಮಿಸಿದ್ದಾನೆ.[29] ಇನ್ನು ಶಾಂತಲೆಯ ತವರೂರಾದ ಶಾಂತಿ ಗ್ರಾಮದಲ್ಲಿ ಅವಳ ತಂದೆ ಮಾರಸಿಂಗಯ್ಯನು 'ಧರ್ಮೇಶ್ವರ' ದೇವಾಲಯವನ್ನು ನಿರ್ಮಿಸಿದ್ದಾರೆ. ಇದು ಶಾಂತಲೆಗೆಯೇ ಸಂದಂತಹ ದೇವಾಲಯವಾಗಿದೆ.[30] ಬೇಲೂರಿನ ಚೆನ್ನಕೇಶವ ದೇವಾಲಯದ ಸಂಕೀರ್ಣದಲ್ಲಿ

---

[28] ಎ.ಕ V ಬೇಲೂರು, ಶಾ.ಸಂ. 58, ಕ್ರಿ.ಶ–117.

[29] ಎಕ. V ಟಿ. ನರಸಿಪುರ, ಶಾ.ಸಂ. 151, ಕ್ರಿ.ಶ. 1117.

[30] ಎ.ಕ. V ಹೊಳೆನರಸಿಪುರ, ಶಾ.ಸಂ.116, ಕ್ರಿ.ಶ. 1123.

ವಿಷ್ಣುವರ್ಧನನ ರಾಣಿಯಾದ ಶಾಂತಲೆ 'ಕಪ್ಪೆ ಚೆನ್ನಿಗರಾಯನ' ದೇವಾಲಯವನ್ನು ಕಟ್ಟಿಸಿದ್ದಾಳೆ.[31] ಇವುಗಳು ಹಿರಿಯ ರಾಣಿ ಶಾಂತಲೆಯಿಂದ ನಿರ್ಮಾಣಗೊಂಡಂತಹ ದೇವಾಲಯಗಳಾಗಿವೆ.

**ಅ) ಬೇಲೂರಿನ ವಿಜಯನಾರಾಯಣ ದೇವಾಲಯ**

ಹಾಸನ ಜಿಲ್ಲೆಯ ಬೇಲೂರಿನಲ್ಲಿದೆ. ಕ್ರಿ.ಶ 1117ರಲ್ಲಿ ಹೊಯ್ಸಳ ಚಕ್ರವರ್ತಿ ವಿಷ್ಣುವರ್ಧನ ಮತ್ತು ರಾಣಿ ಶಾಂತಲೆಯ ಜೊತೆಯಲ್ಲಿ ನಿರ್ಮಾಣಗೊಂಡಿತೆಂದು ಶಾಸನಗಳು ತಿಳಿಸುತ್ತವೆ. ಈ ದೇವಾಲಯವು ಶಿಲ್ಪದ ವೈಭವಕ್ಕೆ ಬಹು ಪ್ರಖ್ಯಾತವಾಗಿದೆ. ಇದರ ಮೇಲಿನ ವಿಮಾನ ಹಾಳಾಗಿದ್ದರೂ, ಸೌಂದರ್ಯದಲ್ಲಿ ಅದ್ವಿತೀಯವಾಗಿದೆ. ಅಧಿಷ್ಠಾನದ ಅಲಂಕರಣದಲ್ಲಿ ದೇವಾಲಯದ ಹೊರಗೆ ಮೂರ್ತಿಶಿಲ್ಪಗಳಿಂದ ಅಲಂಕೃತವಾಗಿವೆ ಮೂರ್ತಿಶಿಲ್ಪಗಳಲ್ಲಿರುವ ಕಲಾ ನೈಪುಣ್ಯತೆಯು ಈ ದೇವಾಲಯದ ವೈಶಿಷ್ಟ್ಯವಾಗಿದೆ.

ಈ ದೇವಾಲಯವನ್ನು ವಿಷ್ಣುವರ್ಧನನು ಚೋಳರ ಮೇಲೆ ತಲಕಾಡಿನಲ್ಲಿ ಪಡೆದ ವಿಜಯದ ಸಂಕೇತವಾಗಿ ರಚನೆಗೊಂಡಿದ್ದು, ಇದು ನಕ್ಷತ್ರಾಕಾರದ ಸುಮಾರು ನಾಲ್ಕು ಅಡಿ ಎತ್ತರದ ಜಗುತಿಯ ಮೇಲೆ ಆಲಯ ನಿಂತಿದೆ. ಇದು 178x 156 ಅಡಿ ಉದ್ದಗಲದ ಆಯವಾಗಿದೆ. 443.5x396 ವಿಸ್ತೀರ್ಣದ ವಿಶಾಲ ಜಗತಿಯ ಮೇಲೆ ಇದ್ದು ದೇವಾಲಯಕ್ಕೆ ಪ್ರದಕ್ಷಿಣಾ ಪಥವಿಲ್ಲ. ಗರ್ಭಗೃಹ, ಸುಖನಾಸಿ, ನವರಂಗ ಮತ್ತು ಮುಖ ಮಂಟಪಗಳನ್ನೊಳಗೊಂಡಿದೆ. ದೇವಾಲಯದ ಗೋಡೆಗಳ ಮೇಲೆ ಸೂಕ್ಷ್ಮ ಕೆತ್ತನೆಗಳಿಂದ ಅಲಂಕರಿಸಿದ ವೈವಿಧ್ಯಮಯ ಚಿತ್ರಗಳಿವೆ.[32] ದ್ವಾರದ ಪಕ್ಕದ ಕಂಬಗಳ ಮೇಲೆ ರತಿ–ಮನ್ಮಥರ ಶಿಲ್ಪಗಳು, ತೋರಣದಲ್ಲಿ ಹಿರಣ್ಯಕಶ್ಯಪುವನ್ನು ಸಂಹರಿಸುತ್ತಿರುವ ನರಸಿಂಹನ ಮೂರ್ತಿ, ಈ ಪಟ್ಟಿಯ ಮೇಲೆ ಮಕರಗಳ ಮಧ್ಯೆ ಗರುಡನ ಶಿಲ್ಪ. ದ್ವಾರದ ಎರಡೂ ಕಡೆ ಗೋಡೆಯ ಮೇಲ್ಭಾಗದಲ್ಲಿ ಅರಸನ ಆಸ್ಥಾನದ ಚಿತ್ರಗಳನ್ನು ಕೆತ್ತಲಾಗಿದೆ. ವಿಷ್ಣುವರ್ಧನ ಹಾಗೂ ಆತನ ಮಗ ನರಸಿಂಹನನ್ನು ಇವುಗಳಲ್ಲಿ ಗುರುತಿಸಲಾಗಿದೆ. ದೇವಾಲಯದ ಮೇಲ್ಛಾವಣಿಯ ಸುತ್ತ ನಲವತ್ತೆರಡು ನೃತ್ಯಭಂಗಿಯ ಮದನಿಕಾ ವಿಗ್ರಹಗಳನ್ನು ಕೆತ್ತಲಾಗಿದೆ. ಇವು ಕಾಮಸುರಸುಂದರತೆಯಿಂದ ಪ್ರವಾಸಿಗರನ್ನು ಆಕರ್ಷಿಸುತ್ತವೆ. ವಿಷ್ಣುವರ್ಧನ ಕಟ್ಟಿಸಿದಾಗ ಅಡ್ಡಪಟ್ಟಿಕೆಗಳ ಮೇಲೆ ಗೋಡೆಗಳಲ್ಲಿರಲಿಲ್ಲ. ಕಂಬಗಳನ್ನು ಛಾವಣಿಯ ಸೂರು ಆಧರಿಸಿತ್ತು. ಆದರೆ

---

[31] ಡಾ.ಬಾ.ರಾ. ಗೋಪಾಲ್, ಕರ್ನಾಟಕದ ಕಲೆಗಳು ಸಂ–4, ಪು.86, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು. 1993.

[32] ಕ್ಷೇತ್ರಕಾರ್ಯ, ದಿನಾಂಕ 27–11–2010, ಬೇಲೂರು.

ಸುಮಾರು 70 ವರ್ಷಗಳ ಬಳಿಕ ಇಮ್ಮಡಿ ಬಲ್ಲಾಳನ ಕಾಲದಲ್ಲಿ ಕಂಬಗಳ ನಡುವೆ ಅಲಂಕೃತ ಜಾಲಂಧರಗಳನ್ನು, ಚಿತ್ರ ಫಲಕಗಳನ್ನು ಅಳವಡಿಸಲಾಯಿತು. ಇವು ದಕ್ಷಿಣ ಮತ್ತು ಉತ್ತರಗಳಲ್ಲಿ ಹತ್ತು–ಹತ್ತು ಇವೆ.

ನವರಂಗದ ದಕ್ಷಿಣದಲ್ಲಿರುವ ನರಸಿಂಹ ಮತ್ತು ಮೋಹಿನಿ ಸ್ತಂಭಗಳು ಶಿಲ್ಪಕಲೆಯ ಔನ್ನತ್ಯದ ಉತ್ತಮ ನಿದರ್ಶನಗಳು, ಭುವನೇಶ್ವರಿಯಲ್ಲಿ ಲತೆಗಳ, ಬಳ್ಳಿಗಳ, ಉತ್ತಮ ಕೆತ್ತನೆ ಇದೆ. ಭುವನೇಶ್ವರಿಯ ಮಧ್ಯದಲ್ಲಿ ಮಗುಚಿದ ಕಮಲ ಮೇಲಿನಿಂದ ಜೋತಾಡುವ 3 ಅಡಿಗಳ ಉದ್ದ ಕಂಬದಂತಿದೆ. ಭುವನೇಶ್ವರಿಯ ಸುತ್ತಳತೆ 10 ಅಡಿ ಆಳ, 6 ಅಡಿ ಒಳಗಿನ 17 ಪಟ್ಟಿಕೆಗಳಲ್ಲಿ ಹಲವಾರು ದೃಶ್ಯಾವಳಿಗಳು–ಸಂಗೀತಗಾರರ, ಮದ್ದಳೆಗಾರರ ನರ್ತಕರ, ಮಲ್ಲಯುದ್ಧ–ಕೋಲಾಟಗಳ, ರಾಮಾಯಣ ಮಹಾಭಾರತಗಳ ಆಯ್ದ ದೃಶ್ಯಗಳು ಕೆತ್ತಲ್ಪಟ್ಟಿವೆ, ವಿಷ್ಣುವಿನ ದಶಾವತಾರ ಚಿತ್ರೀಕರಣವನ್ನು ಕಾಣಬಹುದು. ಮಂಟಪದಲ್ಲಿ ಶಾಂತಲೆಯ ದರ್ಬಾರು ಚಿತ್ರವಿದೆ.[33] ಆ ದೇವಾಲಯವನ್ನು ದಾಸೋಜಾ, ನಾಗೋಜರು ಈ ಬೇಲೂರು ಚನ್ನಕೇಶವ ದೇವಾಲಯದ ನಿರ್ಮಾಣದ ಶಿಲ್ಪಿ ದಾಸೋಜನ ಕಲಾ ನೈಪುಣ್ಯತೆಗೆ ದೇವಾಲಯದಲ್ಲಿನ ಶಿಲ್ಪಗಳು ಸಾಕ್ಷಿಯಾಗಿವೆ. ವಿದ್ವಾಂಸರುಗಳು ಈ ದೇವಾಲಯವನ್ನು ಲಲಿತ ಕಲೆಗಳ ವಸ್ತು ಸಂಗ್ರಹಾಲಯ 'ಶಿಲೆಯಲ್ಲಿನ ಭಾವಗೀತೆ' ಎಂದು ಹೊಗಳಿದ್ದಾರೆ.

**ಆ) ತಲಕಾಡಿನ ಕೀರ್ತಿನಾರಾಯಣ ದೇವಾಲಯ**

ತಲಕಾಡಿನಲ್ಲಿ ಒಮ್ಮೆ ಮೂವತ್ತಕ್ಕೂ ಹೆಚ್ಚಿನ ಸಂಖ್ಯೆಯ ದೇವಾಲಯಗಳೂ, ಬಸದಿಗಳೂ ಇದ್ದವು. ಬಹುಮಟ್ಟಿಗೆ, ಎಲ್ಲವೂ ಚೋಳರ, ಗಂಗರ ಕಾಲದ ಕಟ್ಟಡಗಳು ಕೀರ್ತಿನಾರಾಯಣ ದೇವಾಲಯ ಮಾತ್ರ ವಿಷ್ಣುವರ್ಧನ ಮತ್ತು ಶಾಂತಲೆಯವರು ಕಟ್ಟಿಸಿದರು. ಚೋಳರನ್ನು ಹೊರಹಾಕಿದ ಕೀರ್ತಿಯ ಕುರುಹಾಗಿ ಈ ದೇವಾಲಯ. ಇದಕ್ಕೆ ಬಳಸಿರುವುದು ಕಗ್ಗಲ್ಲು ಮತ್ತು ಇಟ್ಟಿಗೆ ಎತ್ತರದ ಜಗುತಿ ಮೇಲೆ ಗರ್ಭಗೃಹ, ಸುಕನಾಸಿ ಮತ್ತು ಮೂರು ದ್ವಾರಗಳ ನವರಂಗ, ಹೊರಭಿತ್ತಿಯಲ್ಲಿ ಅರೆಗಂಬಗಳು, ಅರೆಗೋಪುರಗಳು, ಮತ್ತು ಅರೆಮಂಟಪಗಳು, ನವರಂಗದ ನಡುವೆ ನಾಲ್ಕು ದಪ್ಪವಾದ ತಿರುಗಣಿಯಲ್ಲಿ ಹೊಳಪನ್ನಿತ್ತ ಬಳಪದ ಕಲ್ಲಿನಕಂಬಗಳು, ಉಳಿದ ಕಂಬಗಳು ಅಷ್ಟ ಅಥವಾ ಷೋಡಶ ಕೋನಗಳದ್ದು ಚಪ್ಪಟ್ಟಿಯ ಛಾವಣಿ ಒಂದೆರಡು ಅಂಕಣಗಳಲ್ಲಿನ

[33] ಕ್ಷೇತ್ರಕಾರ್ಯ, ದಿನಾಂಕ 26–11–2010, ತಲಕಾಡು.

ಭುವನೇಶ್ವರಿಯ ಆಕಾರಗಳಲ್ಲಿ ಬಳ್ಳಿಗಳ ಪ್ರಾಣಿಗಳ, ನರ್ತಕಿಯರ ಶಿಲ್ಪಗಳಿವೆ. ಹತ್ತು ಅಡಿಗಳ ಎತ್ತರದ ಕೀರ್ತಿನಾರಾಯಣ ವಿಗ್ರಹದ ಹಿಂದಿನ ಪ್ರಭಾವಳಿಯಲ್ಲಿ ದಶಾವತಾರಗಳನ್ನು ಕೆತ್ತಲಾಗಿದೆ. ಈ ದೇವಾಲಯವು ನೋಡಲು ಸುಂದರವಾಗಿದೆ.

**ಇ) ಧರ್ಮೇಶ್ವರ ದೇವಾಲಯ**

ಹಾಸನ ತಾಲ್ಲೂಕಿನ ಶಾಂತಿ ಗ್ರಾಮವೆಂಬ ಹಳ್ಳಿಯು ವಿಷ್ಣುವರ್ಧನನ ಮಹಾರಾಣಿ ಶಾಂತಲೆಗೆ ಸಂಬಂಧಿಸಿದ್ದುದಾಗಿದೆ. ಶಾಂತಿಗ್ರಾಮ ಎನ್ನಿಸಿರುವುದಾದರೂ ಇಲ್ಲಿ ಶಾಂತಲೆ ನಿರ್ಮಿಸಿದ ದೇವಾಲಯಗಳ ಕುರುಹಿಲ್ಲ. ಆದರೆ ಶಾಂತಲೆಯ ತಂದೆ ಹೆಗ್ಗಡೆ ಮಾರಸಿಂಹಯ್ಯನು ಧರ್ಮೇಶ್ವರ ದೇವಾಲಯವನ್ನು ಕಟ್ಟಿಸಿದ್ದಾನೆ. ಈ ಗ್ರಾಮದಲ್ಲಿರುವ ಬಸದಿಯ ಅವಶೇಷದಿಂದ ಸುಮಾರು ಹನ್ನೊಂದನೇಯ ಶತಮಾನದಲ್ಲಿಯೇ ಇಲ್ಲಿ ಬಸದಿಯಿತ್ತೆಂದು ತಿಳಿಯುತ್ತದೆ. ಈ ಬಸದಿಯ ಶಾಸನವು ಮೂಲಸಂಘ ಪುಸ್ತಕಗಚ್ಚದ ಇಂಗಳೇಶ್ವರ ಬಳಿಯ ಹೊನ್ನಿಸೆಟ್ಟಿಯನ್ನು ಉಲ್ಲೇಖಿಸಿದೆ. ಈ ಬಸದಿಯು ಸುಪಾರ್ಶ್ವನಾಥ ಭಟಾರಕರದಾಗಿತ್ತೆಂದು ತಿಳಿಯುತ್ತದೆ.[34] ಬಸದಿಯ ಆವರಣದಲ್ಲಿ ರಾಶಿಯಾಗಿ ಬಿದ್ದಿರುವ ಅವಶೇಷಗಳನ್ನು ಕಂಡಾಗ ಬಸದಿಯು ವಿಜಯನಗರ ಅರಸರ ಕಾಲದಲ್ಲಿಯೂ ಮತ್ತೊಮ್ಮೆ ಜೀರ್ಣೋದ್ಧಾರವಾಗಿತ್ತೆಂದು ತೋರುತ್ತದೆ. ಆದರೆ ಈಗ ಬಸದಿಯ ದೇವಾಲಯ ಅವಶೇಷವಾಗಿ ಉಳಿದಿದೆ.

**ಈ) ಕಪ್ಪೆಚೆನ್ನಿಗರಾಯನ ದೇವಾಲಯ**

ಬೇಲೂರಿನ ಚನ್ನಕೇಶವ ದೇವಾಲಯದ ಬಲಕ್ಕೆ ಸ್ವಲ್ಪಹಿಂದೆ ಶಾಂತಲೆ, ಅದೇ ವರ್ಷ ಕಟ್ಟಿಸಿದ ದೇವಾಲಯವಾಗಿವೆ.[35] ಕೇಶವಾಲಯದ ಹಿಂದಿರುವ ವೀರನಾರಾಯಣ ದೇವಾಲಯ 'ವಿಷ್ಣುವರ್ಧನನ ಕಾಲದ್ದೇ ಆಗಿದೆ. ಚನ್ನಕೇಶವ ದೇವಾಲಯದಲ್ಲಿ ಕಾಣಬರುವ ಅಲಂಕರಣ ಇವುಗಳಲ್ಲದಿದ್ದರೂ ಇವು ಹೊಯ್ಸಳ ಶೈಲಿಯ ಅತ್ಯುತ್ತಮ ಪ್ರತಿನಿಧಿಗಳಂತೆ ಇವೆ. ಈ ಕಪ್ಪೆಚೆನ್ನಿಗರಾಯನ ಮಂದಿರ ಹೆಚ್ಚು ವಿಸ್ತೀರ್ಣವುಳ್ಳದ್ದು – 124x105 ವಿಸ್ತೀರ್ಣವುಳ್ಳ ದ್ವಿಕೂಟಾಚಲ* ದೇವಾಲಯವಾಗಿದೆ. ನಾಲ್ಕಡಿಗಳ ಎತ್ತರದ ಜಗುತಿ ಚತುರಸ್ರಾಕಾರದ ನವರಂಗ, ನಕ್ಷತ್ರಾಕಾರದ

---

[34] ಎ.ಕ VIII, ಹಾಸನ, ಶಾ.ಸಂ. 169, ಕ್ರಿ.ಶ. 11ನೇ ಶತಮಾನ.

[35] ಡಾ.ಬಾ.ರಾ. ಗೋಪಾಲ್, **ಕರ್ನಾಟಕದ ಕಲೆಗಳು,** (ಸಂ–4) ಪು.–86 ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು. 1993.

* ಎರಡು ಗರ್ಭಗುಡಿಗಳನ್ನು ಹೊಂದಿರುವ ಒಂದೇ ತಳಹದಿಯ ದೇವಾಲಯ ಪಂಚಕೂಟ ದೇವಾಲಯಗಳು ಸಹ ಹೊಯ್ಸಳ ಕಾಲದಲ್ಲಿ ನಿರ್ಮಿತಗೊಂಡವು.

ವಿಮಾನ, ನವರಂಗದ ದಕ್ಷಿಣದಲ್ಲಿ ಚತುರಸ್ರಾಕಾರದ ಗುಡಿ, ಎತ್ತರದಲ್ಲಿ ಬಾಗಿಲು, ತೆರೆದ ನವರಂಗಗಳನ್ನು ಇಮ್ಮಡಿ ಬಲ್ಲಾಳ 1206ರಲ್ಲಿ ಮುಚ್ಚಿಸಿದ. ಹೊರಗೋಡೆಗಳು ಅಲಂಕಾರ ರಹಿತ. ಗರ್ಭಗುಡಿಯೊಳಗೆ ಆರೂವರೆ (6 ½ ) ಅಡಿಗಳ ಎತ್ತರದ ಚನ್ನಿಗರಾಯನ ವಿಗ್ರಹ. ದಶಾವತಾರ, ಅಷ್ಟದಿಕ್ಪಾಲಕರ ಮೂರ್ತಿಗಳಿಂದ ಅಲಂಕೃತವಾದ ಪ್ರಭಾವಳಿ ಪೀಠದ ಮೇಲೆ ಗರುಡ ಶಾಂತಲೆಯ ಶಾಸನವು ಸಹ ಇದೆ.

ದೇವಾಲಯದ ಮೂಲೆಯಲ್ಲಿನ ಅಂಡಾಳ್ ಗುಡಿಯನ್ನು ತದನಂತರದ ಕಾಲದಲ್ಲಿ ಇನ್ನಾವುದೋ ಜೀರ್ಣವಾದ ಕಲ್ಲುಗಳನ್ನು ಉಪಯೋಗಿಸಿ ಕಟ್ಟಲಾಗಿದೆ. ಬೇಚಮ, ಮಧುವಣ ಮುಂತಾದ ಶಿಲ್ಪಿಗಳು ಕೊರೆದ ವಿಗ್ರಹಗಳನ್ನು ಹೊರಗೋಡೆಗಳ ಮೇಲೆ ಬಳಸಲಾಗಿದೆ. ಪ್ರಾಕಾರದೊಳಗಣ ಇತರ ಗುಡಿಗಳು–ನರಸಿಂಹ, ರಾಮ, ಕೃಷ್ಣ, ರಾಮಾನುಜಾಚಾರ್ಯ, ವೇದಾಂತ ದೇಶಿಕ ಇತ್ಯಾದಿ ಸಹ ನಂತರದ ಕಟ್ಟಡಗಳೇ.

ಒಟ್ಟಾರೆಯಾಗಿ ಹೊಯ್ಸಳರ ಕಾಲದ ದೇವಾಲಯಗಳನ್ನು ಸೌಂದರ್ಯದ ಸ್ವರ್ಗ ಸೀಮೆಗಳೆಂದು ವರ್ಣಿಸಲಾಗಿದೆ. ಇದನ್ನು ಕೆತ್ತಿದ ಶಿಲ್ಪಗಳು ಸರಸ್ವತೀ ಗಣದಾಸಿಯರೆಂದು ಬಿರುದಾಂಕಿತರಾದವರು, ಸರಸ್ವತಿಯ ಮಾನಸ ಪುತ್ರರು ಹೊಯ್ಸಳರ ಇಮ್ಮಡಿ ಬಲ್ಲಾಳನು ತನ್ನ ರಾಣಿ ಹಿರಿಯ ಕೇತಲದೇವಿಯ ಬಿನ್ನಹದ ಮೇರೆಗೆ ದ್ವಾರಸಮುದ್ರದಲ್ಲಿ ಕೇದಾರೇಶ್ವರ ದೇವಾಲಯವನ್ನು ಕ್ರಿ.ಶ. 1219ರಲ್ಲಿ ಕಟ್ಟಿಸಿದನು.[36] ಕ್ರಿ.ಶ. 1235ರಲ್ಲಿ ವೀರ ಸೋಮೇಶ್ವರನು ತನ್ನ ತಾಯಿ ಕಾಳಲಾದೇವಿಗೆ ಪುಣ್ಯವಾಗಲೆಂದು ಕಣ್ಣೂರಿನಲ್ಲಿ ಹೊಯ್ಸಳೇಶ್ವರ ದೇವಾಲಯವನ್ನು ನಿರ್ಮಿಸಿದನು.[37] ಕ್ರಿ.ಶ. 1233ರಲ್ಲಿ ಇವನು ಕಣ್ಣೂರಿನ ಜಂಬುಕೇಶ್ವರ ದೇವಾಲಯದ ಸಂಕೀರ್ಣದಲ್ಲಿ ತನ್ನ, ತಾತ, ಅಜ್ಜಿ, ತಂದೆ, ತಾಯಿಯರ ಕ್ರಮವಾಗಿ ಎರಡನೇ ಬಲ್ಲಾಳ, ಪದ್ಮಲಾದೇವಿ, 2ನೇ ನರಸಿಂಹ ಸೋಮಲಾದೇವಿಯರ ನೆನಪಿಗೆ ವಲ್ಲಾಳೇಶ್ವರ, ಪದಮಲೇಶ್ವರ, ವೀರನರಸಿಂಗೇಶ್ವರ, ಸೋಮಲಿಂಗೇಶ್ವರ ಲಿಂಗಗಳನ್ನು ಸ್ಥಾಪಿಸಿದನು.[38] ಇನ್ನು ಚಿಕ್ಕಶಾಂತಲೆ ಮತ್ತು ಮಗಳು ಬೊಪ್ಪುಲೆಯರು ಸಾವನ್ನಪ್ಪಿದಾಗ ಇವರ ತಾಯಿ, ಜಕ್ಕಿಯಬ್ಬೆಮಗಳು ಮತ್ತು ಮೊಮ್ಮಗಳ ಹೆಸರಿನಲ್ಲಿ

---

[36] ಡಾ. ಸಿಂದಗಿ ರಾಜಶೇಖರ, **ಕರ್ನಾಟಕದ ವಾಸ್ತುಶಿಲ್ಪ, ಚಿತ್ರಕಲೆ, ಪುಟ–127**. 1988.

[37] ಎ.ಕ V, ಬೇಲೂರು ಶಾ.ಸಂ. 115, ಕ್ರಿ.ಶ. 1235.

[38] ಎ.ಕ iii. ಪು–8.

ಶಾಂತಳೇಶ್ವರ ದೇವಾಲಯವನ್ನು ಮತ್ತು ಬೊಪ್ಪುಲೇಶ್ವರ ದೇವಾಲಯಗಳನ್ನು ನಿರ್ಮಿಸಿದ್ದಾಳೆ.[39] ವಿಷ್ಣುವರ್ಧನನ ರಾಣಿ ಬಮ್ಮಲಾದೇವಿ ನಾಗಮಂಗಲದಲ್ಲಿ 'ಶಂಕರನಾರಾಯಣ' ದೇವಾಲಯವನ್ನು ನಿರ್ಮಿಸಿದ್ದಾಳೆ.[40]

ರಾಣಿಯರ ಸಾಲಿಗೆ ಸೇರದ, ಆದರೂ ಪ್ರಮುಖಳೆಂದರೆ, 'ಮಹಾದೇವಿ', ಇವಳು ಹೊಯ್ಸಳ ನಾರಸಿಂಹನ ಪಾದಜೀವಿ ಚಟ್ಟಯ್ಯನ ಮಡದಿ, ಸಾಮಾನ್ಯವರ್ಗದ ಮಹಿಳೆಯಾದರೂ ಚಟ್ಟೇಶ್ವರ ದೇಗುಲವನ್ನು ನಿರ್ಮಿಸಿದ್ದಾಳೆ. ಇದು ಶಾಸನೋಕ್ತವಾಗಿದೆ.[41] ಅಂತೆಯೇ ಬಾಗಿಯಬ್ಬರಸಿಯರು ಧರ್ಮದಿಂದ ತ್ರಕೂಟ ದೇವಾಲಯವನ್ನು ನಿರ್ಮಿಸಿದ್ದಾರೆ. ಪರ್ಶಿಭ್ರೌನ್ ಹೇಳುವಂತೆ : The temple builder became a story teller in stone so that his productions appertatin more to illuminated missal transmuted into sculpture than to full architectural composition what they productive was in relatity notarchitecture bt applied art. ಇದನ್ನು ಗಮನಿಸಿದರೆ ಇದಕ್ಕಿಂತಲೂ ಹೆಚ್ಚಿನ ವಿವರಣಾತ್ಮಕ ಟೀಕೆ ಅಸಾಧ್ಯ.[42]

**7) ವಿಜಯನಗರದ ಕಾಲ**

ಕರ್ನಾಟಕದ ವಾಸ್ತುಶಿಲ್ಪದ ಬೆಳವಣಿಗೆಯ ಮೇಲೆ ಪ್ರಬಲ ವರ್ಚಸ್ಸನ್ನು ಬೀರಿದ ಮತ್ತೊಂದು ಮನೆತನ. ಕ್ರಿ.ಶ 1336ರಲ್ಲಿ ಹಿಂದೂಧರ್ಮದ ಪುನರುತ್ಥಾನಕ್ಕೋಸ್ಕರ ಉದಯಿಸಿದ ರಾಜ್ಯ ವಿಜಯನಗರ ಸಾಮ್ರಾಜ್ಯ.

ಯಾವುದೇ ರಾಜವಂಶ ಹೊಸದಾಗಿ ರಾಜ್ಯಸ್ಥಾಪನೆ ಮಾಡಿದಾಗ ಮೊಟ್ಟ ಮೊದಲು ಕೈಗೊಂಡ ಕಾರ್ಯವೆಂದರೆ, ದೇವಾಲಯಗಳ ನಿರ್ಮಾಣ/ ದಾನ, ದತ್ತಿ ಕೊಡುಗೆಗಳನ್ನು ನೀಡುವುದು. ವಿಜಯನಗರ ಸಾಮ್ರಾಜ್ಯವನ್ನು ಸಂಗಮವಂಶ, ಸಾಳ್ವವಂಶ, ತುಳುವ ವಂಶ, ಅರವೀಡು ವಂಶಗಳೆಂಬ ಮನೆತನಳು ಕ್ರಮವಾಗಿ ಆಡಳಿತ ನಡೆಸಿವೆ. ಇವರು ಹೊಯ್ಸಳ ಶೈಲಿಗಿಂತ ಸ್ವಲ್ಪ ಭಿನ್ನವಾದ ಶೈಲಿಯಲ್ಲಿ ದೇವಾಲಯಗಳನ್ನು ನಿರ್ಮಿಸಿದ್ದಾರೆ. ಹಂಪಿಯು ವಿಜಯನಗರದ ರಾಜಧಾನಿಯಾಗಿತ್ತು. ಇಲ್ಲಿ ಅನೇಕ ದೇವಾಲಯಗಳನ್ನು ನಿರ್ಮಿಸಿದ್ದರು. ಈಗ ಇವೆಲ್ಲವೂ

[39] ಎ.ಕ V. ಹಾಸನ, 89, ಯಲಗುಂದ, ಕ್ರಿ.ಶ. 1136.

[40] ಐ.ಎ XVII, ಪು.273, ಕ್ರಿ.ಶ. 1022.

[41] ಎ.ಕ V ಬೇಲೂರು, ಶಾ.ಸಂ. 193, ಹುಲಿಕೆರೆ, ಕ್ರಿ.ಶ. 1160.

[42] ಡಾ.ಬಾ.ರಾ.ಗೋಪಾಲ್, **ಕರ್ನಾಟಕದ ಕಲೆಗಳು (ಸಂ–4), ಪು–93**. ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು. 1993.

ಹಾಳಾಗಿವೆ. ಅವರ ಕಾಲದ ಪ್ರಮುಖ ವಾಸ್ತುಶಿಲ್ಪ ಕೇಂದ್ರಗಳೆಂದರೆ, ಹಂಪಿ, ನಾಗೇಹಳ್ಳಿ ಮಂಪನಗುಡಿ, ಕಡ್ಡಿರಾಮಪುರ, ಶ್ರೀರಂಗಪಟ್ಟಣ, ಬೇಲೂರು, ಗದಗ, ಆನೆಗೊಂದಿ, ಶ್ರವಣಬೆಳಗೊಳ ನಂಜನಗೂಡು ಕಪ್ಪುಗಲ್ಲು ಕುರುಗೋಡು ಮತ್ತು ಕಮಲಾಪುರಗಳಲ್ಲಿ ಕಾಣಬಹುದು. ಇಷ್ಟೇ ಅಲ್ಲದೆ ಆಂಧ್ರಪ್ರದೇಶ ಮತ್ತು ತಮಿಳುನಾಡುಗಳಲ್ಲಿ ಕಾಣಬಹುದು.

ವಿಜಯನಗರದ ಅರಸರು ಮುಖ್ಯವಾಗಿ ದ್ರಾವಿಡಶೈಲಿಯಲ್ಲಿಯೇ ದೇವಾಲಯಗಳ ರಚನೆಯನ್ನು ಕೈಗೊಂಡರು. ಆರಂಭದ ಕೆಲವು ದೇವಾಲಯಗಳು ಕದಂಬನಾಗರ ಶೈಲಿಯಲ್ಲಿ ರಚನೆಗೊಂಡುದನ್ನು ಬಿಟ್ಟರೆ ಅನಂತರದ ಬಹುತೇಕ ದೇವಾಲಯಗಳು ದ್ರಾವಿಡ ಶೈಲಿಯಲ್ಲಿಯೇ ರಚನೆಗೊಂಡಿವೆ.

ಸಂಗಮ ಮನೆತನದ ತರುವಾಯ ಅಧಿಕಾರಕ್ಕೆ ಬಂದ ಸಾಳುವ ಮನೆತನದ ಪ್ರಮುಖ ರಾಣಿಯರಲ್ಲಿ ಒಬ್ಬಳಾದ ನರಸಿಂಹನ ರಾಣಿ ಶ್ರೀರಂಗಾಂಬಾದೇವಿ ಕ್ರಿ.ಶ.1467ರಲ್ಲಿ ಶ್ರೀರಂಗಾಂಭಾದೇವಿ ದೇವಾಲಯವನ್ನು ನಿರ್ಮಿಸಿ ಕೆರೆ, ಕಾಲುವೆಗಳನ್ನು ಅಗೆಯಲು ಸಹಕರಿಸಿದ್ದಾಳೆ.[43]

ನಂತರ ಅಧಿಕಾರಕ್ಕೆ ಬಂದ ಪ್ರಮುಖ ಮನೆತನವಾದ ತುಳುವ ಮನೆತನದಲ್ಲಿ ಶ್ರೀಕೃಷ್ಣದೇವರಾಯನ **'ರಾಣಿಯರಾದ'** ಚಿನ್ನಾದೇವಿ, ಹಾಗೂ ತಿರುಮಲ ದೇವಿಯರನ್ನು ಮಾತ್ರ ಬಿಟ್ಟರೆ ಉಳಿದ ಯಾವ ರಾಣಿಯರು ದೇವಾಲಯಗಳಂತಹ ವಾಸ್ತುಶಿಲ್ಪವನ್ನು ನಿರ್ಮಿಸಿದಂತೆ ಇಲ್ಲ. ಈ ರಾಣಿಯರು ನಿರ್ಮಿಸಿದ್ದು ಗೋಪುರವಾಗಿವೆ ಅಷ್ಟೇ.

ತಿರುಮಲದೇವಿ ಮತ್ತು ಚಿನ್ನಾದೇವಿಯರು ಕ್ರಿ.ಶ. 1513ರಲ್ಲಿ ವಿಠ್ಠಲ ದೇವಾಲಯಕ್ಕೆ ಪ್ರಕಾರ ಗೋಪುರವನ್ನು ನಿರ್ಮಿಸಿದರು. ಗೋಪುರಕ್ಕೆ ಹೊಂದಿಕೊಂಡಂತೆ ಪೂರ್ವ, ದಕ್ಷಿಣ, ಉತ್ತರಕ್ಕೆ ಮೂರು ದ್ವಾರಗೋಪುರಗಳಿವೆ ಇದರಲ್ಲಿ ಪೂರ್ವದ ಗೋಪುರವು ಮುಖ್ಯ ದ್ವಾರಗೋಪುರವಾಗಿದ್ದು, ಇದು ತೇರುಬೀದಿಗೆ ಮುಖಮೂಡಿದೆ. ಈ ಗೋಪುರವು ಉತ್ತರ ದಿಕ್ಕಿನ ದ್ವಾರಗೋಪುರದ ನದಿ ತೀರಕ್ಕೆ ಹೋಗುವ ಮಾರ್ಗದಲ್ಲಿದೆ. ದಕ್ಷಿಣ ದ್ವಾರಗೋಪುರವು ವಿರುಪಾಕ್ಷಪುರಕ್ಕೆ ಹೋಗುವ ದ್ವಾರಬಾಗಿಲಿನಲ್ಲಿದೆ. ಈ ಗೋಪುರದ ಗೋಡೆಯು ಕೆಳಭಾಗವನ್ನು ಕಲ್ಲಿನ ಬಂಡೆಗಳಿಂದ ನಿರ್ಮಿಸಿ,

---

[43] ಸಿ.ಟಿ.ಎಂ. ಕೊಟ್ರಯ್ಯ, **ವಿಜಯನಗರ ಸಾಮ್ರಾಜ್ಯದ ನೀರಾವರಿ ವ್ಯವಸ್ಥೆ,** ಪು–86–104, ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ.2001.

ಆ ಮೇಲೆ ಇಟ್ಟಿಗೆ ಗಾರೆಯಿಂದ ಕಟ್ಟಲಾಗಿದೆ. ಇದು ಹದಿನೈದು ಅಡಿಗಳಷ್ಟು ಎತ್ತರದ ಗೋಡೆಯಾಗಿದೆ.[44]

ರಾಜಧಾನಿ ಹಂಪಿಯಲ್ಲಿ ಪ್ರಮುಖವಾಗಿ ಇರುವ ಮೂರು ಮುಖ್ಯ ದೇವಾಲಯಗಳ ಪೈಕಿ ಈ ವಿಜಯವಿಠ್ಠಲಸ್ವಾಮಿ ದೇವಾಲಯ ಸಂಗಮರ ಕಾಲದಲ್ಲಿ ಒಂದು ಸಣ್ಣ ದೇವಾಲಯವಾಗಿ ಅಸ್ತಿತ್ವಕ್ಕೆ ಬಂದು ನಂತರ ವಿಸ್ತೀರ್ಣಗೊಳ್ಳುತ್ತಾ ವಿಶಾಲವಾಗಿ ಮಾರ್ಪಾಡಾಗುತ್ತಾ ಕಾಲಾನುಕ್ರಮಣಿಕೆಯಲ್ಲಿ ವಿಶಾಲವಾಗಿ ಬೆಳೆಯಿತು.

**ಅ) ವಿಜಯ ವಿಠ್ಠಲದೇವಾಲಯ**

ವಿಜಯ ವಿಠ್ಠಲದೇವಾಲಯವು ಐದುನೂರು ಅಡಿ ಉದ್ದ, ಮುನ್ನೂರ ಹತ್ತು ಅಡಿ ಅಗಲವಾಗಿದೆ. ಅಂಗಳದ ಮಧ್ಯದಲ್ಲಿನ ಈ ಅಂಗಳದ ಸುತ್ತಲೂ ಮೂರು ಕಂಬಗಳಿಂದ ಕೂಡಿದ ಮಂಟಪದ ಸಾಲುಗಳಿವೆ. ಮತ್ತು ಇದನ್ನು ಪ್ರವೇಶಿಸಲು ಮೂರು ದಿಕ್ಕಿಗೂ ಮೂರು ಗೋಪುರಗಳಿವೆ. ಈ ಗೋಪುರಗಳನ್ನು ನಿರ್ಮಿಸಿದವರು ರಾಣಿ ತಿರುಮಲಾದೇವಿ ಮತ್ತು ಚಿನ್ನಾದೇವಿಯರು ಮುಖ್ಯ ದೇವಾಲಯದ ಮುಂಭಾಗದಲ್ಲಿ ಮತ್ತು ಪಕ್ಕದಲ್ಲಿ ಅನೇಕ ಮಂಟಪಗಳಿವೆ. ಮುಂಭಾಗದ ಮಂಟಪದ ಪಕ್ಕದಲ್ಲಿ ಸುಂದರವಾದ ಕಲ್ಲಿನ ರಥವಿದೆ. ಸಂಪೂರ್ಣವಾಗಿ ಬೆಣಚು ಕಲ್ಲಿನಿಂದ ನಿರ್ಮಿತವಾಗಿರುವ ಈ ದೇವಾಲಯ ಸಂಪೂರ್ಣ ದ್ರಾವಿಡ ಶೈಲಿಯಲ್ಲಿದೆ. ಸುಮಾರು 230 ಅಡಿಗಳಷ್ಟು ಉದ್ದವಾದ ಈ ಕಟ್ಟಡವನ್ನು ಮೂರು ಭಾಗಗಳನ್ನಾಗಿ ಮಾಡಬಹುದು ಮೊದಲನೆಯದು ದೇವಾಲಯದ ಹೊರಗಿನಮುಖಮಂಟಪ, ಅನಂತರ ದೇವಾಲಯದ ಮಧ್ಯಭಾಗದ ರಂಗಮಂಟಪ ಮತ್ತು ಸುಖನಾಸಿ ಗರ್ಭಗೃಹಗಳಿಂದ ಕೂಡಿದ ಹಿಂಭಾಗ.

ಮುಖಮಂಟಪ ಐದು ಅಡಿಗಳಷ್ಟು ಎತ್ತರವಾದ ವೇದಿಕೆಯ ಮೇಲಿರುವ ಈ ಮಂಟಪವನ್ನು ಪ್ರವೇಶಿಸಲು ಮೂರು ದಿಕ್ಕುಗಳಿಗೂ ಬಾಗಿಲುಗಳಿವೆ ಇವುಗಳ ಎರಡು ಕಡೆಗಳಲ್ಲಿ ಕಲ್ಲಿನ ಆನೆಗಳು ನಿಂತಿವೆ. ಮಧ್ಯದಲ್ಲಿ ಚತುಷ್ಪಾಕಾರವನ್ನು ಒಳಗೊಂಡು ಸುತ್ತಲೂ ಹಜಾರವನ್ನು ನಿರ್ಮಿಸುವಂತೆ ಮಂಟಪದ ಹೊರ ಅಂಚಿನ ಸುತ್ತ ಐವತ್ತಾರು ಸಮಾನಾಂತರ ಕಂಬಗಳಿವೆ.

[44] ಚನ್ನಬಸಪ್ಪ, ಎಸ್.ಪಾಟೀಲ, **ಕರ್ನಾಟಕ ಚರಿತ್ರೆ, ಸಂ–4, ಪು–367,** 1996.

ಅದಿನಾರು ಕಂಬಗಳು ಮಧ್ಯದಲ್ಲಿ ದೀರ್ಘ ಚತುಷ್ಪಾಕಾರವನ್ನು ನಿರ್ಮಿಸಿವೆ. ಒಂದೊಂದು ಕಂಬವು ಕೆತ್ತನೆಯ ಕೆಲಸ ಮತ್ತು ಶಿಲ್ಪಕೃತಿಗಳ ಕೂಡಿದ  ಸ್ವತಂತ್ರ ಕಲಾಕೃತಿಯಾಗಿದೆ.

ಮುಖಮಂಟಪವು ಸುಮಾರು ಐವತ್ಮೂರು ಅಡಿ ಉದ್ದಗಲವುಳ್ಳ ಚಚ್ಚೌಕ ಅಕೃತಿಯಲ್ಲಿದೆ ಇದರ ಸುತ್ತಲು ಹನ್ನೆರಡು ಕಂಬಗಳಿಗೆ ನಿರ್ಮಿತವಾದ ಹಜಾರ, ಮದ್ಯಭಾಗದಲ್ಲಿ ನಾಲ್ಕು ಕಂಬಗಳುಳ್ಳ ಚೌಕಾಕೃತಿಯು ಇದೆ.ಅಂದರೆ ಒಟ್ಟು ಹದಿನಾರು ಕಂಬಗಳ ಈ ರಂಗಮಂಟಪದಲ್ಲಿವೆ. ಇದರ ಪಶ್ಚಿಮಕ್ಕೆ ಕೊನೆಯಲ್ಲಿ ಗರ್ಭಗೃಹಕ್ಕೆ ಹೋಗುವ ಬಾಗಿಲಿದೆ. ಗರ್ಭಗೃಹ ಮತ್ತು ಅದರ ಮುಂದಿರುವ ಸುಖನಾಸಿಗಳೆರಡಕ್ಕೂ ಸೇರಿದಂತೆ ಪ್ರದಕ್ಷಿಣ ಪಥವಿದೆ.*

ಇನ್ನು ಪ್ರಾಚೀನ ಮನೆತನಗಳಲ್ಲಿಯಂತೆ ರಾಣಿಯರಿಗಾಗಿ ಹಲವಾರು ವಾಸ್ತುಶಿಲ್ಪಗಳು ವಿಜಯುನಗರದ ರಾಣಿಯರುಗಳಿಗೆ ಸಂದಿವೆ. ಇವುಗಳನ್ನು ಪರೋಕ್ಷ ರಾಣಿಯಗಾಗಿ ಸಂದಂತಹ ಕೊಡುಗೆಗಳೆನ್ನಬಹುದು. ತುಳುವ ಮನೆತನದ ಪ್ರಖ್ಯಾತ ಅರಸ ಕೃಷ್ಣದೇವಾವರಯನ ಕಾಲದಲ್ಲಿ ವಾಸ್ತುಶಿಲ್ಪಕ್ಕೆ ಅಪಾರ ಕೊಡುಗೆ ನೀಡಿರುವುದು ವಿಶ್ವಸನೀಯ. ಇವನು ತನ್ನು ರಾಣಿಯಾರಿಗಾಗಿ ನಿರ್ಮಿಸಿದ ವಾಸ್ತುಶಿಲ್ಪವು ಪ್ರಮುಖವಾದುದ್ದಾಗಿದೆ. ಇವು ಇಂದಿಗೂ ಜೀವಂತವಾಗಿದ್ದು ಅಂದಿನ ರಾಣಿಯರ ಜೀವನದ ನೆನಪನ್ನು ಮರುಕಳಿಸುತ್ತವೆ. ಅವುಗಳೆಂದರೆ,

**ಕಮಲ್‌ಮಹಲ್**

ಹಂಪಿಯ ಸ್ಮಾರಕಗಳಲ್ಲಯೇ ಅತ್ಯಂತ ಗಮನ ಸೆಳೆಯಯವ ಅಪರೂಪದ ಕಟ್ಟಡಗಳಲ್ಲಿ ಒಂದು ಕಮಲ್‌ಮಹಲ್. ಇದು ಎರಡು ಮಹಡಿಗಳ ಪೆವಿಲಿಯನ್[45] ಹೊಂದಿದೆ. ಇದು ಚೌಕಾಕಾರದಲ್ಲಿದೆ. ಇದನ್ನು ರಾಣಿಮಹಲ್, ಲೋಟಸ್ ಮಹಲ್, ಪದ್ಮಮಹಲ್, ಪಂಚಮಹಲ್. ಚಿತ್ರಾಂಗಿಣಿ ಮಹಲ್ ಎಂದು ವಿವಿಧ ಹೆಸರುಗಳಿಂದ ಕರೆಯುತ್ತಾರೆ. ಈ ಕಟ್ಟಡವು ಹಿಂದೂ ಮತ್ತು ಇಸ್ಲಾಂಮಿಕ್ ಶೈಲಿಯಲ್ಲಿದೆ. ಈ ಕಟ್ಟಡ ಕಮಲದ ಹೂವಿನ ಹಾಗೆ ಕಾಣಿಸುವುದರಿಂದಾಗಿ, ಇದನ್ನು ಕಮಲಮಹಲ್ ಎಂದು ಕರೆಯಲಾಗಿದೆ. ಕೃಷ್ಣದೇವರಾಯನ ರಾಣಿಯರಾದ ಚಿನ್ನಾದೇವಿ, ಮತ್ತು ತಿರುಮಲಾ ದೇವಿರಿಗಾಗಿ ನಿರ್ಮಿಸಿದ ಭವನವಾಗಿದೆ. ಬೇಸಿಗೆ ಕಾಲದಲ್ಲಿ ರಾಣಿಯರು ಇಲ್ಲಿ ಕಾಲ

[45] ರವೀಂದ್ರ ಕುಮಾರ್ : **ಮೌಖಿಕ ಚರಿತ್ರೆ ಮತ್ತು ಹಂಪಿ, ಪು–36–37,** ಮತ್ತು ಬೇಲೂರು, ಕೃಷ್ಣಮೂರ್ತಿ, ಹಂಪಿ, ಪು–28, ಶ್ರೀವೆಂಕಟೇಶ್ವರ ಟಾಯ್ಸ್ ಸೆಂಟರ್ ಮತ್ತು ಪ್ರೆಂವರ್ಕ್ಸ್, ಬಳ್ಳಾರಿ ಹಂಪಿ.
*ಕ್ಷೇತ್ರಕಾರ್ಯ : ದಿನಾಂಕ 21–11–2010, ಹಂಪಿ.

ಕಳಿಯುತ್ತಿದ್ದರೆಂದು ಐತಿಹ್ಯವಾಗಿ ಹೇಳಲಾಗುತ್ತದೆ. ಅಲ್ಲಿದೆ ಇದನ್ನು ಎರಡನೇ ದೇವರಾಯನು ತನ್ನ ಮಡದಿಗಾಗಿ ನಿಲ್ಲಿಸಿದನೆಂದು ಹೇಳಲಾಗುತ್ತದೆ. ಅದರೆ ಇದಕ್ಕೆ ಸ್ಪಷ್ಟ ಆದಾರಗಳಿಲ್ಲ. ಅದರೂ ರಾಣಿಯರಿಗಾಗಿ ನಿರ್ಮಿಸಿರುವ ಇದನ್ನು ಅದ್ಭುತವಾದುದ್ದು ಎಂದು ಹೇಳಿದರೆ ತಪ್ಪಾಗಲಾರದು.

ಈ ಮಹಲ್‌ನ ಸುತ್ತ ಕೋಟೆಯಿದ್ದು ಕೋಟೆಗೆ ಕಾವಲು ಗೋಪುರವಿದೆ. ಈ ಕೋಟೆಯು ಅವರಣದಲ್ಲಿ ಕಮಲ ಮಹಲಿನ ಹತ್ತಿರದಲ್ಲೇ ಒಂದು ಕಟ್ಟಡದ ಅವಶೇಷವಿದೆ, ಇದೇ ರಾಣಿಯರ ಅಂತ:ಪುರದ ಕಟ್ಟಡವಿದ್ದ ಜಾಗವೆಂದು ವಿದ್ಯಾಂಸರು ಅಭಿಪ್ರಾಯಪಡುತ್ತಾರೆ.

ರಾಣಿಯರ ಸ್ನಾನಗೃಹ ಇದು ಚೌಕಾಕಾರದ ಅಂಗಳ. ಕಟ್ಟಡದ ಹೊರಭಾಗದಲ್ಲಿ ಯಾವುದೇ ಕೆತ್ತನೆಗಳಿಲ್ಲದೆ ಸಾದಾ ಆಗಿದೆ. ನಡುವೆಯ ಒಳಭಾಗವು ಬೋಗುಣಿಗೆ ತೆರೆದಿದ್ದು ಕಮಾನುಗಳಿಂದ ಕೂಡಿದೆ. ಇದರ ಬಾಲ್ಕಾನಿಯ ಹೊರಭಾಗ ಗಾರೆಯ ತಾವರೆಯ ಮೊಗ್ಗುಗಳು, ಹಂಸಗಳು, ಯಾಳಿಗಳು, ಗಿಳಿಗಳು, ಹೂವಿನ ದಳಗಳು, ಹೂಬಳ್ಳಿಗಳಿಂದ ಕೂಡಿದೆ.[46] ಇದನ್ನು 'ಓಕಳಿಯ ಹೊಂಡ'ವೆಂದು ಕರೆಯಲಾಗಿದೆ. ಪ್ರತಿದಿನವು ಇಲ್ಲಿ ರಾಣಿಯರು ಆನೆ ಪಲ್ಲಕ್ಕಿಯ ಮೇಲೆ ಕುಳಿತು ಸ್ತ್ರೀ ಸೇವಕಿಯವರೊಂದಿಗೆ ಜಲಕ್ರೀಡೆಗಾಗಿ ಬರುತ್ತಿದ್ದರೆಂಬುದು ಜನರ ಅಭಿಪ್ರಾಯ.

ಈ ಕಟ್ಟಡದ ಸುತ್ತಲೂ ಎಂಟು ಬಾಲ್‌ಕಾನ್‌ಗಳಿದ್ದು ಇದರ ಸುತ್ತಲೂ ಸ್ತ್ರೀ ಸೇವಕಿಯವರು ಕುಳಿತು ಪುಷ್ಪಗಳನ್ನು ನೀರಿನಲ್ಲಿ ಬಿಡುತ್ತಿದ್ದರೆಂಬ ಐತಿಹ್ಯವಿದೆ. ಇಲ್ಲಿ ಸ್ನಾನ ಮಾಡಿದ ನಂತರ ರಾಣಿಯರು ಅಲ್ಲಿಯೇ ಹತ್ತಿರವಿದ್ದ 'ಚಂದ್ರಶೇಖರ ದೇವಾಲಯಕ್ಕೆ' ಹೋಗಿ ಪೂಜೆಸಲ್ಲಿಸಿ ಹೋಗುತ್ತಿದ್ದರೆಂಬುದು ಪ್ರತೀತಿ. ಈ ಸ್ನಾನದ ಕೊಠಡಿಯು ಎಂಟು ಅಡಿ ಆಳವಾಗಿದ್ದು ಈ ತೊಟ್ಟಿಗೆ ನೀರು ಬರಲು ಹೊರಭಾಗದಲ್ಲಿ ಕಲ್ಲಿನಿಂದ ನಿರ್ಮಿಸಿದ ಕಾಲುವೆಯಿದೆ. ಈಗಲೂ ಇದನ್ನು ನೋಡಬಹುದು. ಉಪಯೋಗಿಸಿದ ನೀರನ್ನು ಹೊರ ಬಿಡಲು ನಾಲ್ಕು ತೂಬುಗಳಿವೆ. ಇದರ ಹತ್ತಿರದಲ್ಲೇ ಪಶ್ಚಿಮ ದಿಕ್ಕಿನಲ್ಲಿ ಬೋಜನ ಶಾಲೆಯಿದೆ. ಈಗ ಇದರ ಸುತ್ತ ಗದ್ದೆಗಳಿವೆ ಸುಮಾರು ಇಪ್ಪತ್ತೆರಡು ಅಡಿ ಉದ್ದದ ಕಲ್ಲಿನ ಕಾಲುವೆಯಿದೆ. ಜೊತೆಗೆ ರಾಣಿಯರು ಸ್ನಾನ ಮಾಡುವಾಗ ಬಿಸಿಲು ಬೀಳಬಾರದೆಂದು ಈ ಕೊಳದ ಮೇಲೆ ನಾಲ್ಕು ಕಂಬಗಳಿದ್ದು ಅದರ ಮೇಲೆ ಸಣ್ಣ ಕಟ್ಟಡ ನಿರ್ಮಾಣವಿದೆ.

---

[46] ಕೆ. ರವೀಂದ್ರಕುಮಾರ್, **ಮೌಖಿಕ ಚರಿತ್ರೆ ಮತ್ತು ಹಂಪಿ,** ಪು–43. ಮತ್ತು ಕ್ಷೇತ್ರಕಾರ್ಯ, ದಿನಾಂಕ 21–11–2011 ಹಂಪೆ.

**ನೃತ್ಯಮಂಟಪ**

ನೃತ್ಯಮಂಟಪ ಅಥವಾ ಸಂಗೀತ ಮಂಟಪ. ಸಂಗೀತ ನೃತ್ಯವು ತುಳುವ ವಂಶದ ಕಾಲದಲ್ಲಿ ಹೆಚ್ಚು ಪ್ರಾಮುಖ್ಯತೆ ಪಡೆದ ಕಲೆಯಾಗಿತ್ತು. ಅನೇಕ ದೇವಾಲಯಗಳಲ್ಲಿ ನಾಟ್ಯಮಾಡುತ್ತಿರುವ ಶಿಲ್ಪಗಳನ್ನು ಕಾಣಬಹುದು. ಆದರೆ ಈ ನೃತ್ಯ ಮಂಟಪವನ್ನು ಕೃಷ್ಣದೇವರಾಯನು ತನ್ನ ಪಟ್ಟದರಸಿಯರಿಗಾಗಿ ನಿರ್ಮಿಸಿರುವುದು ವಿಶೇಷ. ರಾಣಿಯರಾದ ಚಿನ್ನಾದೇವಿ, ತಿರುಮಲಾದೇವಿಯವರು ಸಂಗೀತ, ನೃತ್ಯದಲ್ಲಿ ಪಾರಂಗತರಾಗಿದ್ದರು. ವಿಶೇಷ ಪೂಜೆಯ ಸಂದರ್ಭದಲ್ಲಿ ರಾಜನಿಗೆ ಸಂತೋಷಪಡಿಸಲು ಇಲ್ಲಿ ನೃತ್ಯ ನಡೆಸುತ್ತಿದ್ದರೆಂದು ಜಾನಪದದ ಹಿನ್ನೆಲೆಯಿಂದ ಹೇಳಲಾಗುತ್ತದೆ. ಇದಕ್ಕೆ ಆಧಾರವಾಗಿ ಈ ಮಂಟಪದಲ್ಲಿ ಐವತ್ತೇಳನೇ ಕಂಬಗಳಿದ್ದು, ಪ್ರತಿಯೊಂದು ಕಂಬದಲ್ಲಿಯೂ ಸಹ ಭಿನ್ನವಾದ ನಾದಸ್ವರ ಮೂಡಿಬರುವುದರಿಂದ ಈ ಮೇಲಿನ ಹಿನ್ನೆಲೆ ಸ್ಪಷ್ಟವಾಗುತ್ತದೆ. ತುಳುವ ವಂಶದಲ್ಲಿಯೇ ಕೃಷ್ಣದೇವರಾಯನು ರಾಣಿಯರಿಗಾಗಿ ಮಂಟಪ ನಿರ್ಮಿಸಿರುವುದು ನಿಜಕ್ಕೂ ಶ್ಲಾಘನೀಯವಾದ ಸಂಗತಿಯಾಗಿದೆ.[47]

**ತಿರುಮಲಾದೇವಿ ಗೋಪುರ**

ಇದು ನೂರ ಇಪ್ಪತ್ತು ಅಡಿ ಎತ್ತರದಿಂದ ಕೂಡಿದೆ. ಕೃಷ್ಣದೇವರಾಯನು ತನ್ನ ಹಿರಿಯ ರಾಣಿಯಾದ ತಿರುಮಲಾದೇವಿಗೆ ವಿಜಯ ವಿಠ್ಠಲ ದೇವಾಲಯದ ಪೂರ್ವದ್ವಾರದಲ್ಲಿ ನಿರ್ಮಿಸಿದನು. ಇದು ಅರ್ಧ ಕಲ್ಲಿನಿಂದ, ಅರ್ಧ ಇಟ್ಟಿಗೆಗಳಿಂದ ನಿರ್ಮಾಣಗೊಂಡಿದೆ. ಈ ಗೋಪುರಗಳ ಮೇಲೆ ಬಂಗಾರದ ಕಳಸಗಳಿದ್ದವೆಂದು ಅವು ತಾಳಿಕೋಟೆ ಯುದ್ಧದ ಸಂದರ್ಭದಲ್ಲಿ ನಾಶವಾದವೆಂದು ಹೇಳಲಾಗುತ್ತದೆ.

**ಚಿನ್ನಾದೇವಿ ಗೋಪುರ**

ಪ್ರೀತಿಯ ರಾಣಿಯಾದ ಚಿನ್ನಾದೇವಿಯ ಜ್ಞಾಪಕಾರ್ಥವಾಗಿ ಕಟ್ಟಿಸಿದನೆನ್ನಲಾಗಿದೆ. ವಿಠ್ಠಲ ದೇವಾಲಯದ ದಕ್ಷಿಣ ದಿಕ್ಕಿನಲ್ಲಿದೆ. ಎಂಬತ್ತು ಅಡಿ ಎತ್ತರವಾಗಿದೆ. ಬಲಭಾಗ ವಿಠ್ಠಲ ವಿಗ್ರಹವಿದ್ದರೆ ಎಡಭಾಗದಲ್ಲಿ ರುಕ್ಮಿಣಿಯ ವಿಗ್ರಹವಿದೆ.[48]

---

[47] ಕ್ಷೇತ್ರಕಾರ್ಯ, ದಿನಾಂಕ 27-11-2010, ಹಂಪಿ.

[48] ಕೆ. ರವೀಂದ್ರಕುಮಾರ್, **ಮೌಖಿಕ ಚರಿತ್ರೆ ಮತ್ತು ಹಂಪಿ,** ಪು-47-48.

ಒಟ್ಟಿನಲ್ಲಿ ಅನೇಕ ಸ್ಮಾರಕಗಳು, ಗೋಪುರಗಳು, ನಿರ್ಮಾಣಗೊಂಡಿರುವುದು ಹೆಚ್ಚಾಗಿ ರಾಣಿಯರ ಪ್ರೋತ್ಸಾಹದಿಂದಾಗಿ ಎಂಬುದು ಸ್ಪಷ್ಟವಾಗುತ್ತದೆ. ಜೊತೆಗೆ ತುಲಾಭಾರದ ಕಂಬದ ಬಲಭಾಗದ ಕೆಳ ಭಾಗದಲ್ಲಿ ಕೃಷ್ಣದೇವರಾಯನೊಂದಿಗೆ ತಿರುಮಲಾದೇವಿ/ ಚಿನ್ನಾದೇವಿಯರು ಕೈ ಮುಗಿದು ನಿಂತಿರುವುದು. ಕಂಡುಬಂದಿರುವುದರಿಂದ ಅಂದು ರಾಣಿಯರು ಸಾರ್ವಜನಿಕ ಕಾರ್ಯಗಳಿಗೆ ಸ್ವಯಂ ಪ್ರೇರಿತರಾಗಿ ಕೆಲಸ ಮಾಡುತ್ತಿದ್ದರೆಂದು ಇದು ಸ್ಪಷ್ಟಪಡಿಸುತ್ತದೆ. ಹಾಗೆಯೇ ರಾಜನ ಮೇಲೆ ರಾಣಿಯರ ಪ್ರಭಾವವೂ ಹೆಚ್ಚಾಗಿತ್ತು ಎಂದು ತಿಳಿಯಬಹುದು.

**ಬಸದಿಗಳ ನಿರ್ಮಾಣದಲ್ಲಿ ರಾಣಿಯರ ಪಾತ್ರ.**

ಕರ್ನಾಟಕದಲ್ಲಿ ಬಸದಿ ಪದ ಪ್ರಯೋಗವು ಮೊದಲ ಬಾರಿಗೆ ಕ್ರಿ.ಶ. ಎಂಟನೇ ಶತಮಾನದ ಶ್ರವಣ ಬೆಳಗೊಳದ ಶಿವಮಾರನ ಬಸದಿ ಶಾಸನದಲ್ಲಿ ಉಲ್ಲೇಖವಾಗಿದೆ.[49] ನಂತರದಲ್ಲಿ ಕ್ರಿ.ಶ. ಎಂಟು–ಒಂಭತ್ತನೇ ಶತಮಾನದ ಸಂಪಿಗೆಪುರದ ಶಾಸನದಲ್ಲಿ[50] ಬಸದಿ ಪದದ ಪ್ರಯೋಗವಿದೆ. ಕರ್ನಾಟಕದಲ್ಲಿ ಸೂಪ್ತದಿಂದ ಆರಂಭಗೊಂಡ ಜಿನ ಮಂದಿರವು ಜಿನಾಲಯವಾಗಿ ಭಟ್ಟಾರ ಕಾಯತನವನ್ನು ಹೊಂದಿ ಬಸದಿಯಾಗಿ ರೂಪುಗೊಂಡದ್ದನ್ನು ತಿಳಿಯಬಹುದು.

ರತ್ನಕರಂಡಕ ಶ್ರಾವಕಾಚಾರ'ವು ಬಸದಿಯ ಬಗೆಗೆ ತಿಳಿಸುತ್ತಾ ಜಿನಾಲಯವು ಜೈನ ಧರ್ಮಿಯರೆಲ್ಲರೂ ಒಟ್ಟಿಗೆ ಸೇರುವ ಕೇಂದ್ರವಾಗಿದ್ದು ಇಲ್ಲಿಗೆ ಬಂದ ಭಕ್ತರಲ್ಲಿ ಹಲವಾರು ಸ್ವಾಧ್ಯಾಯದಿಂದಲೂ, ಕೆಲವರು ಶಾಸ್ತ್ರ ಶ್ರವಣದಿಂದಲೂ, ವೀತರಾಗ ಪ್ರಭುವಿನ ದರ್ಶನದ ಫಲದಿಂದಲೂ ಭವ್ಯರೆಲ್ಲರೂ ಮೋಕ್ಷ ಮಾರ್ಗದಲ್ಲಿ ನಿರತರಾಗುತ್ತಾರೆ. ಬಸದಿಯ ನಿರ್ಮಾಣ ಮಾಡಿದರೆ ಬಹುಜನರ ಧರ್ಮಾಭಿವೃದ್ಧಿಯ ಫಲವೂ ತನ್ನ ಪುಣ್ಯಕಾರ್ಯದ ತನ್ನ ಪುಣ್ಯಕಾರ್ಯದ ಫಲವಾಗಿ ಯಶೋಭಿವೃದ್ಧಿಯೂ ಆಗುತ್ತದೆ ಎಂದು ತಿಳಿಸಿದೆ. ಇದರಿಂದಾಗಿ ಜಿನಾಲಯವನ್ನೆತ್ತಿಸಿದರೆ ಮೋಕ್ಷ ಪ್ರಾಪ್ತಿ ಎಂಬ ನಂಬಿಕೆ ಜನರಲ್ಲಿ ಬೆಳೆದು ಬಂದಿತು. ಈ ನಂಬಿಕೆಯ ಫಲವಾಗಿ ಹಲವಾರು ಬಸದಿಗಳ ರಚನೆಯಾಯಿತು. ಎಂದು ತಿಳಿಸುತ್ತದೆ.[51]

---

49 ಎ.ಕ II, ಶ್ರವಣಬೆಳಗೊಳ, ಶಾ.ಸಂ140.

50 ಎ.ಕ iii, ಗುಂಡ್ಲುಪೇಟೆ, ಶಾ.ಸಂ–92.

51 ಡಾ.ಕೆ. ವಸಂತಲಕ್ಷ್ಮಿ, **ಹಾಸನ ಜಿಲ್ಲೆಯ ಹೊಯ್ಸಳರ ಬಸದಿಗಳು,** ಪು–20, ಸುಮುಖ ಪ್ರಕಾಶನ, ಬೆಂಗಳೂರು. 2006.

ಹೀಗೆ ಕರ್ನಾಟಕದಲ್ಲಿ ಹಲವೆಡೆ ಕ್ರಿ.ಶ. ಒಂಬತ್ತು–ಹತ್ತನೇ ಶತಮಾನದ ಹೊತ್ತಿಗೆ ಆದಿನಾಥ, ಚಂದ್ರನಾಥ, ನೇಮಿನಾಥ, ಪಾರ್ಶ್ವನಾಥ, ಮಹಾವೀರ ತೀರ್ಥಂಕರರ ಅನೇಕ ಬಸದಿಗಳು ನಿರ್ಮಾಣಗೊಂಡವು. ಇಂತಹ ಅಮೂಲ್ಯ ಇತಿಹಾಸವನ್ನು ಹೊಂದಿರುವ ಬಸದಿಗಳ ನಿರ್ಮಾಣಕಾರ್ಯದಲ್ಲಿ, ಪ್ರಾಚೀನ ಕಾಲದಿಂದಲೂ, ಪ್ರಾಚೀನ ಮನೆತನಗಳ ರಾಣಿಯರ ಪಾಲು ಹೆಚ್ಚಿನದು. ಗಂಗರಸರು ಜೈನಧರ್ಮಕ್ಕೆ ಮೊದಲಿನಿಂದಲೂ ಪ್ರೋತ್ಸಾಹ ನೀಡಿದ್ದರು ನೀರ್ಗುಂದ ವಿಷಯದ ಶ್ರೀಪುರುಷ ಗ್ರಾಮದಲ್ಲಿ ಕುಂದಾಚ್ಚಿಯು ಲೋಕತಿಲಕ ಜಿನಾಲಯವನ್ನು ನಿರ್ಮಿಸಿದಳು.[52] ಚಾಲುಕ್ಯರ ಪೋಚಿಕಬ್ಬೆ ಜಿನಧರ್ಮಕ್ಕೆ ಮೀಸಲಿಟ್ಟು ಹಲವಾರು ಚೈತ್ಯಾಲಯಗಳನ್ನು ಮಾಡಿದ ಬಗ್ಗೆ ಶಾಸನವಿವರಿಸಿದೆ.[53] ಬಾದಾಮಿ ಚಾಲುಕ್ಯರ ಮೂರನೆಯ ವಿಜಯಾದಿತ್ಯನ ಸಹೋದರಿ ಕುಂಕುಮ ಮಹಾದೇವಿ, ಪುಲಿಗೆರೆಯಲ್ಲಿ ಆನೆಸಜ್ಜೆ ಬಸದಿಯನ್ನು,[54] ಎರಡನೆಯ ಕೀರ್ತಿವರ್ಮನ ಕಾಲದಲ್ಲಿ ಜಾಬುಳಗೇರಿಯ ಗಾಮುಂಡಳಾಗಿದ್ದ ಕಲಿಯಮ್ಮಳು ಅಣ್ಣಿಗೇರಿಯಲ್ಲಿಯೂ[55] ಗಂಗಭೂತುಗನ ಪೆರ್ಮಾಡಿಯ ರಾಣಿ ಪದ್ಮಬ್ಬರಸಿ, ನರೇಗಲ್ಲದಲ್ಲಿಯೂ,[56] ಮಹಾಸಾಮಂತ ಪಂಗನಮಡದಿ ಜಕ್ಕಿಸುಂದರಿ ಕಾಕಂಬಾಳದಲ್ಲಿಯೂ ಬಸದಿಗಳನ್ನು ನಿರ್ಮಿಸಿದ್ದಾರೆ[57]

ಅತ್ತಿಮಬ್ಬೆ ಲಕ್ಕುಂಡಿಯಲ್ಲಿ ಕ್ರಿ.ಶ 1007ರಲ್ಲಿ ಒಂದು ಸುಂದರವಾದ ಬಸದಿಯನ್ನು ಕಟ್ಟಿಸಿದ್ದಾಳೆ.[58] ನೂತಾನಾತ್ತಿಯಬ್ಬೆಯೆನಿಸಿದ 'ಬಾಚಲದೇವಿ ಒಂದೇಮಾಸದಲ್ಲಿ ಬಸದಿಯ ದಕ್ಷಿಣದ ಪಟ್ಟಶಾಲೆಯನ್ನು ಮಾಡಿಸುತ್ತಾಳೆ.[59] ಕೀರ್ತಿವರ್ಮನ ರಾಣಿ ಮಾಳಲದೇವಿ ಕುಪ್ಪಟೂರಿನಲ್ಲೂ[60] ಕಲ್ಯಾಣಚಾಲುಕ್ಯರ ಜಾಕಲಾದೇವಿ ಇಂಗಳಿಗೆಯಲ್ಲಿ,[61] ಬಾಚಲದೇವಿ ಬನ್ನಿಕೆರೆಯಲ್ಲೂ[62] ಹೊಯ್ಸಳರ

52 ಎ.ಕ. VII, ನಾಗಮಂಗಲ, ಶಾ.ಸಂ149.

53 ಎ.ಕ ii, ಶ್ರವಣಬೆಳಗೊಳ, ಶಾಸಂ. 118, ಕ್ರಿ.ಶ. 1120.

54 S.I.I. X.X ಗುಡಿಗೆರೆ, ಶಾ.ಸಂ–46. ಕ್ರಿ.ಶ. 1072.

55 ಶ್ರೀನಿವಾಸ ಪಾಡಿಗಾರ, **ಬಾದಾಮಿಚಾಲುಕ್ಯರು** ಲೇಖನ ಸಂಪುಟ, ಪು.173, ಡಾ.ಎಂ. ಮುರಿಗೆಪ್ಪ, (ಪ್ರಸಂ) ಪ್ರಸಾರಂಗ, ಹಂಪಿ, 2009.

56 ಅದೇ, ಪುಟ–173.

57 BKI 1-I, ನರೇಗಲ್ಲು, ಶಾ.ಸಂ. 38, ಕ್ರಿ.ಶ. 951.

58 BSI 1-I, ಸಂ.52. ಪು–39–43.

59 ಎ.ಕ VIII ನಗರ, ಶಾ.ಸಂ37, ಕ್ರಿ.ಶ. 1147.

60 ಎ.ಕ VIII ಸೊರಬ, ಶಾ.ಸಂ 262,ಕಸವಳ್ಳಿ ಕ್ರಿ.ಶ. 1077.

61 ಡಾ.ದೇಸಾಯಿ ಪಾಂಡುರಂಗ ರಾಯರು, **ಕನ್ನಡ ನಾಡಿನ ಮಿಂಚಿದ ಮಹಿಳೆಯರು,** ಪು–114. ಧಾರವಾಡ ಇತಿಹಾಸ ಸಂಶೋಧನ ಮಂಡಲ, 2007–08.

62 ಎ.ಕ VII. ಶಿವಮೊಗ್ಗ, ಶಾ.ಸಂ97, ಆಲಹಳ್ಳಿ, ಕ್ರಿ.ಶ. 113.

ವಿಷ್ಣುವರ್ಧನನ ಪಟ್ಟಮಹಿಷಿ ಶಾಂತಲೆ ಶ್ರವಣಬೆಳಗೊಳದಲ್ಲಿ ಸವತಿಗಂಧಾವರಣಿ ಬಸದಿಯನ್ನು[63] ನಿರ್ಮಿಸಿದ್ದಾರೆ.ವಿಜಯನಗರ ಸಾಮ್ರಾಜ್ಯದಲ್ಲಿ ಇಮ್ಮಡಿ ದೇವರಾಯನ ರಾಣಿ ಭೀಮಾದೇವಿ ಶ್ರವಣ ಬೆಳಗೊಳದಲ್ಲಿ[64] ಭಟ್ಕಳದ ರಾಣಿ ವೀರಾಂಬ ಕಲ್ಲುಬಸದಿಯಲ್ಲೂ,[65] ಎರಡನೇ ಹರಿಹರನ ರಾಣಿ ಬುಕ್ಕವ್ವೆ[66] ಯವರು ಬಸದಿಗಳ ನಿರ್ಮಾಣ ಕಾರ್ಯದಲ್ಲಿ ತೊಡಗುವುದರ ಮೂಲಕ ಜೈನಧರ್ಮವನ್ನು ಪ್ರೋತ್ಸಾಹಿಸಿದ್ದಾರೆ. ಇದರ ಬಗ್ಗೆ ಅಧ್ಯಾಯ ಮೂರರಲ್ಲಿ ಧಾರ್ಮಿಕ ಕಾರ್ಯದಲ್ಲಿ ರಾಣಿಯರ ಕೊಡುಗೆಗಳು ಎಂಬ ಶೀರ್ಷಿಕೆಯಡಿಯಲ್ಲಿ ಚರ್ಚಿಸಲಾಗಿದೆ.

ಹೀಗೆ ಪ್ರಾಚೀನ ಕಾಲದಿಂದಲೂ ದೇವಾಲಯಗಳ ನಿರ್ಮಾಣಕಾರ್ಯಗಳು ಜೀರ್ಣೋದ್ಧಾರ ಕಾರ್ಯಗಳು ಮತ್ತು ನಿರ್ವಹಣೆಗೆ ದೊರೆತ ದಾನ-ದತ್ತಿಗಳ ವಿಷಯಗಳು ದೊರೆಯುತ್ತವೆ. ದೇವಾಲಯ ಸ್ಮಾರಕಗಳು, ಬಸದಿಗಳ ನಿರ್ಮಾಣಕ್ಕೆ ಸಂಬಂಧಿಸಿದಂತೆ ಧರ್ಮ, ಪರೋಕ್ಷ ವಿನಯ, ಗಳಿಸಿದ ಸಂಪತ್ತು ವಿಶೇಷ ಸಂದರ್ಭಗಳು ಕಾರಣಗಳಾಗಿರುತ್ತವೆ ಎನ್ನಬಹುದಾದರೂ ಕೂಡ ಪ್ರಾಚೀನ ಕಾಲದಲ್ಲಿ ರಾಜಮನೆತನಗಳ ರಾಣಿಯರು ಧಾರ್ಮಿಕ ಚಟುವಟಿಕೆಗಳ ಮೂಲಕ ಸಾಮಾಜಿಕ ರಂಗದಲ್ಲಿ ಸೇವೆಯನ್ನು ಸಲ್ಲಿಸಿದ್ದಾರೆ. ಆ ಮೂಲಕ ತಮ್ಮ ಪ್ರಭಾವವನ್ನು ಹೊರಹೊಮ್ಮಿಸಿದ್ದಾರೆ. ಧರ್ಮದ ಪ್ರಸಂಗ, ಧರ್ಮದ ಚಿಂತೆಗಳು, ಶಿವದೇವಾಲಯಗಳು ಮತ್ತು ವಿಷ್ಣುದೇವಾಲಯಗಳ ನಿರ್ಮಾಣಕ್ಕೆ ಕಾರಣವಾದಂತೆಯೇ ಕೆಲವು ಬಸದಿಗಳ ನಿರ್ಮಾಣಕ್ಕೂ ಕಾರಣವಾಗಿದೆ.

---

[63] ಎ.ಕ ii, ಶ್ರವಣಬೆಳಗೊಳ, ಶಾ.ಸಂ. 132, ಕ್ರಿ.ಶ. 1123.

[64] ಎ.ಕ ii ಶ್ರವಣಬೆಳಗೊಳ (ಪರಿಷ್ಕೃತ) ಶಾ.ಸಂ 467, ಕ್ರಿ.ಶ. 1140.

[65] ಆರಿಸ್. ಇಂ. ಎ. 1965, ಸಂ.-366.

[66] ಸೂರ್ಯನಾರಾಯಣರಾವ್ (ಅನು) ಬಾಲಸುಬ್ರಹ್ಮಣ್ಯ, **ಮರೆಯಲಾಗದ ಸಾಮ್ರಾಜ್ಯ ವಿಜಯನಗರ,** ಪು-260, ಹಂಪಿ, ಕನ್ನಡ ವಿಶ್ವವಿದ್ಯಾಲಯ. 2000.

# ಅಧ್ಯಾಯ – 5

## ಸಮಾರೋಪ

ಕರ್ನಾಟಕಕ್ಕೆ ಪ್ರಾಚೀನ ಕಾಲದಿಂದಲೂ ತನ್ನದೇ ಆದ ಚರಿತ್ರೆ ಇದೆ. ಇತಿಹಾಸದಲ್ಲಿ ಭಾರತೀಯ ಸಂಸ್ಕೃತಿಗೆ ಕೊಟ್ಟಿರುವ ಕೊಡುಗೆ ಬಹು ದೊಡ್ಡದು. ಇಂತಹ ಅಭೂತಪೂರ್ಣ ಚರಿತ್ರೆಯನ್ನು ಹೊಂದಿರುವ ಕರ್ನಾಟಕವನ್ನು ಸಾಕಷ್ಟು ರಾಜಮನೆತನಗಳು ಆಳ್ವಿಕೆ ನಡೆಸಿ ಹೋಗಿವೆ. ಈ ರಾಜಮನೆತನಗಳು ಕರ್ನಾಟಕದ ಪರಂಪರೆಯನ್ನು ಸಮೃದ್ಧಿಗೊಳಿಸಿವೆ. ಇಂತಹ ಕರ್ನಾಟಕದ ಇತಿಹಾಸ ಆರಂಭವಾಗುವುದು ಕ್ರಿ.ಪೂ ಮೂರನೇ ಶತಮಾನದ ನಂತರ, ಸದ್ಯಕ್ಕೆ ಆ ಮೊದಲಿನ ಇತಿಹಾಸಕ್ಕೆ ಯಾವ ಲಿಖಿತ ದಾಖಲೆಗಳು ಲಭ್ಯವಿಲ್ಲ. ಸಾವಿರಾರು ವರ್ಷಗಳ ಸುಧೀರ್ಘ ಮತ್ತು ಉಜ್ವಲ ಸಾಂಸ್ಕೃತಿಕ ಪರಂಪರೆಯನ್ನು ಹೊಂದಿರುವ ಕರ್ನಾಟಕದ ಆಧುನಿಕ ಇತಿಹಾಸದಲ್ಲಿ ಕರ್ನಾಟಕದ ಏಕೀಕರಣ ಒಂದು ಮಹತ್ವಪೂರ್ಣವಾದ ವಿಶಿಷ್ಟ ಘಟನೆ. ಅಲ್ಲಿಂದೀಚೆಗೆ ಕರ್ನಾಟಕದ ಇತಿಹಾಸವನ್ನು ನೋಡುವ ಕ್ರಮಗಳು ಪರಿವರ್ತನೆಯಾಗಿವೆ. ವೈಜ್ಞಾನಿಕ ಮತ್ತು ವಿಶ್ಲೇಷಣಾತ್ಮಕ ಹಾಗೂ ಗುಣಾತ್ಮಕ ನಿಟ್ಟಿನಲ್ಲಿ ಸಂಶೋಧನೆಗಳು ಜರುಗುತ್ತಿವೆ.

ಹತ್ತೊಂಬತ್ತನೆಯ ಶತಮಾನದಿಂದ ಈಚೆಗೆ ಮಹಿಳೆಯನ್ನು ನೋಡುವ ದೃಷ್ಟಿಕೋನಗಳು ಬದಲಾಗುತ್ತಿವೆ. ಮಹಿಳೆಯರ ಸ್ಥಿತಿಗತಿಗಳನ್ನು ಲಿಂಗಸಂಬಂಧಿ ವ್ಯವಸ್ಥೆಗಳ ನೆಲೆಗಳಲ್ಲಿ ವಿವಿಧ ಆಯಾಮಗಳಲ್ಲಿ ಗ್ರಹಿಸುವ ಉದ್ದೇಶವನ್ನು ಮಹಿಳಾ ಅಧ್ಯಯನಗಳು ನಡೆಸುತ್ತಿವೆ. ಮಹಿಳೆಯರ ಅಸ್ಮಿತೆ, ಅಸ್ತಿತ್ವಗಳನ್ನು ಗುರುತಿಸುವ ಉದ್ದೇಶ ಮಹಿಳಾ ಸಂಶೋಧನೆಗಳಲ್ಲಿ ಸಾಗಿದೆ. ಸ್ತ್ರೀವಾದಿ ಸಂಶೋಧನೆಗೆ ಪ್ರತ್ಯೇಕವಾದ ವಿಧಾನಗಳನ್ನು ಮತ್ತು ವೈಧಾನಿಕತೆಯನ್ನು ರೂಪಿಸಿಕೊಳ್ಳುವ ಅಗತ್ಯವನ್ನು ಹಾಗೂ ಅದು ಎದುರಿಸಬೇಕಾಗಿರುವ ಸವಾಲುಗಳ ಕುರಿತು ವಿಶ್ಲೇಷಣೆಯನ್ನು ಸ್ತ್ರೀವಾದಿ ಸಂಶೋಧನಾ ವೈಧಾನಿಕತೆಗಳಲ್ಲಿ ನಡೆಯುತ್ತಿವೆ. ಮಹಿಳಾ ಸಬಲೀಕರಣದ ಸಾಧ್ಯತೆಯನ್ನು ಮಹಿಳೆಯರ ರಾಜಕೀಯ ಸಬಲೀಕರಣದ ನೆಲೆಗಳಲ್ಲಿ ವಿವರಿಸುವ ಪ್ರಯತ್ನವನ್ನು ಮಾಡಲಾಗುತ್ತಿದೆ.

ಪ್ರಸ್ತುತ ಅಧ್ಯಯನ **"ಕರ್ನಾಟಕದ ರಾಣಿಯರು ಸಮಗ್ರ ಅಧ್ಯಯನ ಕದಂಬ ಸಾಮ್ರಾಜ್ಯದಿಂದ ವಿಜಯನಗರ ಸಾಮ್ರಾಜ್ಯದವರೆಗೆ (ಕ್ರಿ.ಶ. 345 ರಿಂದ ಕ್ರಿ.ಶ. 1565)"** ಎಂಬ

ಶೀರ್ಷಿಕೆಯನ್ನು ಹೊತ್ತ ಸಂಶೋಧನಾತ್ಮಕ ನಿಬಂಧವು ಪ್ರಾಚೀನ ಕಾಲದಲ್ಲಿ ಕರ್ನಾಟಕವನ್ನಾಳಿದ ವಿವಿಧ ರಾಜಮನೆತನಗಳಲ್ಲಿ ಬರುವಂತಹ ರಾಣಿಯರ ಕುರಿತಾದ ಸಮಗ್ರವಾಗಿ, ವಿಶ್ಲೇಷಿಸುವ ಮಹಿಳಾ ಅಧ್ಯಯನ ಸಂಬಂಧಿ ಪ್ರಯತ್ನದ್ದಾಗಿದೆ. ಕರ್ನಾಟಕವನ್ನಾಳಿದ ರಾಜಮನೆತನಗಳು ಕರ್ನಾಟಕದ ಸಂಸ್ಕೃತಿಗೆ ವಿಪುಲವಾದ ಕೊಡುಗೆಗಳನ್ನು ನೀಡಿ ಶ್ರೀಮಂತಗೊಳಿಸಿದ್ದಾರೆ. ರಾಜಮನೆನತನಗಳು ಅರಸರು ಆಳ್ವಿಕೆ ನಡೆಸುವಾಗ ತಮ್ಮದೇ ಆದ ವಿಶೇಷತೆಯನ್ನು ಪಡೆದಿದ್ದಂತೆ ರಾಣಿಯರು ಸಹ ಪ್ರಾಮುಖ್ಯರಾಗಿದ್ದಾರೆ. ಇವರು ನಾಡಿನ ಸಂಸ್ಕೃತಿಯನ್ನು ಚಿರಂತನದಾಗಿ ಬೆಳಗಿಸುವಲ್ಲಿ ಯಶಸ್ವಿಯಾಗಿದ್ದಾರೆ. ಶಾಸನ, ಕಾವ್ಯಗಳಲ್ಲಿ, ಅವರ ವಿಶೇಷಣಗಳು ದಾಖಲೆಯಾಗಿವೆ. ಅರಸಿಯರು ವೀರರಂತೆ, ಆಡಳಿತ ಕುಶಲಿಗಳಾಗಿ, ರಣಾಂಗಣವೀರೆಯರಾಗಿ, ಕಲಾ ಪ್ರವೀಣರಾಗಿ, ಧರ್ಮ ಮೂರ್ತಿಗಳಾಗಿ, ಮಾನವತಾವಾದಿಗಳಾಗಿ ಸಾಹಿತ್ಯ ಪ್ರೇಮಿಗಳಾಗಿ ಸುಸಂಸ್ಕೃತ ಇತಿಹಾಸ ಬರೆಯಲು ಪ್ರೇರಣೆ ನೀಡಿದ್ದಾರೆ. ಕದಂಬ ಸಾಮ್ರಾಜ್ಯದಿಂದ ವಿಜಯನಗರ ಸಾಮ್ರಾಜ್ಯದವರೆಗಿನ ರಾಜಮನೆತನಗಳಲ್ಲಿ ಬರುವಂತಹ ರಾಣಿಯರ ಚರಿತ್ರೆಯೂ, ಹೆಚ್ಚು ವಿಸ್ತಾರವಾದುದ್ದು ಮತ್ತು ಕುತೂಹಲ ಅಂಶಗಳಿಂದ ಕೂಡಿದ ಸಂಗತಿಗಳನ್ನು ಒಳಗೊಂಡಿರುವುದು ಈ ಸಂಶೋಧನಾ ಅಧ್ಯಯನದ ಒಳನೋಟಗಳಿಂದ ಗ್ರಹಿಸಬಹುದಾಗಿದೆ.

ಕನ್ನಡದ ಮೊಟ್ಟಮೊದಲ ಸಾಮ್ರಾಜ್ಯವೆನಿಸಿದ ಕದಂಬ ಮನೆತನದ ಕಾಲಾವಧಿಯಿಂದ ಹಿಡಿದು ವಿಜಯನಗರ ಸಾಮ್ರಾಜ್ಯದವರೆವಿಗೂ ಉನ್ನತವರ್ಗಕ್ಕೆ ಸೇರಿದ ರಾಜಕುಟುಂಬಗಳಲ್ಲಿನ ರಾಜರ ಮಡದಿಯರು 'ರಾಣಿ' ಎಂಬ ಹೆಸರಿನ ಮೂಲಕ ಗುರುತಿಸಿಕೊಳ್ಳುತ್ತಿದ್ದರು. ಇಲ್ಲಿ ರಾಣಿಯರೆಂದರೆ 'ರಾಜನ ಪತ್ನಿ' ಪಟ್ಟಮಹಿಷಿ, ಮಹಾರಾಣಿ ಅಗ್ರಮಹಿಷಿ ಎಂದೆಲ್ಲಾ ಗುರುತಿಸಿಕೊಂಡು ರಾಜನ ಮೂಲಕ ಗುರುತಿಸಿಕೊಂಡಿದ್ದಾರೆ. ಇಂತಹವರ ಪ್ರಾಚೀನ ಕಾಲದಿಂದಲೂ ಹೆಚ್ಚಿನ ಸಂಖ್ಯೆಯಲ್ಲಿ ತಮ್ಮ ಸ್ವಂತಕಾರ್ಯ ಬಲದಿಂದ ಇಲ್ಲವೇ ಪರೋಕ್ಷವಾಗಿಯೋ ಕಾಣಿಸಿಕೊಂಡಿರುವುದು ನಮ್ಮ ಅಧ್ಯಯನದಿಂದ ತಿಳಿದು ಬರುತ್ತದೆ.

ರಾಜ ಮನೆತನಗಳ ರಾಣಿಯರು ವೈವಿಧ್ಯಮಯವಾದ ಕರ್ನಾಟಕದ ಪರಂಪರೆಯನ್ನು ಪ್ರೋತ್ಸಾಹಿಸಿ ಶ್ರೀಮಂತಗೊಳಿಸಿದ್ದಾರೆ. ಇವರ ಕೊಡುಗೆಗಳು ವೈವಿಧ್ಯಪೂರ್ಣವಾಗಿವೆ. ಮಹಿಳೆಯು ಪ್ರಪ್ರಥಮವಾಗಿ ಸಮಾಜವನ್ನು ಪ್ರತಿನಿಧಿಸುವುದು ಗೃಹಿಣಿಯಾಗಿ ಇದೊಂದು ಸೀಮಿತ ಕ್ಷೇತ್ರ. ಈ ಕ್ಷೇತ್ರದೊಂದಿಗೆಯೇ ಸಮಾಜದ ಇತರೆ ರಂಗಗಳಾದ ರಾಜಕೀಯ, ಧಾರ್ಮಿಕ, ಕಲೆ ಮತ್ತು

ವಾಸ್ತುಶಿಲ್ಪ ಕ್ಷೇತ್ರಗಳಲ್ಲಿ ವಿಶಿಷ್ಠವಾದ ಸ್ಥಾನಮಾನವನ್ನು ಪ್ರದರ್ಶಿಸಿದ್ದಾರೆ. ರಾಣಿಯರು ರಾಜನೊಂದಿಗೆ ಸುಖಸಂಕತಾ ವಿನೋದದಿಂದ ಬಾಳುವಲ್ಲಿ ಸ್ವತಂತ್ರ ಆಡಳಿತ ನಿರ್ವಹಿಸುವುದರ ಮೂಲಕ ರಾಜ್ಯಾಧಿಕಾರವನ್ನು ಹೊಂದಿರುತ್ತಿದ್ದರು. ಚಾಲುಕ್ಯರ ಕಾಲದಲ್ಲಿ ಮೊದಲನೇ ಪುಲಕೇಶಿಯ ರಾಣಿ ದುರ್ಲಬಾದೇವಿ ಬಾದಾಮಿಯ ಸುತ್ತಲಿನ ಹತ್ತು ಗ್ರಾಮಗಳನ್ನು ಆಳಿದ ಸೂಚನೆ, ಚಂದ್ರಾದಿತ್ಯನ ರಾಣಿ 'ಕರ್ನಾಟಕ ರಾಜಪ್ರಿಯೆ' ಎಂದೇ ಹೊಗಳಿಕೆಗೆ ಪಾತ್ರಳಾದ ವಿಜಯ ಭಟ್ಟಾರಿಕೆ ರಾಷ್ಟ್ರಕೂಟರ ಧ್ರುವನ ರಾಣಿ ಶೀಲಭಟ್ಟಾರಿಕೆ, ಚಂದ್ರೋಲಬ್ಬೆ, ಬೂತುಗನ ರಾಣಿ ಪದುಮಬ್ಬರಸಿ ಶ್ರೀ ಪುರುಷನ ರಾಣಿ ವಿನೇತಿ ನಿಮ್ಮಡಿ, ಎರೆಯಂಗನ ರಾಣಿ ರೇವಕನಮ್ಮಡಿಯರು ಕಲ್ಯಾಣಿ ಚಾಲುಕ್ಯೋತ್ತರ ಕಾಲದಲ್ಲಿ ಸ್ವತಂತ್ರ ಆಡಳಿತ ನಡೆಸಿದ ವಿವರಗಳು ದೊರೆತರೆ, ಕಲ್ಯಾಣಿ ಚಾಲುಕ್ಯರ ಕಾಲದಲ್ಲಿ ರಾಣಿಯರು, ಪುರುಷನಷ್ಟೇ ಸಮಾನ ಅವಕಾಶಗಳನ್ನು ಹೊಂದಿ ರಾಜಕೀಯವನ್ನು ಪ್ರವೇಶಿಸಿದ್ದುದ್ದು ತಿಳಿದು ಬರುತ್ತದೆ.

ಕಲ್ಯಾಣ ಚಾಲುಕ್ಯರ ಅಕ್ಕಾದೇವಿ ಭಾಗಲಾದೇವಿ, ಕೇತಲದೇವಿ, ಕಂಚಲಾದೇವಿ, ಚಂದಲಾದೇವಿ, ಮೈಳಲಾದೇವಿ, ಜಾಕಲದೇವಿ,ಪಿರಿಯ ಕೇತಲ ದೇವಿಯರು ಸಮಗ್ರವಾಗಿಯೇ ಆಡಳಿತ ನಡೆಸಿರುವುದು ಅಧ್ಯಯನದಿಂದ ದೃಢಪಟ್ಟಿದೆ. ಅದರಲ್ಲಿ ಅಕ್ಕಾದೇವಿ, ಕಿಸುಕಾಡು–70ನ್ನು ಸುಮಾರು (44) ನಲವತ್ನಾಲ್ಕು ವರ್ಷಗಳು ಆಳಿದ ಆಕೆಯನ್ನು ಶಾಸನಗಳು ಮತ್ತು ಸಾಹಿತ್ಯಗಳು ಹೊಗಳಿರುವ ಉಲ್ಲೇಖಗಳು ಮೈನವಿರೇಳಿಸುವಂತಿವೆ. ಹೊಯ್ಸಳರ ಕಾಲದಲ್ಲಿ ವಿಷ್ಣುವರ್ಧನನ ರಾಣಿ ಶಾಂತಲೆ, ಬಂಮಲಾದೇವಿ, ಚೋಳ ಮಹಾದೇವಿ, ಚಿಕ್ಕಾಯಿ ಬುಕ್ಕತಾಯಿಯರು, ವಿಜಯನಗರ ಅರಸರ ಕಾಲದಲ್ಲಿನ ನಾಲ್ಕು ಮನೆತನಗಳಲ್ಲೂ ಸಹ ಸಾಳ್ವವಂಶದ ತಿಮ್ಮರಾಜನ ರಾಣಿ ಹರಿಮಾ, ಎರಡನೇ ದೇವರಾಯನ ಸಹೋದರಿಯಾಗಿದ್ದು, ಸ್ವತಂತ್ರ್ಯ ರಾಜ್ಯಭಾರ ಮಾಡುತ್ತಿದ್ದಳು. ತುಳುವ ಮನೆತನದ ಚಿನ್ನಾದೇವಿ ಮತ್ತು ತಿರುಮಲಾ ದೇವಿಯರು, ಮತ್ತು ಜಗನ್ಮೋಹಿನಿ ರಾಣಿಯರು, ರಾಜನಾದ ಕೃಷ್ಣದೇವರಾಯನೊಂದಿಗೆ ಯುದ್ಧದಲ್ಲಿ ಸಮಯದಲ್ಲಿ ಪಾಲ್ಗೊಂಡಿದ್ದರೆಂಬುದು ಗಮನಾರ್ಹವಾದ ಸಂಗತಿಗಳಾಗಿವೆ.

ರಾಜನಂತೆ ರಾಣಿಯರು ಸಹ ಪ್ರಾಚೀನ ಕಾಲದಲ್ಲಿಯೇ ದಿಟ್ಟ ಹೋರಾಟದ ಮನೋಭಾವನೆಯನ್ನು ಹೊಂದಿದ್ದು, ರಾಜರ ಸರಿಸಮಾನರಾಗಿ ಬಾಳಿ–ಬದುಕಿ ತೋರಿಸಿರುವುದು ಶ್ಲಾಘನೀಯವಾದ ವಿಷಯ. ಶಾಸನಗಳು ಇಂತಹ ವೀರತ್ವದ ರಾಣಿಯರನ್ನು ಶ್ಲಾಘಿಸಿವೆ. ಕೆಲವೊಮ್ಮೆ

ರಾಣಿಯರು ಎರಡು ಸಾಮ್ರಾಜ್ಯಗಳ ನಡುವಿನ ಸುಮಧುರ ಬಾಂಧವ್ಯದ ಕೊಂಡಿಗಳಾಗಿರುತ್ತಿದ್ದರು ಎಂಬುದಕ್ಕೆ ಒರಿಸ್ಸಾದ ರಾಜಪುತ್ರಿ ಜಗನ್ಮೋಹಿನಿ ವಿಜಯನಗರದ ಶ್ರೀಕೃಷ್ಣದೇವರಾಯನನ್ನು ವಿವಾಹವಾದುದ್ದನ್ನು ಚೋಳಮಹಾದೇವಿಯನ್ನು ಹೊಯ್ಸಳ ಮನೆತನಕ್ಕೆ ವಿವಾಹ ಮಾಡಿದ್ದನ್ನು ಇಲ್ಲಿ ಸ್ಮರಿಸಬಹುದಾಗಿದೆ.

ರಾಜಕೀಯ ರಂಗಕ್ಕೆ ರಾಜಮನೆತನಗಳ ಎಲ್ಲಾ ರಾಣಿಯರು ಹೋಗುತ್ತಿರಲಿಲ್ಲ ಎಂಬುದು ಸಹ ನೈಜ ವಿಷಯ. ತಮ್ಮದೇ ಆದ ಅಭಿರುಚಿಗಳಿಗೆ ಅನುಗುಣವಾಗಿ ತಮ್ಮದೇ ಆದ ಸ್ಥಾನಮಾನವನ್ನು ಪಡೆದಿರುವುದು ಮತ್ತೊಂದು ವಿಶೇಷವಾಗಿದೆ ಕೆಲವು ರಾಣಿಯರು ಧಾರ್ಮಿಕ ಕಾರ್ಯಗಳಲ್ಲಿ ಗುರುತಿಸಿಕೊಂಡಿದ್ದಾರೆ. ಬಹುಪಾಲು ರಾಣಿಯರು ಧಾಮಿಕ ರಂಗವನ್ನೇ ಆರಿಸಿಕೊಂಡಿರುವುದು ಈ ಸಂಶೋಧನಾ ಅಧ್ಯಯನದಿಂದ ತಿಳಿದು ಬರುತ್ತದೆ. ಇದಕ್ಕೆ ತಮ್ಮ ತಮ್ಮ ಅಧಿಕಾರ, ಪ್ರಭಾವ, ಮತ್ತು ಕೀರ್ತಿ ಆಕಾಂಕ್ಷೆಗಳಿಂದ ಧಾರ್ಮಿಕ ರಂಗವನ್ನು ಪ್ರವೇಶಿಸಿರುವುದು ನೈಜ ವಿಷಯವೆನಿಸುತ್ತದೆ. ಪ್ರಾಯಶಃ ಮಹಿಳೆ ಅಂದಿನ ಕಾಲದಲ್ಲಿ ಬಹು ಸರಳ ಮತ್ತು ವಿಶ್ವಸನೀಯವಾಗಿ ತೊಡಗುತ್ತಿದ್ದ ಕ್ಷೇತ್ರವೆಂದರೆ ಧಾರ್ಮಿಕ ಕ್ಷೇತ್ರ. ಈ ಕ್ಷೇತ್ರದಲ್ಲಿ 'ಚತುಸ್ಸಮುದ್ದರಣಮ್' (ನಾಲ್ಕು ಧರ್ಮಗಳು) ಅಂದರೆ ಜೈನ, ಬೌದ್ಧ, ಶೈವ, ವೈಷ್ಣವ ಧರ್ಮಗಳನ್ನು ಪ್ರೋತ್ಸಾಹಿಸಿದ್ದಾರೆ. ಆಯಾಯ ರಾಜಮನೆನಗಳಲ್ಲಿ ಯಾವ ಧರ್ಮದ ಪ್ರಾಬಲ್ಯತೆ ಹೆಚ್ಚಾಗಿರುತ್ತಿತ್ತೋ ಆ ಧರ್ಮಗಳಿಗೆ ರಾಣಿಯರು ಕೊಡುಗೆಗಳನ್ನು ನೀಡಿದ್ದಾರೆ. ಹಾಗೆಂದ ಮಾತ್ರಕ್ಕೆ ಇತರ ಧರ್ಮಗಳನ್ನು ಪ್ರೋತ್ಸಾಹಿಸಿಲ್ಲವೆಂದಲ್ಲ. ಜೈನ, ಬೌದ್ಧ, ಶೈವ, ವೈಷ್ಣವ ಧರ್ಮಗಳನ್ನು ಪ್ರೋತ್ಸಾಹಿಸಿ ಬೆಳೆಸಿ ಬಸದಿ, ವಿಹಾರ, ದೇವಾಲಯಗಳನ್ನು ಸ್ಮಾರಕಗಳನ್ನು ನಿರ್ಮಿಸಿದ್ದಾರೆ.

ಈ ವಿಷಯವಾಗಿ ನಮ್ಮ ನಿಬಂಧದಲ್ಲಿ ಒಂದು ಉಪ ಅಧ್ಯಾಯವನ್ನಾಗಿ ಅಭ್ಯಸಿಸಲಾಗಿದೆ. ಗಂಗರ ಕಾಲದಲ್ಲಿ ಜೈನ ಧರ್ಮ, ಚಾಲುಕ್ಯ, ರಾಷ್ಟ್ರಕೂಟ, ಹೊಯ್ಸಳರ ಕಾಲದಲ್ಲಿ ಶೈವ ಮತ್ತು ವೈಷ್ಣವ ಧರ್ಮಗಳು ವಿಜಯನಗರ ಕಾಲದಲ್ಲಿ ಶೈವ ಮತ್ತು ವೈಷ್ಣವ ಧರ್ಮಗಳೆರಡೂ ಪ್ರಾಬಲ್ಯವಾಗಿದ್ದವೋ ಆದರೂ ಸಹ ಧರ್ಮಗಳ ನಡುವೆ ಸಮಸ್ಯೆಯತೆ ಇತ್ತು ಎಂಬುದಕ್ಕೆ ರಾಜನೊಂದು ಧರ್ಮವನ್ನು ಪ್ರೊತ್ಸಾಹಿಸಿದರೆ ರಾಣಿಯರೇ ಒಂದು ಧರ್ಮವನ್ನು ಪ್ರೋತ್ಸಾಹಿಸುತ್ತಿದ್ದರು. ಅನ್ಯ ಧರ್ಮಗಳನ್ನು ಗೌರವದಿಂದ ಕಾಣುತ್ತಿದ್ದರು. ಉದಾ: ಹೊಯ್ಸಳರ ಕಾಲದಲ್ಲಿ ವಿಷ್ಣುವರ್ಧನ ನಂತರದಲ್ಲಿ ವೈಷ್ಣವ ಧರ್ಮಿಯನಾದರೂ ಇದ್ದು ಜೈನಧರ್ಮವನ್ನು

ಪೋಷಿಸಿ ಬೆಳೆಸಿದ್ದನ್ನು ನೆನಪಿಸಿಕೊಳ್ಳಬಹುದು. ಈ ಬಗ್ಗೆ ಅಧ್ಯಯನದಲ್ಲಿ ಚರ್ಚಿಸಲಾಗಿದೆ. ಧಾರ್ಮಿಕ ಪರಿಸರದ ಪೋಷಣೆಗಳಿಂದಾಗಿ ಸಾಕಷ್ಟು ದೇವಾಲಯಗಳು ಸ್ಮಾರಕಗಳು ನಿರ್ಮಾಣವಾದ ಬಗ್ಗೆ ಪ್ರತ್ಯೇಕ ಅಧ್ಯಾಯವೊಂದರಲ್ಲಿಯೇ ಚರ್ಚಿಸಲಾಗಿದೆ. ವಿಜಯನಗದ ಕಾಲದಲ್ಲಿ ಹಿಂದೂ ಧರ್ಮದ ಉಳಿವಿಗಾಗಿ ಹಲವಾರು ಸ್ಮಾರಕಗಳು ಧಾರ್ಮಿಕ ಹಿನ್ನೆಲೆಯಲ್ಲಿ ಸ್ಥಾಪನೆಯಾಗಿರುವುದು ಮತ್ತೊಂದು ಗಮನಾರ್ಹವಾದ ವಿಷಯ.

ಸಾಮಾಜಿಕವಾಗಿಯೇ ಸಮಾಜದ ಘಟಕವಾಗಿ ಗುರ್ತಿಸಿಕೊಂಡ ರಾಣಿಯರು ಸಮಾಜದ ಶ್ರೇಯೋಭಿವೃದ್ಧಿಗೆ ಮನಪೂರ್ವಕವಾಗಿ ಶ್ರಮಿಸಿದ್ದಾರೆ. ವಿದ್ಯಾಭ್ಯಾಸದ ರಂಗದಲ್ಲಿ ಆಸಕ್ತಿ ಹೊಂದಿದ್ದ ರಾಣಿಯರು ಸಾಹಿತ್ಯ ರಚನೆಗಳಲ್ಲಿಯೂ ಕೈಹಾಕಿರುವುದು ಸ್ಪಷ್ಟವಾಗಿದೆ. ಕ್ರಿ.ಶ. 3–4ನೇ ಶತಮಾನಗಳಲ್ಲಿ ವಿದ್ಯಾಭ್ಯಾಸದಿಂದ ವಂಚನೆಗೊಳಗಾದ ಸ್ತ್ರೀಯರು ಪ್ರಾರಂಭದಲ್ಲಿ ವಿದ್ಯಾಭ್ಯಾಸಕ್ಕೆ ಅನರ್ಹರು ಎಂಬ ಭಾವನೆ ಬಂದಿದ್ದು ಕನ್ನಡ ಶಾಸನಗಳಲ್ಲಿ ಯಾವುದೇ ಮಹಿಳಾ ವಿದ್ಯಾರ್ಥಿನಿಯರ ಹೆಸರಾಗಲೀ ಪಂಡಿತೆಯ ಹೆಸರಾಗಲೀ ದಾಖಲಾಗದೇ ಇರುವುದು ಪುಷ್ಟಿನೀಡುತ್ತಿತ್ತು. ಆದರೆ ರಾಜಮನೆತನದ ಸ್ತ್ರೀಯರೆನಿಸಿದವರು ತಕ್ಕಮಟ್ಟಿಗೆ ವಿದ್ಯಾಬ್ಯಾಸವನ್ನು ಪಡೆದು ವಿದ್ಯಾವತಿಯರಾಗುತ್ತಿದ್ದರು. ಓದು–ಬರಹದ ಅಧ್ಯಯನಕ್ಕಿಂತಲೂ ಸಂಗೀತ, ನರ್ತನ, ಮೂಲೆಕಟಟುವಿಕೆಯಂತಹ ಅವಕಾಶಗಳ ಕಡೆ ವಾಲುತ್ತಿದ್ದರು. ಕ್ರಿ.ಶ. 900ರ ಶಾಸನವೊಂದರಲ್ಲಿ 'ಸಾವಿನಿರ್ಮಡಿ' 'ಸರ್ವಶಾಸ್ತ್ರಸಿದ್ದಿ' ಯಾಗಿದ್ದಳೆಂಬ ಉಲ್ಲೇಖ ದೊರೆತಿದೆ. ನಂತರದಲ್ಲಿ ಬರುವ ರಾಣಿಯರುಗಳು ವಿವಿಧ ಭಾಷೆಗಳಲ್ಲಿ ಪಾಂಡಿತ್ಯವನ್ನು ಪಡೆದಿರುತ್ತಿದ್ದರು. ಎಂಬುದನ್ನು ಅಧ್ಯಯನದಿಂದ ತಿಳಿದು ಬರುತ್ತದೆ.

'ಅತಿಚತುರೋಕ್ತಿಯೊಳೆ ಸರಸ್ವತಿಗಂ ಮಿಗಿಲ್ ಪುಣ್ಯಕಥನ ಪುರಾಣ ಪ್ರಸಂಗೆ ಪ್ರತಿಭಾ ಸರಸ್ವತಿ ವಿವೇಕ ನಮೂನೆ ಎಂಬ ಬಿರುದುಗಳನ್ನು ರಾಜ ಮನೆತನಗಳ ಕೆಲವು ರಾಣಿಯರು ಪಡೆದಿದ್ದು ಚಾಲುಕ್ಯರ ಚಂದ್ರಾದಿತ್ಯನ ಮಡದಿ, ಇಮ್ಮಡಿ ಪುಲಿಕೇಶಿಯ ಸೊಸೆಯಾದ ವಿಜಯ ಭಟ್ಟಾರಿಕೆ 'ಕ್ಮುದಿಮಹೋತ್ಸವ' ಸಂಗಮರ ಗಂಗಾದೇವಿಯ 'ಮಧುರವಿಜಯ' ಕೃಷ್ಣದೇವರಾಯನ 3ನೇ ರಾಣಿಯಾದ ಜಗನ್ಮೋಹಿನಿ 'ತುಕ್ಕಾ ಪಚಕಂ / ಭೃಂಗ ಪಂಚಕಂ' ಎಂಬ ಸಾಹಿತ್ಯ ಕೃತಿಗಳ ರಚನೆಯನ್ನು ಮಾಡಿ ಹೆಸರಾಂತ ಕವಿ ಮಹಾಶಯರುಗಳಿಗೆ ಸವಲೊಡ್ಡಿದಂತಹ ಸನ್ನಿವೇಶಗಳು ಸಹ ರಾಣಿಯರ ವಿದ್ವತ್ತಿನ ಮೇಲೆ ಬೆಳಕು ಚೆಲ್ಲುತ್ತದೆ. ಒಟ್ಟಾರೆಯಾಗಿ ಈವರೆಗೆ ಬೆಳಕಿಗೆ ಬಾರದ ಅನೇಕ

ಸಂಗತಿಗಳನ್ನು ಮೂಲವನ್ನು ಅನೇಕ ಸ್ಪಷ್ಟ ಮಾಹಿತಿಯ ಮೂಲಕ ಗುರುತಿಸಲಾಗಿದೆ. ಕರ್ನಾಟಕದ ಸಂಸ್ಕೃತಿಯ ಸರ್ವತೋಮುಖ ಅಭಿವೃದ್ಧಿಗೆ ಈ ಮೂಲಕ ರಾಣಿಯರು ನೀಡಿದ ಸಂಗತಿಗಳು ಕಾಣಸಿಗುತ್ತವೆ. ಪ್ರಜಾಕಲ್ಯಾಣಕ್ಕಾಗಿ ಕೆರೆ, ಕಾಲುವೆ, ದೇವಾಲಯಗಳ ನಿರ್ಮಾಣ ದಾನ, ದತ್ತಿ, ಇತ್ಯಾದಿ ವಿವಿಧ ಕ್ಷೇತ್ರಗಳಲ್ಲಿ ಪ್ರಾಚೀನ ಕರ್ನಾಟಕದ ರಾಣಿಯರು ವಹಿಸಿದ ಪಾತ್ರವನ್ನು ಇಲ್ಲಿ ಅವಲೋಕಿಸಲಾಗಿದೆ.

ಕೆಲವು ರಾಣಿಯರು ಅಂದಿನ ವೈಭವದ ಜೀವನವನ್ನು ಅವಕಾಶಗಳನ್ನು ಕೇವಲ ಅಂತಪುರದ ಜೀವನಕ್ಕೆ ತಮ್ಮನ್ನು ಸೀಮಿತಗೊಳಿಸಿಕೊಂಡು ಅರಸರ ಬೆನ್ನಲುಬುಗಳಾಗಿ ಹಾಗೂ ರಾಜಪುತ್ರರ ಶ್ರೇಯಸ್ಸಿಗಾಗಿ ಶ್ರಮಿಸಿರುವುದು ಹೆಚ್ಚಿನದಾಗಿದೆ. ವಿಜಯನಗರದ ಕಾಲದಲ್ಲಿ ತಿಪ್ಪಾಂಬೆ ಮತ್ತು ಓಬಾಂಬೆಯವರುಗಳನ್ನು ನಿದರ್ಶನಗಳಾಗಿ ನೀಡಿದರೆ ಪ್ರಾಚೀನ ರಾಜಮನೆತನಗಳಲ್ಲಿ ತುಸು ಹೆಚ್ಚಿನ ಸಂಖ್ಯೆಯಲ್ಲೇ ದೊರೆಯುತ್ತಾರೆ ಮತ್ತೆ ಕೆಲವರಾದ ಕಕುಸ್ಥವರ್ಮನ ಮಗಳಾದ ಅಜಿತಭಟ್ಟಾರಿಕೆ, ಇಮ್ಮಡಿ ಪುಲಿಕೇಶಿಯ ಸೊಸೆ ವಿಜಯಭಟ್ಟಾರಿಕೆ, ಅತ್ತಿಮಬ್ಬೆ, ಜಯಸಿಂಹನ ರಾಣಿ ಸುಗ್ಗಲೆ, ಒಂದನೇ ಪುಲಿಕೇಶಿಯ ರಾಣಿ ದುರ್ಲಭಾದೇವಿ, ಆರನೇ ವಿಕ್ರಮಾದಿತ್ಯನ ರಾಣಿಯರಾದ ಲೋಕಮಹಾದೇವಿ ಮತ್ತು ತ್ರೈಲೋಕ್ಯಮದೇವಿ, ವಿಜಯಾದಿತ್ಯನ ರಾಣಿ ವಿನಾಪೋಟಿ, ಹೊಯ್ಸಳರ ರಾಣಿ ಶಾಂತಲೆ, ಬಂಮಲಾದೇವಿ, ಇಮ್ಮಡಿ ದೇವರಾಯನ ರಾಣಿಯರಾದ ಪೊನ್ನಲಾದೇವಿ, ಮತ್ತು ಭೀಮಾದೇವಿ. ಕೃಷ್ಣದೇವರಾಯನ ರಾಣಿಯರಾದ ತಿರುಮಲಾದೇವಿ, ಚಿನ್ನಾದೇವಿಯರು ಶಾಸನಗಳ ಮುಖಾಂತರ ನಮ್ಮ ಇತಿಹಾಸದ ಬೆಲೆಯುಳ್ಳ ಘಟಕಗಳಾಗಿ ಕಾಣಿಸಿಕೊಂಡಿದ್ದಾರೆ. ಈ ದೃಷ್ಟಿಯಿಂದ ರಾಣಿಯರು ನಮ್ಮ ಬಾಳಿಗೆ ಒಂದು ಶ್ರೀಮಂತ ಪರಂಪರೆಯ ಕೊಂಡಿಗಳಾಗಿ ಕಂಡುಬರುತ್ತಾರೆ.

ಮತ್ತೊಂದು ಪ್ರಮುಖವಾಗಿ ಕಂಡುಬರುವ ವಿಚಾರವೆಂದರೆ, ರಾಜರುಗಳು ವಿವಾಹವಾದ ಮಹಿಳೆಯರು ಅಂದರೆ ರಾಣಿಯರುಗಳೆಲ್ಲರೂ, ಹೆಚ್ಚಾಗಿ ರಾಜಕುಟುಂಬಕ್ಕೆ ಸೇರಿದವರಲ್ಲ. 'ರಾಜನೋ ಬಹುವಲ್ಲಭಾ' ಎಂಬುದಕ್ಕೆ ಅವನ ಬಹುಪತ್ನಿಯರೇ ಉದಾಹರಣೆಗಳು. ರಾಜ ತಾನು ಮೋಹಿಸಿದ ಹೆಣ್ಣುಗಳನ್ನು ವಿವಾಹವಾಗುತ್ತಿದ್ದನು. ಉಚ್ಚವರ್ಗದವರುಗಳೇ ಅಲ್ಲದೆ ಕೆಳವರ್ಗದವರನ್ನು ಸಹ ವಿವಾಹವಾಗುತ್ತಿದ್ದನು. ಬಾದಾಮಿ ಚಾಲುಕ್ಯರ ವಿಜಯಾದಿತ್ಯ ಸೂಳೆಯರ ವಿನಾಪೋಟಿಯನ್ನು ವಿವಾಹವಾಗಿದ್ದನು? ಅವಳು ವಿಜಯಾದಿತ್ಯನ ಪ್ರಾಣವಲ್ಲಭೆಯಾಗಿದ್ದಳು ಎಂಬುದಕ್ಕೆ ಶಾಸನಾಧಾರಗಳು ಇವೆ. ಕೆಲವೊಮ್ಮೆ ದಂಡನಾಯಕರ ಸಾಮಂತರ, ಪ್ರಧಾನಮಂತ್ರಿಗಳು,

ಅಧಿಕಾರಿಗಳ, ಹೆಣ್ಣು ಮಕ್ಕಳನ್ನು ವಿವಾಹವಾಗುತ್ತಿದ್ದರು. ವಿಜಯನಗರದಲ್ಲಿ ಶ್ರೀಕೃಷ್ಣದೇವರಾಯನ ರಾಣಿಯರಾದ ನಾಗಲಾದೇವಿ, ಚಿನ್ನಾದೇವಿ ಮತ್ತು ಓದುವ ತಿರುಮಲಮ್ಮನವರ ಮೂಲದ ಬಗ್ಗೆ ಆಕರಗಳ ಕೊರತೆಯಿಂದ ಇಲ್ಲಿ ಗ್ರಹಿಸಬಹುದು.

ರಾಣಿಯರು ಆರ್ಥಿಕವಾಗಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ ಸ್ವತಂತ್ರರಾಗಿದ್ದು ತಮ್ಮ ಸಾಮರ್ಥ್ಯಕ್ಕೆ ತಕ್ಕಂತೆ ದತ್ತಿ, ದಾನ ಮಾಡಿದ್ದು ಉಲ್ಲೇಖನಾರ್ಹ. ತಮ್ಮ ಸಾಮರ್ಥ್ಯಕ್ಕೆ ತಕ್ಕಂತೆ ಅನೇಕ ದೇವಾಲಯಗಳ ನಿರ್ಮಾಣಕ್ಕೆ ಕೊಡುಗೆಗಳನ್ನು ನೀಡಿದ್ದಾರೆ. ಆ ಮೂಲಕ ಸರ್ವತೋಮುಖ ಅಭಿವೃದ್ಧಿಗೆ ಶ್ರಮಿಸಿದ್ದಾರೆ. ದೇವರ ಹೆಸರಿನಲ್ಲಿ ನಿರ್ಮಿಸಿದ ದೇವಾಲಯಗಳ ಒಳಿತಿಗಾಗಿ ಕೈಗೊಂಡ ತೀರ್ಥಯಾತ್ರೆಗಳು ಇಲ್ಲಿ ಮಹತ್ವಪಡೆದಿದೆ. ಈ ರೀತಿ ಯಾತ್ರೆ, ತೀರ್ಥಯಾತ್ರೆಗಳು ಇಲ್ಲಿ ಮಹತ್ವ ಪಡೆದಿವೆ. ಈ ರೀತಿ ಯಾತ್ರೆ, ತೀರ್ಥಯಾತ್ರೆ, ದಾನ, ದತ್ತಿ ನೀಡುವ ಉದ್ದೇಶವನ್ನು ಕುರಿತು ಶಾಸನಗಳು ಸಾಹಿತ್ಯಗಳು ವಿವರಣೆಯನ್ನು ನೀಡಿ ಪುಷ್ಟೀಕರಿಸಿವೆ. ಚಕ್ರವರ್ತಿಗಳೊಂದಿಗೆ ರಾಣಿಯರು ಹಲವಾರು ದೇವಾಲಯಗಳನ್ನು ನಿರ್ಮಿಸಿ ದಾನದತ್ತಿ ನೀಡುತ್ತಿದ್ದರೆಂಬ ಸಂಗತಿಯನ್ನು ಪರಿಗಣಿಸುವುದು ಔಚಿತ್ಯವಾಗಿ ಕಂಡುಬರುತ್ತದೆ.

ರಾಣಿಯರು ತಮ್ಮ ತಮ್ಮ ಕರ್ತವ್ಯಗಳನ್ನು ಹಕ್ಕು ಬಾದ್ಯತೆಗಳ ಬಗ್ಗೆ ಕೆಲವು ಕೃತಿಗಳಲ್ಲಿ ಉಲ್ಲೇಖವಿದ್ದು ತಮ್ಮ ತಮ್ಮ ಪುತ್ರ ಶ್ರೇಯೋಭಿವೃದ್ಧಿಗಾಗಿ ಸಾಮ್ರಾಜ್ಯದಲ್ಲಿ ಕ್ಲಿಷ್ಟಕರವಾದ ವಾತಾವರಣವು ಉಂಟಾಗುತ್ತಿತ್ತೆಂದು ಕಂಡು ಬಂದರೆ ಸವತಿ ಮತ್ಸರ ಇದ್ದ ಬಗ್ಗೆ ಆಧಾರಗಳಿಲ್ಲ. ಹೊಯ್ಸಳರ ಕಾಲದಲ್ಲಿ ಶಾಂತಲೆ, ಶ್ರವಣಬೆಳಗೊಳದಲ್ಲಿ 'ಸವತಿ ಗಂಧವಾರಣಿ' ಬಸದಿಯನ್ನು ನಿರ್ಮಾಣ ಮಾಡಿರುವುದು ಇದು ಉಲ್ಲೇಖನಾರ್ಹವಾದುದ್ದಾಗಿದೆ. ಆದರೆ ತಮ್ಮ ಮಕ್ಕಳು ಯುವರಾಜರಾಗಬೇಕೆಂದು ಹಂಬಲಿಸುತ್ತಿದ್ದ ವಿಚಾರ ಪ್ರಮುಖವಾದುದ್ದಾಗಿದೆ.

ರಾಣಿಯರು ಸಾಮಾನ್ಯ ಮಹಿಳೆಯರುಗಳೊಂದಿಗೆ ಅವಿನಾಭಾವ ಸಂಬಂಧ ಹೊಂದಿದ್ದರು. ಆದರೂ ಸಹ ಸಾಮಾನ್ಯ ಮಹಿಳೆಯರ ಪಾತ್ರ ವಿಶೇಷವೇನೂ ಆಗಿರಲಿಲ್ಲ. ಕುಟುಂಬ ವ್ಯವಸ್ಥೆ, ಆಚಾರ–ವಿಚಾರಗಳಲ್ಲಿ, ಆಹಾರ, ಆಭರಣ ಇತ್ಯಾದಿಗಳಲ್ಲಿ ಪರಸ್ಪರ ವಿನಿಮಯ ಲಕ್ಷಣಗಳಿದ್ದವು. ಆದರೂ ಸಹ ಅರಸನ ರಾಣಿಯರು ಉನ್ನತ ಮಟ್ಟದಲ್ಲಿಯೇ ಕಾಣಿಸಿಕೊಳ್ಳುತ್ತಿದ್ದರು. ರಾಣಿಯರ ವೈಭವ ಜನಸಾಮಾನ್ಯರಿಗಿಂತ ಉನ್ನತ ಮಟ್ಟದಲ್ಲಿತ್ತು. ಅರಸರೂ ಸಹ ರಾಣಿಯರಿಗೆ ನೀಡಿದ ಸ್ಥಾನ–ಮಾನ ದೊಡ್ಡದು. ಇಲ್ಲಿ ಅರಸರು ತಮ್ಮ ತಾಯಿಯರ ಬಗ್ಗೆ ರಾಣಿಯರ ಬಗ್ಗೆ ಇದ್ದ ಪ್ರೀತಿಯನ್ನು

ಗೌರವಗಳನ್ನು ಸ್ಮಾರಕ, ಭವನ, ನಗರ ಪಟ್ಟಣಗಳನ್ನು ನಿರ್ಮಿಸುವುದರೊಂದಿಗೆ ಅನನ್ಯತೆಯನ್ನು ಮೆರೆದಿರುವುದು ಶ್ಲಾಘನೀಯವಾಗಿದೆ.

ಒಟ್ಟಾರೆ ಹೇಳುವುದಾದರೆ, ಪ್ರಾಚೀನ ಕರ್ನಾಟಕದ ಭವ್ಯ ಸಂಸ್ಕೃತಿಗೆ ರಾಜ ಮನೆತನಗಳ ರಾಣಿಯರ ಪಾತ್ರ ಅಮೋಘ, ಅನನ್ಯ ರಾಣಿಯರ ಪ್ರೋತ್ಸಾಹ, ಬೆಂಬಲಗಳಿಂದ ರಾಜ್ಯ ವಿಸ್ತರಿಸಿದ್ದು, ನೆರೆ–ಹೊರೆಯ ರಾಜ್ಯಗಳೊಂದಿಗೆ ಅವಿನಾಭಾವ ಸಂಬಂಧ ಹೊಂದಲು ಕಾರಣರಾದ ರಾಣಿಯರು ಇಂದಿನ ಸಮಾಜಕ್ಕೆ ಆದರ್ಶಶೀಲರು. ಇವರುಗಳ ಸೇವೆಯೂ ಔಚಿತ್ಯಪೂರ್ಣವಾಗಿದೆ. ಹೀಗೆ ರಾಣಿಯರು ಮಹತ್ವಪೂರ್ಣ ಇತಿಹಾಸವನ್ನು ನೋಡಿದಾಗ್ಯೂ ಅವರ ಅಸ್ತಿತ್ವವನ್ನು ಗಮನಿಸಿದರೆ ಇಂದಿನ ಆಧುನಿಕ ಸಮಾಜದಲ್ಲಿ ಇರುವಂತಹ ಲಿಂಗಸಂಬಂಧೀ ತಾರತಮ್ಯಗಳು ಅಂದು ಅಸ್ತಿತ್ವದಲ್ಲಿದ್ದುದು ಅರಿವಾಗುತ್ತದೆ. ಆದಾಗ್ಯೂ ಅವಕಾಶಗಳು ದೊರೆತಾಗ ಮತ್ತು ಕಾರ್ಯಬಲದಿಂದ, ಸ್ಥಾನಬಲದಿಂದ ಸಾಮಾಜಿಕ, ಧಾರ್ಮಿಕ, ರಾಜಕೀಯ ಕ್ಷೇತ್ರಗಳಲ್ಲಿ ತಮ್ಮ ಬಲಕ್ಕೆ ಅನುಗುಣವಾಗಿ ಕೊಡುಗೆಗಳನ್ನು ನೀಡುವುದರ ಮೂಲಕ ಸಮಾಜದಲ್ಲಿ ಗುರುತಿಸಿಕೊಳ್ಳುವ ಪ್ರಯತ್ನ ಮಾಡಿದ್ದಾರೆ.

ಮಹಿಳಾ ಅಧ್ಯಯನಗಳು ಕೇವಲ ಆಕರಗಳ ಪರಿಶೀಲನೆ, ದಾಖಲೀಕರಣ ಮತ್ತು ಕೆಲ ಐತಿಹಾಸಿಕ ರಾಣಿಯರಾದ ನೂರುಜಹಾನ್, ಚಾಂದ್‌ಬೀಬಿ, ರಾಣಿ ದುರ್ಗಾವತಿ, ಅಕ್ಕಾದೇವಿ, ಉಮಾದೇವಿ ಮುಂತಾದವರ ವಿಮರ್ಶಾತ್ಮಕ ಮತ್ತು ಕೂಲಂಕುಷ ಅಧ್ಯಯನಕ್ಕೆ ಮಾತ್ರ ಸೀಮಿತವಾಗಿದೆ. ಇತಿಹಾಸದಲ್ಲಿ ತನ್ನ ತನದಿಂದ ಬಾಳಿ ಬದುಕಿದ, ಬಾಳಲಾರದ ಅನೇಕಾನೇಕ ಹರವುಗಳನ್ನು ಮಹಿಳಾ ಅಧ್ಯಯನದ ವ್ಯಾಪ್ತಿಗೆ ಸೇರಿಸಿ ಅಳವಡಿಸಿಕೊಳ್ಳಬೇಕಾಗಿದೆ. ಇದು ಭಾರತೀಯ ಇತಿಹಾಸದ ಬಹುಮುಖ್ಯ ನ್ಯೂನ್ಯತೆಯಾಗಿದೆ. ಮಹಿಳಾ ಅಧ್ಯಯನದ ಇತಿಹಾಸಕಾರರು, ಸಂಶೋಧಕನ ಪ್ರಾಚೀನ ಮತ್ತು ಆದುನಿಕ ಯುಗದಲ್ಲಿ ಸ್ತ್ರೀ ಸಮಾಜ ವ್ಯವಸ್ತೆ ಗುರುತಿಸುವ ಪ್ರಯತ್ನ ಮಾಡಿದರೂ, ಮಧ್ಯಯುಗದಲ್ಲಿ ಸ್ತ್ರೀಯರ ಸ್ಥಾನಮಾನ ಭಾವನೆ, ದುಗುಡ, ನಂಬಿಕೆ, ರೂಢಿ ಪರಂಪರೆಗಳ ಬಗ್ಗೆ ತರ್ಕಬದ್ಧವಾಗಿ ಪರಿಶೀಲಿಸುವ ಅಗತ್ಯವಿದೆ. ರಾಬಿನ್ಸ್ ವಿಂಕ್ಸನ್ ಪ್ರಕಾರ **“**History is minimally three things’ what happened in the past, what people believe happened in the past, and what historians say happened in the past. Historiography is largely about the second and third of these definitions of history” ಈ ಮಾತು ಮಹಿಳಾ ಅಧ್ಯಯನದ ಇತಿಹಾಸಕ್ಕೂ ಅನ್ವಯಿಸುತ್ತದೆ.

Status of women in historical period has three things what was actually the status of women in the past, what people believed about the status of women and what historians say about the status of women in the past. Status of women in history is largely about the second and third of the above (Robin, W. winks (ed.) Historiography, oxford, 199, preface) ಎಂದು ಹೇಳುತ್ತಾ,

ಈ ಸಂಶೋಧನೆ ಪ್ರಾಚೀನ ಕರ್ನಾಟಕದ ಅರಸು ಮನೆತನಗಳಲ್ಲಿ ಭಾಗವಾಗಿದ್ದ ರಾಣಿಯರ ಬಗೆಗಿನ ಅನಾವರಣವಾಗಿದೆ. ಇವರ ಬಗ್ಗೆ ಈ ಹಿಂದೆ ಅಧ್ಯಯನಗಳಾಗಿರುವುದು ವಿರಳ ಆಗಿದ್ದರೂ ಸೂಕ್ಷ್ಮ ಮತ್ತು ಸಮಗ್ರ ಅಧ್ಯಯನಗಳಾಗಿರಲಿಲ್ಲ. ಆದುದ್ದರಿಂದ ಪ್ರಸ್ತುತ ಅಧ್ಯಯನ ರಾಣಿಯರ ಬಹುಮುಖ ಆಯಾಮಗಳನ್ನು ದಾಖಲಿಸುವ ಮತ್ತು ತೌಲನಿಕವಾಗಿ ವಿವೇಚಿಸುವ ವಸ್ತುನಿಷ್ಠ ಪ್ರಯತ್ನವಾಗಿದೆ.

# ಪರಾಮರ್ಶನ ಗ್ರಂಥಗಳು


**ಪುರಾತತ್ವ ವರದಿಗಳು ಮತ್ತು ಶಾಸನ ಸಂಪುಟಗಳು / ಪ್ರಾಥಮಿಕ ಆಕರಗಳು**

1) Apigraphiya (Karnataka (Revised) - I –x . vols.B.R. Gopal, Mysore.
2) Bombey Karnataka Inscriptions - Part -1 - 2
3) Epgraphia Indica - 1 to XXII
4) Epigraphia Carnatica - (Rice Volumes0 1 to XVI
5) Indian Antiquary - vols, 1 to XXII
6) K.V.Ramesha (Ed) Inscriptions of western Gangas. New Delhi. 1984.
7) Karnataka Inscriptions - Vols. I to V
8) Mysore Archaeological Reports - 1901 to 1946.
9) South Indian Inscriptions - vols I to XX


**ಕ್ಷೇತ್ರಕಾರ್ಯ**

1) ಅರಸೀಕೆರೆ – 13–06–2010
2) ಬಾದಾಮಿ – 28–08–2010
3) ಬೇಲೂರು – 27–11–2010
4) ಹಂಪಿ – 21–11–2010 ಮತ್ತು 27–11–2010
5) ಹಳೆಬೀಡು – 2–09–2010
6) ಐಹೊಳೆ – 30–08–2010
7) ಸೋಮನಾಥಪುರ – 27–11–2010 ಮತ್ತು 13–01–2011
8) ಶಿವಗಂಗೆ – 07–06–2010, 13–07–2010 ಮತ್ತು 30–12–2011
9) ಶ್ರವಣ ಬೆಳಗೊಳ – 10–06–2010
10) ತಲಕಾಡು – 26–11–2010, 29–12–2010 ಮತ್ತು 30–12–2010
11) ಪಟ್ಟದಕಲ್ಲು – 29–08–2010

## ಪ್ರಕಟಿತ ಮತ್ತು ಅಪ್ರಕಟಿತ ಪಿಹೆಚ್.ಡಿ ಮಹಾಪ್ರಬಂಧಗಳು


1) ಡಾ. ಚಿಕ್ಕಣ್ಣ ಯಣ್ಣೇಕಟ್ಟೆ – ***ಸಾಳ್ವ ಭಾರತ ಒಂದು ಚಾರಿತ್ರಿಕ ಅಧ್ಯಯನ,*** (ಪ್ರಕಟಿತ) ಬೆಂಗಳೂರು ವಿಶ್ವವಿದ್ಯಾಲಯ, ಕನ್ನಡ ಸಾಹಿತ್ಯ ಪರಿಷತ್ತು, 2011.

2) ಡಾ. ಚಿದಾನಂದ ಮೂರ್ತಿ – ***ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ,*** (ಪ್ರಕಟಿತ) ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, 1965.

3) ಡಾ. ಚನ್ನಕ್ಕ ಪಾವಟೆ – ***ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ,*** (ಪ್ರಕಟಿತ) ಕರ್ನಾಟಕ ವಿಶ್ವವಿದ್ಯಾಲಯ ಪ್ರಸಾರಾಂಗ, ಧಾರವಾಡ, 1999.

4) ಕರುಣಾ ಮಂಗಳ ವೇಡೆ – ***ಕರ್ನಾಟಕದ ದೇವಾಲಯಗಳಲ್ಲಿ ರಂಗಭೋಗ,*** (ಅಪ್ರಕಟಿತ), ಹಂಪಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2001.

5) ಡಾ. ಎನ್. ಸರಸ್ವತಿ – ***Position of Women during Vijayanagara Period,*** (Published), Saraswathi Publication, Mysore, 1992.

6) ಡಾ. ಕೆ. ಸತೀಶ – ***ವಿಜಯನಗರ ಕಾಲದ ಶೈವ ದೇವಾಲಯಗಳು***, (ಪ್ರಕಟಿತ), ಕನ್ನಡ ವಿಶ್ವವಿದ್ಯಾಲಯ, ಹಂಪಿ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, 2008.

7) ಡಾ. ಸಿ.ಆರ್. ಶ್ಯಾಮಲ – ***ಪೂರ್ವ ಕರ್ನಾಟಕದ ಪಾಳೆಯಗಾರರು ಒಂದು ಅಧ್ಯಯನ,*** (ಪ್ರಕಟಿತ) ಮುಂಬೈ ವಿಶ್ವವಿದ್ಯಾಲಯ, ಕನ್ನಡ ಸಾಹಿತ್ಯ ಪರಿಷತ್ತು, 2008.

8) ಡಾ. ಕೆ. ವಸಂತ ಲಕ್ಷ್ಮಿ – ***ಹಾಸನ ಜಿಲ್ಲೆಯ ಹೊಯ್ಸಳರ ಬಸದಿಗಳು,*** (ಪ್ರಕಟಿತ) ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, 2006.

9) ಶ್ರೀ ವೀರೇಶ್ ಎನ್.ಎಸ್ – ***ಶಾಸನ ಮತ್ತು ಕನ್ನಡ ಸಾಹಿತ್ಯ ಕೃತಿಗಳಲ್ಲಿ ಹಂಪಿ ಪರಿಸರದ ವೀರಶೈವ ಧರ್ಮ,*** (ಅಪ್ರಕಟಿತ), ಕನ್ನಡ ವಿಶ್ವವಿದ್ಯಾಲಯ, ಹಂಪಿ (2012).

10) ಡಾ.ಎಸ್.ಆರ್, ವಿಘ್ನರಾಜ – ***ಕರ್ನಾಟಕದ ಸಂಸ್ಕೃತಿ ಜೈನಕವಿಗಳು,*** (ಪ್ರಕಟಿತ) ಮಂಗಳೂರು ವಿಶ್ವವಿದ್ಯಾಲಯ, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು, 2008.

## ವಿಶ್ವಕೋಶಗಳು

1. ಕನ್ನಡ ವಿಷಯ ವಿಶ್ವಕೋಶ, (ಭಾಗ–1 ಮತ್ತು ಭಾಗ–2) ***ಕನ್ನಡ ಅಧ್ಯಯನ ಸಂಸ್ಥೆ,*** ಮೈಸೂರು ವಿಶ್ವವಿದ್ಯಾಲಯ, ಮೈಸೂರು. 1975,
2. ಕರ್ನಾಟಕ ರಾಜ್ಯ ಗ್ಯಾಸೆಟಿಯರ್, (ಭಾಗ–1) ***ಕರ್ನಾಟಕ ರಾಜ್ಯ ಸರ್ಕಾರದ ಪ್ರಕಟಣೆ,***1984.
3. ಕರ್ನಾಟಕ ರಾಜ್ಯ ಗ್ಯಾಸೆಟಿಯರ್, (ಭಾಗ–2) ***ಕರ್ನಾಟಕ ರಾಜ್ಯ ಸರ್ಕಾರದ ಪ್ರಕಟಣೆ.*** 1985.
4. ಜ್ಞಾನಗಂಗೋತ್ರಿ, ಕಿರಿಯ ವಿಶ್ವಕೋಶ, (ಸಂ–5) ***ಕಲೆ ಸಾಹಿತ್ಯ,*** ಕರ್ನಾಟಕ ಸಹಕಾರಿ ಪ್ರಕಾಶನ ಮಂದಿರ, ಬೆಂಗಳೂರು. 1973.
5. ಡಾ.ಹಾ.ಮಾ. ನಾಯಕ, (ಸಂ) ***ಕರ್ನಾಟಕ ಕನ್ನಡ ವಿಷಯ ವಿಶ್ವಕೋಶ,*** ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು. 1979.

## ಶಾಸನ ಗ್ರಂಥಗಳು

1. ಎ.ಎಂ. ಅಣ್ಣಿಗೇರಿ, ಡಾ.ಆರ್.ಶೇಷಶಾಸ್ತ್ರಿ, (ಸಂ), - ***ಶಾಸನ ಸಂಗ್ರಹ,*** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು. 2007.

2. ಚನ್ನಬಸಪ್ಪ, ಎಸ್. ಪಾಟೀಲ, ವಿನೋಧ ಪಾಟೀಲ - ***ವಿಜಯನಗರದ ಶಾಸನಗಳು,*** ಪ್ರಾಚ್ಯವಸ್ತ ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು. 1996.

3. ಚನ್ನಬಸಪ್ಪ ಎಸ್. ಪಾಟೀಲ, ವಿನೋದ ಪಾಟೀಲ - ***ಬಳ್ಳಾರಿ ಜಿಲ್ಲೆಯ ಶಾಸನಗಳು,*** ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು. 1997.

4. ಡಾ.ಎಂ. ಚಿದಾನಂದ ಮೂರ್ತಿ - ***ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ,*** ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ. ಮೈಸೂರು, 1966,

5. ಡಾ. ಚೆನ್ನಕ್ಕ ಪಾವಟೆ - ***ಶಾಸನ ಸಂಜೀವಿನಿ,*** ಚೆನ್ನಗಂಗ ಪ್ರಕಾಶನ, ಧಾರವಾಡ. 2003.

6. ಡಾ. ಜಮುನ. ಎಂ - **ಬೆಂಗಳೂರಿನ ಬಖೈರುಗಳು** ಬೆಂಗಳೂರು, 2006.

7. ದಿವಾಕಾರ್ ಆರ್.ಆರ್ - **ಕರ್ನಾಟಕ ಪರಂಪರೆ (ಸಂ–1)** ಮೈಸೂರು ರಾಜ್ಯಸರ್ಕಾರ, ಬೆಂಗಳೂರು–1970.

8. ಡಾ. ದೇವರ ಕೊಂಡಾರೆಡ್ಡಿ, ಶ್ರೀ ಕಲವೀರ ಮನ್ವಾಚಾರ್, ಡಾ.ಕೆ.ಜಿ. ಭಟ್‌ಸೂರಿ, ಡಾ.ಡಿ.ವಿ. ಪರಶಿವಮೂರ್ತಿ - ***ಕನ್ನಡ ವಿಶ್ವವಿದ್ಯಾಲಯ ಶಾಸನ ಸಂ.1,*** ಬಳ್ಳಾರಿ ಜಿಲ್ಲೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 1998.

9. ಡಾ. ದೇವರ ಕೊಂಡಾರೆಡ್ಡಿ - ***ಕನ್ನಡ ವಿಶ್ವವಿದ್ಯಾಲಯ, ಶಾಸನ. ಸಂ–2,*** ಕೊಪ್ಪಳ ಜಿಲ್ಲೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ.1999.

10. ಡಾ. ದೇವರ ಕೊಂಡಾರೆಡ್ಡಿ - ***ಕನ್ನಡ ವಿಶ್ವವಿದ್ಯಾಲಯ* ಶಾಸನ. ಸಂ–3,**
ಕೊಪ್ಪಳ ಜಿಲ್ಲೆ, ಕನ್ನಡ ವಿಶ್ವವಿದ್ಯಾಲಯ,
ಹಂಪಿ.2000.

11. ದೇವರ ಕೊಂಡಾರೆಡ್ಡಿ - **ಶಾಸನ ಅಧ್ಯಯನ,**
ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ,
ಹಂಪಿ.2004.

12. ಆರ್.ಎನ್.ಕೃಷ್ಣಪ್ಪ - **ಶ್ರೀಶಿವಗಂಗಾ ಬೆಟ್ಟದಲ್ಲಿ ಶಾಂತಲಾದೇವಿಯ ಅಮರತ್ವ!**
ಶ್ರೀರುದ್ರಾರಾಧ್ಯರು, ನೆಲಮಂಗಲ,
ಬೆಂಗಳೂರು–1986.

13. ಡಾ.ಕೆ. ಆರ್. ಗಣೇಶ್
ಡಾ.ಆರ್. ಶೇಷಶಾಸ್ತ್ರಿ - **ಕನ್ನಡ ವಿಶ್ವವಿದ್ಯಾಲಯ, ಶಾಸನ ಸಂ–5,**
**ಆಂಧ್ರಪ್ರದೇಶ ಮತ್ತು ಕನ್ನಡ ಶಾಸನಗಳು,**
ಕನ್ನಡ ವಿಶ್ವವಿದ್ಯಾಲಯ,
ಹಂಪಿ.2001.

14. ಡಾ. ಬಾ.ರಾ. ಗೋಪಾಲ್
ಎಚ್.ಎಸ್. ಗೋಪಾಲರಾವ್
ಡಾ.ಪಿ.ವಿ. ಕೃಷ್ಣಮೂರ್ತಿ - **ಕನ್ನಡ ವಿಶ್ವವಿದ್ಯಾಲಯ, ಶಾಸನ. ಸಂ–4,**
ಕನ್ನಡ ವಿಶ್ವವಿದ್ಯಾಲಯ,
ಹಂಪಿ.2000.

15. ಡಾ.ಎಚ್.ಎಸ್. ಗೋಪಾಲರಾವ್ - ***ಶಾಸನ ಸಂಕಲನ,***
ಅಳಿಲು ಸೇವಾ ಸಂಸ್ಥೆ,
ಬೆಂಗಳೂರು. 2001.

16. ಡಾ.ಎಚ್. ಎಸ್.ಗೋಪಾಲ್‌ರಾವ್ - **ನೆಲದ ಸಿರಿ**
ಬೆಂಗಳೂರು ಗ್ರಾಮಾಂತರ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್,
ಬೆಂಗಳೂರು–1997.

17. ಡಾ.ಬಿ. ನಂಜುಂಡಸ್ವಾಮಿ - **ಶಿವಗಂಗಾ ಕ್ಷೇತ್ರ ಹಾಗೂ ವೀರಶೈವ ಮಠಗಳು**
ಸಿದ್ಧಗಂಗ ಪ್ರಕಾಶನ,
ತುಮಕೂರು, 2008.

18. ಡಾ.ಬಿ ನಂಜುಂಡಸ್ವಾಮಿ - **ದಕ್ಷಿಣಕಾಶಿ ಎನಿಸಿದ ಶಿವಗಂಗೆ ಕ್ಷೇತ್ರ ಮಹಾತ್ಮೆ**
ಟಿ.ಎಚ್.ಹೊನ್ನಗಂಗಪ್ಪ ಮೈಸೂರು, 2007.

19. ಎಂ.ಜಿ.ನಂಜುಂಡರಾಧ್ಯ - **ವೇದಕಾಲದ ಜಂಗಮರು,**
ಚಿನ್ಮೂಲಾದ್ರಿ ಚೇತನ (ಸಂ)
ಚಿತ್ರದುರ್ಗ – 1989.

20. ಆರ್.ನರಸಿಂಹಾಚಾರ್ಯ - **ಶಾಸನ ಪದ್ಯಮಂಜರಿ, (ಕ್ರಿ.ಶ. 700–1465)**
ಗುರುವಿಕಾಸ ಪ್ರಿಂಟಿಂಗ್ ವರ್ಕ್ಸ್,
ಬೆಂಗಳೂರು. 1923.

21. ಡಾ.ಎಂ.ಜಿ. ನಾಗರಾಜು - **ಸಾಂಸ್ಕೃತಿಕ ಶ್ರೀ ವೀರಭದ್ರಸ್ವಾಮಿ ಸಚಿತ್ರ**
ಶ್ರೀಮದ್ವೀರಶೈವ ಸದ್ಬೋಧನಾ ಸಂಸ್ಥೆ
ಬಾಳೆಹೊನ್ನೂರು–1999.

22. ಡಾ.ಡಿ.ವಿ. ಪರಶಿವಮೂರ್ತಿ - ***ಪ್ರೌಢ ದೇವರಾಯನ ಶಾಸನಗಳು,***
ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ,
ಹಂಪಿ. 2007.

23. ಕೈ.ಬಸವನಾಳ ಶಿವಲಿಂಗಪ್ಪ - **ಬಸವಣ್ಣನವರ ವಚನಗಳು**
ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆ
ಧಾರವಾಡ–1962.

24. ಟಿ.ಎಸ್. ಮಲ್ಲಪ್ಪ - **ವೀರಶೈವದ ಉಗಮ ಮತ್ತು ಪ್ರಗತಿ**
ಬೆಂಗಳೂರು–1969.

25. ಹನುಮಾಕ್ಷಿಗೋಗಿ - ***ಕಲ್ಬುರ್ಗಿ ಜಿಲ್ಲೆಯ ಶಾಸನಗಳು,***
ಶಿವಚಂದ್ರ ಪ್ರಕಾಶನ,
ಹುಬ್ಬಳ್ಳಿ 1996.

26. ಹಿರೇಮಠ. ಆರ್.ಸಿ. (ಸಂ) - **ಮೈಸೂರು ಪ್ರದೇಶದ ಪ್ರಕಟಿತ ಶಾಸನಗಳ ಸೂಚಿ ಮತ್ತು ಅಪ್ರಕಟಿತ ಶಾಸನಗಳ ಸೂಚಿ,**
ಕರ್ನಾಟಕ ಭಾರತಿ, ತ್ರೈಮಾಸಿಕ ಪತ್ರಿಕೆ,
ಕರ್ನಾಟಕ ವಿಶ್ವವಿದ್ಯಾಲಯ,
ಧಾರವಾಡ–1975–76.

27. ಡಾ.ಕೆ. ವಸಂತಲಕ್ಷ್ಮಿ - **ಭಾರತೀಯ ಸಂಸ್ಕೃತಿ ಮತ್ತು ಮಹಿಳೆ**
ದಿ ಮಿಥಿಕ್ ಸೊಸೈಟಿ
ಬೆಂಗಳೂರು–2009.

28. ವೆಂಕಟೇಶ ಮೂರ್ತಿ. ಆರ್ - **ಮಳೂರಿನ ಶಾಸನಗಳು ಒಂದು ಸಾಂಸ್ಕೃತಿಕ ಅಧ್ಯಯನ, 'ನಾಗಾಭಿನಂದನ'** (ಎ.ಜಿ. ನಾಗರಾಜ್‌ರವರ ಅಭಿನಂದನಾ ಗ್ರಂಥ), ಬೆಂಗಳೂರು, 1994.

29. ಕರ್ನಾಟಕ ಸರ್ಕಾರ - **ಶ್ರೀ ಶಿವಗಂಗಾ ಐತಿಹಾಸಿಕ ದಾಖಲೆಗಳು** (1816–1893) ಕರ್ನಾಟಕ ಸರ್ಕಾರ, ಕರ್ನಾಟಕ ರಾಜ್ಯ ಪತ್ರಗಾರ ನಿರ್ದೇಶನಾಲಯ, ವಿಧಾನ ಸೌಧ, ಬೆಂಗಳೂರು. 2000.

30. ಬ್ರಹ್ಮಪ್ಪ (ಸಂ) **ಶ್ರವಣಬೆಳಗೊಳದ ಶಾಸನಗಳು** ಶ್ರವಣಬೆಳಗೊಳ, 1988.

## ಕನ್ನಡ ಗ್ರಂಥಗಳು

1. ಅಪರ್ಣ ಕೂ.ಸ. - ***ದೇವಾಲಯಗಳ ವಾಸ್ತುಶಿಲ್ಪ ಪರಿಚಯ,*** ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ. ಹಂಪಿ, 1999.

2. ಆಲೂರು ವೆಂಕಟರಾಯರು - ***ಕರ್ನಾಟಕ ಗತವೈಭವ,*** ಕರ್ನಾಟಕ ಸಾಹಿತ್ಯ ಮಂದಿರ, ಧಾರವಾಡ. 1940.

3. ಡಾ. ಅಂಕನಹಳ್ಳಿ ಪಾರ್ಥ - ***ರಾಮನಗರ ಒಂದು ಸಾಂಸ್ಕೃತಿಕ ಅಧ್ಯಯನ,*** ಅಂಕನಹಳ್ಳಿ ಪ್ರಕಾಶನ, ರಾಮನಗರ. 2008.

4. ಈರಣ್ಣ ಕೆ.ಪಿ. - ***ಬಾದಾಮಿ ಚಾಲುಕ್ಯರ ಸಾಂಸ್ಕೃತಿಕ ಪರಂಪರೆ,*** ಮನುಸಾಹಿತ್ಯ ಪ್ರಕಾಶನ, ಧಾರವಾಡ.

5. ಕರುಣ ಮಂಗಳವೇಡೆ - ***ಕರ್ನಾಟಕ ದೇವಾಲಯಗಳಲ್ಲಿ*** **ರಂಗಬೋಗ,** (ಅಪ್ರಕಟಿತ ಪಿಎಚ್.ಡಿ ನಿಬಂಧ), ಕನ್ನಡ ವಿಶ್ವವಿದ್ಯಾಲಯ ಹಂಪಿ. 2001.

6. ಡಾ. ಕಲಬುರ್ಗಿ ಎಂ.ಎಂ - **ಶಾಸನಗಳಲ್ಲಿ ಶಿವಶರಣರು,** ವೀರಶೈವ ಅಧ್ಯಯನ ಸಂಸ್ಥೆ, ಗದಗ. 1978.

7. ಕಪಟಾಳ್ ಕೃಷ್ಣರಾವ್ ವಿದ್ವಾನ್ ಕುರಡಿ ಹನುಮಂತಾಚಾರ್ಯ - **ಕರ್ನಾಟಕ ಸಂಸ್ಕೃತಿಯ ಶೋಧನೆ,** ಉಷಾ ಸಾಹಿತ್ಯ ಮಾಲೆ, ಮೈಸೂರು. 1970.

8. ಕುಂದೂರಿ ಈಶ್ವರದತ್ತ (ತೈಮೂಲ) ಗುರುಮೂರ್ತಿ ಪೆಂಡಕೂರು (ಕ. ಅನು) - ***ಭಗ್ನ ವಿಜಯನಗರ ಚರಿತ್ರೆ,*** ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.2010.

9. ಡಾ. ಗೋಪಾಲ್ ಬಾ.ರಾ - ***ಕರ್ನಾಟಕದ ಕಲೆಗಳು ಮತ್ತು ವಾಸ್ತು***
ಕನ್ನಡ ಸಾಹಿತ್ಯ ಪರಿಷತ್,
ಬೆಂಗಳೂರು. 2003.

10. ಡಾ.ಎಚ್.ಎಸ್. ಗೋಪಾಲರಾವ್ (ಸಂ) - ***ಕನಕಸಿರಿ,***
ಕನ್ನಡ ಸಾಹಿತ್ಯ ಪರಿಷತ್,
ಬೆಂಗಳೂರು. 1999.

11. ಡಾ. ಗೋಪಾಲರಾವ್ (ಸಂ) - ***ಗಂಗ ಶಿಲ್ಪಕಲೆ, ಬಾದಾಮಿ ಚಾಲುಕ್ಯ ಶಿಲ್ಪಕಲೆ,* ರಾಷ್ಟ್ರಕೂಟ ಶಿಲ್ಪಕಲೆ, ಪಲ್ಲವ–ಚೋಳ ಶಿಲ್ಪಕಲೆ, ವಿಜಯನಗರ ಶಿಲ್ಪಕಲೆ,**
ಕರ್ನಾಟಕದ ಶಿಲ್ಪಕಲಾ ಅಕಾಡೆಮಿ.
ಬೆಂಗಳೂರು, 2008.

12. ಡಾ.ಎಚ್.ಎಸ್. ಗೋಪಾಲರಾವ್ - ***ಕಲ್ಯಾಣಿ ಚಾಲುಕ್ಯರ ದೇವಾಲಯಗಳು ಒಂದು ಸಾಂಸ್ಕೃತಿಕ ಅಧ್ಯಯನ,***
*ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯ,*
ಮೈಸೂರು. 1993,

13. ಡಾ. ಚಿದಾನಂದ ಮೂರ್ತಿ, ಎಂ - ***ಕನ್ನಡ ಶಾಸನಗಳು,* ಸಾಂಸ್ಕೃತಿಕ ಅಧ್ಯಯನ,**
ಪ್ರಸಾರಂಗ, ಮೈಸೂರು ವಿಶ್ವವಿದ್ಯಾಲಯ,
ಮೈಸೂರು. 1965.

14. ಡಾ. ಚೆನ್ನಕ್ಕ ಪಾವಟೆ - ***ಹಾನಗಲ್ಲ ಕದಂಬರು,***
ಚನ್ನಗಂಗಾ ಪ್ರಕಾಶನ,
ಧಾರವಾಡ.

15. ಡಾ. ಚೆನ್ನಕ್ಕ ಪಾವಟೆ - ***ಕರ್ನಾಟಕದ ಶಾಸನೋಕ್ತಮಹಿಳೆ, ಸಮೀಕ್ಷೆ–ಸಂಸ್ಕೃತಿ,***
ಕರ್ನಾಟಕ ಇತಿಹಾಸ ಸಂಶೋಧನ ಮಂಡಲ,
ಧಾರವಾಡ. 2007–08.

16. ಡಾ. ಚೆನ್ನಕ್ಕ ಎಲಿಗಾರ - ***ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ,***
ಪ್ರಸಾರಂಗ, ಕರ್ನಾಟಕ ವಿಶ್ವವಿದ್ಯಾಲಯ,
ಧಾರವಾಡ. 1990.

17. ಡಾ. ತಿಪ್ಪೇರುದ್ರಸ್ವಾಮಿ, ಎಚ್ - ***ಕರ್ನಾಟಕ ಸಂಸ್ಕೃತಿ ಸಮೀಕ್ಷೆ,***
ಡಿ.ಕೆ.ವಿ. ಮೂರ್ತಿ, ಕೃಷ್ಣಮೂರ್ತಿ ಪುರಂ,
ಮೈಸೂರು. 1968.

18. ದೇವರಕೊಂಡಾರೆಡ್ಡಿ - ***ತಲಕಾಡಿನ ಗಂಗರ ದೇವಾಲಯಗಳು, ಒಂದು ಅಧ್ಯಯನ,***
ಕನ್ನಡ ಸಾಹಿತ್ಯ ಪರಿಷತ್,
ಬೆಂಗಳೂರು. 1994.

19. ಡಾ. ದೇಸಾಯಿ ಪಾಂಡುರಂಗರಾಯರು - ***ಕನ್ನಡ ನಾಡಿನ ಮಿಂಚಿದ ಮಹಿಳೆಯರು,***
*ಕರ್ನಾಟಕ ಇತಿಹಾಸ ಸಂಶೋಧನ ಮಂಡಲ,*
ಧಾರವಾಡ, 2007–08,

20. ದೇಸಾಯಿ, ಪಿ.ಬಿ - ***ವಿಜಯನಗರ ಸಾಮ್ರಾಜ್ಯ***
ಸ್ಮಾರಕೋತ್ಸವಮಂಡಲ,
ಧಾರವಾಡ. 1936.

21. ನಂದಿಮಠ, ಎಸ್.ಸಿ - ***ಕರ್ನಾಟಕದ ಧರ್ಮಗಳು,***
ವಿಶ್ವಕನ್ನಡ ಸಮ್ಮೇಳನ ಸಾಹಿತ್ಯ ಮಾಲೆ, 70,
ಕರ್ನಾಟಕ ಸರ್ಕಾರ. 1983.

22. ಡಾ.ನರಸಿಂಹಮೂರ್ತಿ, ಪಿ.ನ್ - ***ಕುಂದನಾಡಿನ ಶಾಸನಗಳು,***
ಸ್ವಾಗತ ಸಮಿತಿ, 74ನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಪರಿಷತ್,
ಉಡುಪಿ, 2007.

23. ಡಾ. ನಿರುಪಮಾ - ***ಶ್ರೀಕೃಷ್ಣದೇವರಾಯನ ಅಮುಕ್ತ ಮೌಲ್ಯದ,***
ಕನ್ನಡ ವಿಶ್ವವಿದ್ಯಾಲಯ,
ಹಂಪಿ.2010.

24. ಡಾ. ಪರಮಶಿವ ಮೂರ್ತಿ - ***ಕನ್ನಡ ಶಾಸನಶಿಲ್ಪ,***
ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ,
ಹಂಪಿ, 1999.

25. ಪಾಂಡುರಂಗ ದೇಸಾಯಿ - **ಹಂಪಿ**
ಐ.ಬಿ.ಎಚ್. ಪ್ರಕಾಶನ,
ಬೆಂಗಳೂರು. 1971.

26. ಬಸವರಾಜ ಮಲಶೆಟ್ಟಿ, (ಸಂ) - ***ವಿಜಯನಗರ ಇತಿಹಾಸದ ಬಗ್ಗೆ ಕೆಲವು ಭ್ರಮೆಗಳು, ತಿರುಳ್ಗನ್ನಡ,***
ಸಾಹಿತ್ಯ ಸಮ್ಮೇಳನದ ಸವಿ ಸಂಚಿಕೆ.
ಕೊಪ್ಪಳ, 1993.

27. ಡಾ.ಬಸವರಾಜ ಕಲ್ಗುಡಿ - ***ಮಹಾಸತಿ ಆಚರಣೆ, – ಒಂದು ಅಧ್ಯಯನ,*** ಪ್ರಸಾರಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು. 1985.

28. ಮಹೇಶ.ಕೆ. - ***ಕೃಷ್ಣದೇವರಾಯನ ಕಾಲದ ವೈಷ್ಣವ ದೇವಾಲಯಗಳು*** (ಅಪ್ರಕಟಿತ ಪಿಹೆಚ್.ಡಿ ನಿಬಂಧ) ಕನ್ನಡ ವಿಶ್ವವಿದ್ಯಾಲಯ, ಹಂಪಿ, 2002.

29. ಡಾ. ಮುರಿಗೆಪ್ಪ ಎ, (ಪ್ರ.ಸಂ) - ***ಕೃಷ್ಣದೇವರಾಯ,*** ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. 2008.

30. ಡಾ. ಯೋಗೀಶ್ವರಪ್ಪ, ಡಿ.ಎನ್ - ***ಮದ್ಯಕಾಲೀನ ಕರ್ನಾಟಕದ ಪಾಳೆಯಗಾರರು,*** ದಾತ್ರಿ ಪುಸ್ತಕ ಮಾಲೆ, ಬೆಂಗಳೂರು. 2009.

31. ರಘುನಾಥ ಭಟ್, ಎಚ್.ಆರ್ - ***ಕರ್ನಾಟಕ ಶಾಸನಕಲೆ (ಕೆಲವು ಸಂಶೋಧನೆಗಳು)*** ಭಾರತೀ ಪ್ರಕಾಶನ, ಮೈಸೂರು, 1977

32. ರಮಾನಂದ - ***ವಿಜಯನಗರ ಕಾಲದ ಶಾಸನಗಳ ಸಾಂಸ್ಕೃತಿಕ ಅಧ್ಯಯನ,*** (ಅಪ್ರಕಟಿತ ಪಿಹೆಚ್.ಡಿ ಪ್ರಬಂಧ) ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು. 1989.

33. ರಾಜಶೇಖರ ಸಿಂದಗಿ, - ***ಕರ್ನಾಟಕದ ವಾಸ್ತುಶಿಲ್ಪ ಮತ್ತು ಶಿಲ್ಪಕಲೆ,***
ಸುಜಾತ ಪಬ್ಲಿಕೇಷನ್ಸ್,
ಧಾರವಾಡ. 1988.

34. ರಾಮಚಂದ್ರ ರಾವ್. ಎಸ್.ಕೆ - ***ಭಾರತ ದೇವಾಲಯಗಳ ನೆಲೆ–ಹಿನ್ನೆಲೆ,***
ಐ.ಬಿ.ಹೆಚ್. ಪ್ರಕಾಶನ,
ಬೆಂಗಳೂರು. 1979.

35. ರಾಬರ್ಟ್ ಸಿವೆಲ್ (ಮೂಲ)
ಸದಾನಂದ ಕನವಳ್ಳಿ (ಅನು), - **ಮರೆತು ಹೋದ ಮಹಾಸಾಮ್ರಾಜ್ಯ, ವಿಜಯನಗರ,**
ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ,
ಹಂಪಿ.1992.

36. ಡಾ.ಕೆ. ವಸಂತಲಕ್ಷ್ಮೀ - ***ಹಾಸನ ಜಿಲ್ಲೆಯ ಹೊಯ್ಸಳರ ಬಸದಿಗಳು,***
ಸುಮುಖ ಪ್ರಕಾಶನ,
ಬೆಂಗಳೂರು. 2006.

37. ಡಾ.ಲೀಲಾ ಪಾಟೀಲ್, (ಮರಾಠಿ)
ಡಾ.ವಿಠ್ಠಲರಾವ್, ಟಿ. ಗಾಯಕ್ವಾಡ್
(ಕನ್ನಡ) - **ಭಾರತೀಯ ಸ್ತ್ರೀ–ಸಮಾಜ,**
ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ,
ಹಂಪಿ.2009,

38. ಡಾ. ವಸು, ಎಂ.ವಿ - ***ದಕ್ಷಿಣ ಕರ್ನಾಟಕ ಅರಸು ಮನೆತನಗಳು,***
ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ,
ಹಂಪಿ. 2001.

39. ಡಾ. ವರದಾ ಶ್ರೀನಿವಾಸ್ - *ಮಹಿಳೆಯ ಸ್ಥಿತಿ-ಗತಿ ಅಂದು ಇಂದು*
ಬೆಂಗಳೂರು ವಿಶ್ವವಿದ್ಯಾಲಯ,
ಹಂಪಿ.1999.

40. ವಸುಂಧರಾ ಫಿಲಿಯೋಜ - *ವಿಜಯನಗರ ಸಾಮ್ರಾಜ್ಯ ಸ್ಥಾಪನೆ*
ಕನ್ನಡ ಸಾಹಿತ್ಯ ಪರಿಷತ್,
ಬೆಂಗಳೂರು. 1988.

41. ವಸುಂಧರಾ ಫಿಲಿಯೋಜ - **ಹಂಪಿ,**
*ಕರ್ನಾಟಕ ವಿಶ್ವವಿದ್ಯಾಲಯ,*
ಧಾರವಾಡ. 1976.

42. ಡಾ. ವಿವೇಕ ರೈ, (ಸಂ) - *ಪ್ರವಾಸಿ ಕಂಡ ವಿಜಯನಗರ,*
ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ.
ಹಂಪಿ, 2010.

43. ಡಾ. ವಿರುಪಾಕ್ಷ ಪೂಜಾರಹಳ್ಳಿ - **ವಿಜಯನಗರ ಕಾಲದ ಸಂಸ್ಕೃತಿ,**
ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ,
ಹಂಪಿ. 2008.

44. ವೀರಭದ್ರಪ್ಪ, ಕುಂ - *ಶ್ರೀಕೃಷ್ಣದೇವರಾಯ,*
ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ,
ಹಂಪಿ.2001.

45. ವೆಂಕಟರತ್ನಂ ಎಂ.ವಿ - ***ವಿಜಯನಗರ ಸಾಮ್ರಾಜ್ಯದಲ್ಲಿ ಸ್ಥಳೀಯ ಸರ್ಕಾರ,***
ಮೈಸೂರು ವಿಶ್ವವಿದ್ಯಾಲಯ,
ಮೈಸೂರು. 1974.

46. ಶರ್ಮಾ.ಆರ್.ಎಸ್ - ***ಪ್ರಾಚೀನ ಭಾರತ,***
ನವಕರ್ನಾಟಕ ಪ್ರಕಾಶನ,
ಬೆಂಗಳೂರು. 1997.

47. ಡಾ. ಶೀಲಾಕಾಂತ ಪತ್ತಾರ - ***ಬಾದಾಮಿ ಸಾಂಸ್ಕೃತಿಕ ಅಧ್ಯಯನ,***
ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ,
ಹಂಪಿ.2000.

48. ಶ್ರೀ ಶಂಕರಯ್ಯ ಶಾಸ್ತ್ರಿ, ಬ. ಹೊಸಗೌಡ - ***ಶ್ರೀ ಕ್ಷೇತ್ರ ಮಹಾಕೂಟ,***
*ಶ್ರೀಮಹಾಕೂಟೇಶ್ವರ ದೇವಸ್ಥಾನ, ಜೀರ್ಣೋದ್ಧಾರ ಸಮಿತಿ ಮತ್ತು ಶ್ರೀ ಎಂ.ಎಸ್, ಕಪ್ಪರದ ಆಯಿಲ್ ಇಂಡಸ್ಟ್ರೀಜ್,* 1998.

49. ಡಾ.ಜಿ.ಎಸ್. ಶಿವರುದ್ರಪ್ಪ (ಪ್ರ.ಸಂ), - ***ಭಾರತೀಯ ಪರಂಪರೆ,***
ಬೆಂಗಳೂರು ವಿಶ್ವವಿದ್ಯಾಲಯ,
ಬೆಂಗಳೂರು. 1975.

50. ಡಾ.ಶೇತೆ, ಬಿ.ಎಸ್. - ***ಕರ್ನಾಟಕದಲ್ಲಿ ಸತಿಪದ್ಧತಿ,***
ಬೆಳಗಾವಿ, 1991.

51. ಡಾ.ಎಚ್.ಎಸ್. ಶ್ರೀಮತಿ - **ಆಧುನಿಕ ಭಾರತದಲ್ಲಿ ಮಹಿಳೆ,**
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ,
ಹಂಪಿ. 2001.

52. ಶಂ.ಬಾ. ಜೋಶಿ, - **ಕರ್ನಾಟಕ ಸಂಸ್ಕೃತಿಯ ಪೂರ್ಣಪೀಠಿಕೆ,**
ಸಂ–1, ಸಂ–2, ಸಮಾಜಪುಸ್ತಕಾಲಯ,
ಧಾರವಾಡ, 1966.

53. ಶ್ರೀ ಲಕ್ಷ್ಮೀನಾರಾಯಣರಾಯರು - **ಕರ್ನಾಟಕದ ಅರಸು ಮನೆತನಗಳು**
ಶ್ರೀ ಪಂಚಮುಖಿ ಆರ್.ಎಸ್. ಎನ್. ಕರ್ನಾಟಕ ಇತಿಹಾಸ ಸಂಶೋಧಕ ಮಂಡಲ
ಧಾರವಾಡ. 1946.

54. ಡಾ. ಶೇಷಶಾಸ್ತ್ರಿ. ಆರ್ - **ಕರ್ನಾಟಕದ ವೀರಗಲ್ಲುಗಳು,**
ಕನ್ನಡ ಸಾಹಿತ್ಯ ಪರಿಷತ್,
ಬೆಂಗಳೂರು. 2004.

55. ಸರೋಜಿನಿ ಮಹಿಷಿ - **ಕರ್ನಾಟಕದ ಕವಿಯಿತ್ರಿಯರು,**
ಕರ್ನಾಟಕದ ಸಹಕಾರಿ ಸಾಹಿತ್ಯ ಸಂಘ,
ಧಾರವಾಡ. 1965.

56. ಸೀತಾರಾಮಯ್ಯ, ಎಂ.ವಿ (ಸಂ) - ***ಕೃಷ್ಣದೇವರಾಯನ ದಿನಚರಿ,***
ಬಿ.ಎಂ. ಶ್ರೀಸ್ಮಾರಕ ಪ್ರತಿಷ್ಠಾನ,
ಬೆಂಗಳೂರು. 1983.

57. ಡಾ. ಸೂರ್ಯನಾಥ. ಯು. ಕಾಮತ್ - *ಕರ್ನಾಟಕದ ಸಂಕ್ಷಿಪ್ತ ಇತಿಹಾಸ,* ಎಂ.ಸಿಸಿ. ಪಬ್ಲಿಕೇಷನ್, ಬೆಂಗಳೂರು. 1987.

58. ಸೂರ್ಯ ನಾರಾಯಣರಾವ್ (ಅನು) ಬಾಲಸುಬ್ರಹ್ಮಣ್ಯ - **ಮರೆಯಲಾಗದ ಮಹಾ ಸಾಮ್ರಾಜ್ಯ ವಿಜಯನಗರ,** ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.2000,

59. ಡಾ. ಸ್ವಾಮಿನಾಥನ್, ಎಸ್. - *ರಾಷ್ಟ್ರಕೂಟರ ತಮಿಳು ಶಾಸನಗಳು,* ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.2000

60. ಷೇಕ್ ಅಲಿ.ಬಿ. (ಪ್ರ.ಸಂ) - *ಕರ್ನಾಟಕ ಚರಿತ್ರೆ,* ಸಂ–3, ಚರಿತ್ರೆ ಮಾಲೆ 3, ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. 1997.

61. ಡಾ. ಜ್ಞಾನಾನಂದ, - **ಶಿಲ್ಪದರ್ಶ (ಸಂ–2)** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. 2002.

# ENGLISH BOOKS


1. Acharya, P.K - ***Encyclopedia of Hindu Architecture,***
J.K. Publishing House,
Bhopal. 1978.

2. Altekar A.S - ***The Position of Women in Hindu, Civilization motilal***
Banarasidass Publishers
Delhi. 1991.

3. Bharagavi Shivaiah - ***Krishnadevaraya his life and achievements, (Ph.D Thesis)***
Karnataka University,
Dharwad. 1943.

4. *Dr. Shivanna* - ***Rastrakuta Relations with the Gangas of Talkad,***
*Prasaranga, University of Mysor,*
*Mysore. 1997*

5. Dr. Veerathappa, K - ***Studies in Karnataka History and Culture,***
Bharathi Prakashana,
Mysore. 1987,.

6. Kelleson Collyar - ***The Hoysala Artists, Directorate of Archaeology and Museum,***
Mysore. 1990.

7. *Krishnaswamy Ayyangar, S* - **Sources of Vijayangara History Gion**
Publishing of House,
Delhi. *1986.*

8. Mahalingam. T.V - ***Administrative and social life under Vijayangara, Part II,***
Madras. 1969-76.

9. Ramachnadra Rao, S.K. - ***Art and Architecture of Indian Temples,***
Vol III,
Bangalore. 1992.

10. Rao, S.R - ***The Note on the chronology of early chalukaan Temples Lalithakala,*** No. 15,
New Delhi. 1972

11. Saraswathi. N - ***Position of women during Vijayangara,***
Saraswati Publication,
Mysore. 1992.

12. Shivarudraswamy - ***Vijayangara Temples in Karnataka,*** Dharwada. 1987

13. Sreenivasa, K.R - ***Temples of South India,*** N.B.T. Madras. 1972.

14. Sundara. A - ***Early Kadamba temple Architecture QJM, S LXXV-3,***

15. Venkataramanayya, N - ***An Eassy on the South Temples,*** *Asian Educational Services, New Delhi.* 1985.

16. Vijyaraghavacharya, - **Vijayanagara Inscriptions 01** Krishnadevarayas time, Vol-iii,Sri. Sat Guru Publication. 1984,

# ಅಧ್ಯಾಯ – 5

## ಸಮಾರೋಪ

ಕರ್ನಾಟಕಕ್ಕೆ ಪ್ರಾಚೀನ ಕಾಲದಿಂದಲೂ ತನ್ನದೇ ಆದ ಚರಿತ್ರೆ ಇದೆ. ಇತಿಹಾಸದಲ್ಲಿ ಭಾರತೀಯ ಸಂಸ್ಕೃತಿಗೆ ಕೊಟ್ಟಿರುವ ಕೊಡುಗೆ ಬಹು ದೊಡ್ಡದು. ಇಂತಹ ಅಭೂತಪೂರ್ಣ ಚರಿತ್ರೆಯನ್ನು ಹೊಂದಿರುವ ಕರ್ನಾಟಕವನ್ನು ಸಾಕಷ್ಟು ರಾಜಮನೆತನಗಳು ಆಳ್ವಿಕೆ ನಡೆಸಿ ಹೋಗಿವೆ. ಈ ರಾಜಮನೆತನಗಳು ಕರ್ನಾಟಕದ ಪರಂಪರೆಯನ್ನು ಸಮೃದ್ಧಿಗೊಳಿಸಿವೆ. ಇಂತಹ ಕರ್ನಾಟಕದ ಇತಿಹಾಸ ಆರಂಭವಾಗುವುದು ಕ್ರಿ.ಪೂ ಮೂರನೇ ಶತಮಾನದ ನಂತರ, ಸದ್ಯಕ್ಕೆ ಆ ಮೊದಲಿನ ಇತಿಹಾಸಕ್ಕೆ ಯಾವ ಲಿಖಿತ ದಾಖಲೆಗಳು ಲಭ್ಯವಿಲ್ಲ. ಸಾವಿರಾರು ವರ್ಷಗಳ ಸುಧೀರ್ಘ ಮತ್ತು ಉಜ್ವಲ ಸಾಂಸ್ಕೃತಿಕ ಪರಂಪರೆಯನ್ನು ಹೊಂದಿರುವ ಕರ್ನಾಟಕದ ಆಧುನಿಕ ಇತಿಹಾಸದಲ್ಲಿ ಕರ್ನಾಟಕದ ಏಕೀಕರಣ ಒಂದು ಮಹತ್ವಪೂರ್ಣವಾದ ವಿಶಿಷ್ಟ ಘಟನೆ. ಅಲ್ಲಿಂದೀಚೆಗೆ ಕರ್ನಾಟಕದ ಇತಿಹಾಸವನ್ನು ನೋಡುವ ಕ್ರಮಗಳು ಪರಿವರ್ತನೆಯಾಗಿವೆ. ವೈಜ್ಞಾನಿಕ ಮತ್ತು ವಿಶ್ಲೇಷಣಾತ್ಮಕ ಹಾಗೂ ಗುಣಾತ್ಮಕ ನಿಟ್ಟಿನಲ್ಲಿ ಸಂಶೋಧನೆಗಳು ಜರುಗುತ್ತಿವೆ.

ಹತ್ತೊಂಬತ್ತನೆಯ ಶತಮಾನದಿಂದ ಈಚೆಗೆ ಮಹಿಳೆಯನ್ನು ನೋಡುವ ದೃಷ್ಟಿಕೋನಗಳು ಬದಲಾಗುತ್ತಿವೆ. ಮಹಿಳೆಯರ ಸ್ಥಿತಿಗತಿಗಳನ್ನು ಲಿಂಗಸಂಬಂಧಿ ವ್ಯವಸ್ಥೆಗಳ ನೆಲೆಗಳಲ್ಲಿ ವಿವಿಧ ಆಯಾಮಗಳಲ್ಲಿ ಗ್ರಹಿಸುವ ಉದ್ದೇಶವನ್ನು ಮಹಿಳಾ ಅಧ್ಯಯನಗಳು ನಡೆಸುತ್ತಿವೆ. ಮಹಿಳೆಯರ ಅಸ್ಮಿತೆ, ಅಸ್ತಿತ್ವಗಳನ್ನು ಗುರುತಿಸುವ ಉದ್ದೇಶ ಮಹಿಳಾ ಸಂಶೋಧನೆಗಳಲ್ಲಿ ಸಾಗಿದೆ. ಸ್ತ್ರೀವಾದಿ ಸಂಶೋಧನೆಗೆ ಪ್ರತ್ಯೇಕವಾದ ವಿಧಾನಗಳನ್ನು ಮತ್ತು ವೈಧಾನಿಕತೆಯನ್ನು ರೂಪಿಸಿಕೊಳ್ಳುವ ಅಗತ್ಯವನ್ನು ಹಾಗೂ ಅದು ಎದುರಿಸಬೇಕಾಗಿರುವ ಸವಾಲುಗಳ ಕುರಿತು ವಿಶ್ಲೇಷಣೆಯನ್ನು ಸ್ತ್ರೀವಾದಿ ಸಂಶೋಧನಾ ವೈಧಾನಿಕತೆಗಳಲ್ಲಿ ನಡೆಯುತ್ತಿವೆ. ಮಹಿಳಾ ಸಬಲೀಕರಣದ ಸಾಧ್ಯತೆಯನ್ನು ಮಹಿಳೆಯರ ರಾಜಕೀಯ ಸಬಲೀಕರಣದ ನೆಲೆಗಳಲ್ಲಿ ವಿವರಿಸುವ ಪ್ರಯತ್ನವನ್ನು ಮಾಡಲಾಗುತ್ತಿದೆ.

ಪ್ರಸ್ತುತ ಅಧ್ಯಯನ "ಕರ್ನಾಟಕದ ರಾಣಿಯರು ಸಮಗ್ರ ಅಧ್ಯಯನ ಕದಂಬ ಸಾಮ್ರಾಜ್ಯದಿಂದ ವಿಜಯನಗರ ಸಾಮ್ರಾಜ್ಯದವರೆಗೆ (ಕ್ರಿ.ಶ. 345 ರಿಂದ ಕ್ರಿ.ಶ. 1565)" ಎಂಬ

ಶೀರ್ಷಿಕೆಯನ್ನು ಹೊತ್ತ ಸಂಶೋಧನಾತ್ಮಕ ನಿಬಂಧವು ಪ್ರಾಚೀನ ಕಾಲದಲ್ಲಿ ಕರ್ನಾಟಕವನ್ನಾಳಿದ ವಿವಿಧ ರಾಜಮನೆತನಗಳಲ್ಲಿ ಬರುವಂತಹ ರಾಣಿಯರ ಕುರಿತಾದ ಸಮಗ್ರವಾಗಿ, ವಿಶ್ಲೇಷಿಸುವ ಮಹಿಳಾ ಅಧ್ಯಯನ ಸಂಬಂಧಿ ಪ್ರಯತ್ನದ್ದಾಗಿದೆ. ಕರ್ನಾಟಕವನ್ನಾಳಿದ ರಾಜಮನೆತನಗಳು ಕರ್ನಾಟಕದ ಸಂಸ್ಕೃತಿಗೆ ವಿಪುಲವಾದ ಕೊಡುಗೆಗಳನ್ನು ನೀಡಿ ಶ್ರೀಮಂತಗೊಳಿಸಿದ್ದಾರೆ. ರಾಜಮನೆನತನಗಳು ಅರಸರು ಆಳ್ವಿಕೆ ನಡೆಸುವಾಗ ತಮ್ಮದೇ ಆದ ವಿಶೇಷತೆಯನ್ನು ಪಡೆದಿದ್ದಂತೆ ರಾಣಿಯರು ಸಹ ಪ್ರಾಮುಖ್ಯರಾಗಿದ್ದಾರೆ. ಇವರು ನಾಡಿನ ಸಂಸ್ಕೃತಿಯನ್ನು ಚಿರಂತನದಾಗಿ ಬೆಳಗಿಸುವಲ್ಲಿ ಯಶಸ್ವಿಯಾಗಿದ್ದಾರೆ. ಶಾಸನ, ಕಾವ್ಯಗಳಲ್ಲಿ, ಅವರ ವಿಶೇಷಣಗಳು ದಾಖಲೆಯಾಗಿವೆ. ಅರಸಿಯರು ವೀರರಂತೆ, ಆಡಳಿತ ಕುಶಲಿಗಳಾಗಿ, ರಣಾಂಗಣವೀರೆಯರಾಗಿ, ಕಲಾ ಪ್ರವೀಣರಾಗಿ, ಧರ್ಮ ಮೂರ್ತಿಗಳಾಗಿ, ಮಾನವತಾವಾದಿಗಳಾಗಿ ಸಾಹಿತ್ಯ ಪ್ರೇಮಿಗಳಾಗಿ ಸುಸಂಸ್ಕೃತ ಇತಿಹಾಸ ಬರೆಯಲು ಪ್ರೇರಣೆ ನೀಡಿದ್ದಾರೆ. ಕದಂಬ ಸಾಮ್ರಾಜ್ಯದಿಂದ ವಿಜಯನಗರ ಸಾಮ್ರಾಜ್ಯದವರೆಗಿನ ರಾಜಮನೆತನಗಳಲ್ಲಿ ಬರುವಂತಹ ರಾಣಿಯರ ಚರಿತ್ರೆಯೂ, ಹೆಚ್ಚು ವಿಸ್ತಾರವಾದುದ್ದು ಮತ್ತು ಕುತೂಹಲ ಅಂಶಗಳಿಂದ ಕೂಡಿದ ಸಂಗತಿಗಳನ್ನು ಒಳಗೊಂಡಿರುವುದು ಈ ಸಂಶೋಧನಾ ಅಧ್ಯಯನದ ಒಳನೋಟಗಳಿಂದ ಗ್ರಹಿಸಬಹುದಾಗಿದೆ.

ಕನ್ನಡದ ಮೊಟ್ಟಮೊದಲ ಸಾಮ್ರಾಜ್ಯವೆನಿಸಿದ ಕದಂಬ ಮನೆತನದ ಕಾಲಾವಧಿಯಿಂದ ಹಿಡಿದು ವಿಜಯನಗರ ಸಾಮ್ರಾಜ್ಯದವರೆವಿಗೂ ಉನ್ನತವರ್ಗಕ್ಕೆ ಸೇರಿದ ರಾಜಕುಟುಂಬಗಳಲ್ಲಿನ ರಾಜರ ಮಡದಿಯರು 'ರಾಣಿ' ಎಂಬ ಹೆಸರಿನ ಮೂಲಕ ಗುರುತಿಸಿಕೊಳ್ಳುತ್ತಿದ್ದರು. ಇಲ್ಲಿ ರಾಣಿಯರೆಂದರೆ 'ರಾಜನ ಪತ್ನಿ' ಪಟ್ಟಮಹಿಷಿ, ಮಹಾರಾಣಿ ಅಗ್ರಮಹಿಷಿ ಎಂದೆಲ್ಲಾ ಗುರುತಿಸಿಕೊಂಡು ರಾಜನ ಮೂಲಕ ಗುರುತಿಸಿಕೊಂಡಿದ್ದಾರೆ. ಇಂತಹವರ ಪ್ರಾಚೀನ ಕಾಲದಿಂದಲೂ ಹೆಚ್ಚಿನ ಸಂಖ್ಯೆಯಲ್ಲಿ ತಮ್ಮ ಸ್ವಂತಕಾರ್ಯ ಬಲದಿಂದ ಇಲ್ಲವೇ ಪರೋಕ್ಷವಾಗಿಯೋ ಕಾಣಿಸಿಕೊಂಡಿರುವುದು ನಮ್ಮ ಅಧ್ಯಯನದಿಂದ ತಿಳಿದು ಬರುತ್ತದೆ.

ರಾಜ ಮನೆತನಗಳ ರಾಣಿಯರು ವೈವಿಧ್ಯಮಯವಾದ ಕರ್ನಾಟಕದ ಪರಂಪರೆಯನ್ನು ಪ್ರೋತ್ಸಾಹಿಸಿ ಶ್ರೀಮಂತಗೊಳಿಸಿದ್ದಾರೆ. ಇವರ ಕೊಡುಗೆಗಳು ವೈವಿಧ್ಯಪೂರ್ಣವಾಗಿವೆ. ಮಹಿಳೆಯು ಪ್ರಪ್ರಥಮವಾಗಿ ಸಮಾಜವನ್ನು ಪ್ರತಿನಿಧಿಸುವುದು ಗೃಹಿಣಿಯಾಗಿ ಇದೊಂದು ಸೀಮಿತ ಕ್ಷೇತ್ರ. ಈ ಕ್ಷೇತ್ರದೊಂದಿಗೆಯೇ ಸಮಾಜದ ಇತರೆ ರಂಗಗಳಾದ ರಾಜಕೀಯ, ಧಾರ್ಮಿಕ, ಕಲೆ ಮತ್ತು

ವಾಸ್ತುಶಿಲ್ಪ ಕ್ಷೇತ್ರಗಳಲ್ಲಿ ವಿಶಿಷ್ಟವಾದ ಸ್ಥಾನಮಾನವನ್ನು ಪ್ರದರ್ಶಿಸಿದ್ದಾರೆ. ರಾಣಿಯರು ರಾಜನೊಂದಿಗೆ ಸುಖಸಂಕಥಾ ವಿನೋದದಿಂದ ಬಾಳುವಲ್ಲಿ ಸ್ವತಂತ್ರ ಆಡಳಿತ ನಿರ್ವಹಿಸುವುದರ ಮೂಲಕ ರಾಜ್ಯಾಧಿಕಾರವನ್ನು ಹೊಂದಿರುತ್ತಿದ್ದರು. ಚಾಲುಕ್ಯರ ಕಾಲದಲ್ಲಿ ಮೊದಲನೇ ಪುಲಕೇಶಿಯ ರಾಣಿ ದುರ್ಲಬಾದೇವಿ ಬಾದಾಮಿಯ ಸುತ್ತಲಿನ ಹತ್ತು ಗ್ರಾಮಗಳನ್ನು ಆಳಿದ ಸೂಚನೆ, ಚಂದ್ರಾದಿತ್ಯನ ರಾಣಿ 'ಕರ್ನಾಟಕ ರಾಜಪ್ರಿಯೆ' ಎಂದೇ ಹೊಗಳಿಕೆಗೆ ಪಾತ್ರಳಾದ ವಿಜಯ ಭಟ್ಟಾರಿಕೆ ರಾಷ್ಟ್ರಕೂಟರ ಧ್ರುವನ ರಾಣಿ ಶೀಲಭಟ್ಟಾರಿಕೆ, ಚಂದ್ರೋಲಬ್ಬೆ, ಬೂತುಗನ ರಾಣಿ ಪದುಮಬ್ಬರಸಿ ಶ್ರೀ ಪುರುಷನ ರಾಣಿ ವಿನೇತಿ ನಿಮ್ಮಡಿ, ಎರೆಯಂಗನ ರಾಣಿ ರೇವಕನಮ್ಮಡಿಯರು ಕಲ್ಯಾಣಿ ಚಾಲುಕ್ಯೋತ್ತರ ಕಾಲದಲ್ಲಿ ಸ್ವತಂತ್ರ ಆಡಳಿತ ನಡೆಸಿದ ವಿವರಗಳು ದೊರೆತರೆ, ಕಲ್ಯಾಣಿ ಚಾಲುಕ್ಯರ ಕಾಲದಲ್ಲಿ ರಾಣಿಯರು, ಪುರುಷನಷ್ಟೇ ಸಮಾನ ಅವಕಾಶಗಳನ್ನು ಹೊಂದಿ ರಾಜಕೀಯವನ್ನು ಪ್ರವೇಶಿಸಿದ್ದುದ್ದು ತಿಳಿದು ಬರುತ್ತದೆ.

ಕಲ್ಯಾಣ ಚಾಲುಕ್ಯರ ಅಕ್ಕಾದೇವಿ ಭಾಗಲಾದೇವಿ, ಕೇತಲದೇವಿ, ಕಂಚಲಾದೇವಿ, ಚಂದಲಾದೇವಿ, ಮೈಳಲಾದೇವಿ, ಜಾಕಲದೇವಿ,ಪಿರಿಯ ಕೇತಲ ದೇವಿಯರು ಸಮಗ್ರವಾಗಿಯೇ ಆಡಳಿತ ನಡೆಸಿರುವುದು ಅಧ್ಯಯನದಿಂದ ದೃಢಪಟ್ಟಿದೆ. ಅದರಲ್ಲಿ ಅಕ್ಕಾದೇವಿ, ಕಿಸುಕಾಡು–70ನ್ನು ಸುಮಾರು (44) ನಲವತ್ನಾಲ್ಕು ವರ್ಷಗಳು ಆಳಿದ ಆಕೆಯನ್ನು ಶಾಸನಗಳು ಮತ್ತು ಸಾಹಿತ್ಯಗಳು ಹೊಗಳಿರುವ ಉಲ್ಲೇಖಗಳು ಮೈನವಿರೇಳಿಸುವಂತಿವೆ. ಹೊಯ್ಸಳರ ಕಾಲದಲ್ಲಿ ವಿಷ್ಣುವರ್ಧನನ ರಾಣಿ ಶಾಂತಲೆ, ಬಂಮಲಾದೇವಿ, ಚೋಳ ಮಹಾದೇವಿ, ಚಿಕ್ಕಾಯಿ ಬುಕ್ಕತಾಯಿಯರು, ವಿಜಯನಗರ ಅರಸರ ಕಾಲದಲ್ಲಿನ ನಾಲ್ಕು ಮನೆತನಗಳಲ್ಲೂ ಸಹ ಸಾಳ್ವವಂಶದ ತಿಮ್ಮರಾಜನ ರಾಣಿ ಹರಿಮಾ, ಎರಡನೇ ದೇವರಾಯನ ಸಹೋದರಿಯಾಗಿದ್ದು, ಸ್ವತಂತ್ರ್ಯ ರಾಜ್ಯಭಾರ ಮಾಡುತ್ತಿದ್ದಳು. ತುಳುವ ಮನೆತನದ ಚಿನ್ನಾದೇವಿ ಮತ್ತು ತಿರುಮಲಾ ದೇವಿಯರು, ಮತ್ತು ಜಗನ್ಮೋಹಿನಿ ರಾಣಿಯರು, ರಾಜನಾದ ಕೃಷ್ಣದೇವರಾಯನೊಂದಿಗೆ ಯುದ್ಧದಲ್ಲಿ ಸಮಯದಲ್ಲಿ ಪಾಲ್ಗೊಂಡಿದ್ದರೆಂಬುದು ಗಮನಾರ್ಹವಾದ ಸಂಗತಿಗಳಾಗಿವೆ.

ರಾಜನಂತೆ ರಾಣಿಯರು ಸಹ ಪ್ರಾಚೀನ ಕಾಲದಲ್ಲಿಯೇ ದಿಟ್ಟ ಹೋರಾಟದ ಮನೋಭಾವನೆಯನ್ನು ಹೊಂದಿದ್ದು, ರಾಜರ ಸರಿಸಮಾನರಾಗಿ ಬಾಳಿ–ಬದುಕಿ ತೋರಿಸಿರುವುದು ಶ್ಲಾಘನೀಯವಾದ ವಿಷಯ. ಶಾಸನಗಳು ಇಂತಹ ವೀರತ್ವದ ರಾಣಿಯರನ್ನು ಶ್ಲಾಘಿಸಿವೆ. ಕೆಲವೊಮ್ಮೆ

ರಾಣಿಯರು ಎರಡು ಸಾಮ್ರಾಜ್ಯಗಳ ನಡುವಿನ ಸುಮಧುರ ಬಾಂಧವ್ಯದ ಕೊಂಡಿಗಳಾಗಿರುತ್ತಿದ್ದರು ಎಂಬುದಕ್ಕೆ ಒರಿಸ್ಸಾದ ರಾಜಪುತ್ರಿ ಜಗನ್ಮೋಹಿನಿ ವಿಜಯನಗರದ ಶ್ರೀಕೃಷ್ಣದೇವರಾಯನನ್ನು ವಿವಾಹವಾದುದ್ದನ್ನು ಚೋಳಮಹಾದೇವಿಯನ್ನು ಹೊಯ್ಸಳ ಮನೆತನಕ್ಕೆ ವಿವಾಹ ಮಾಡಿದ್ದನ್ನು ಇಲ್ಲಿ ಸ್ಮರಿಸಬಹುದಾಗಿದೆ.

ರಾಜಕೀಯ ರಂಗಕ್ಕೆ ರಾಜಮನೆತನಗಳ ಎಲ್ಲಾ ರಾಣಿಯರು ಹೋಗುತ್ತಿರಲಿಲ್ಲ ಎಂಬುದು ಸಹ ನೈಜ ವಿಷಯ. ತಮ್ಮದೇ ಆದ ಅಭಿರುಚಿಗಳಿಗೆ ಅನುಗುಣವಾಗಿ ತಮ್ಮದೇ ಆದ ಸ್ಥಾನಮಾನವನ್ನು ಪಡೆದಿರುವುದು ಮತ್ತೊಂದು ವಿಶೇಷವಾಗಿದೆ ಕೆಲವು ರಾಣಿಯರು ಧಾರ್ಮಿಕ ಕಾರ್ಯಗಳಲ್ಲಿ ಗುರುತಿಸಿಕೊಂಡಿದ್ದಾರೆ. ಬಹುಪಾಲು ರಾಣಿಯರು ಧಾಮಿಕ ರಂಗವನ್ನೇ ಆರಿಸಿಕೊಂಡಿರುವುದು ಈ ಸಂಶೋಧನಾ ಅಧ್ಯಯನದಿಂದ ತಿಳಿದು ಬರುತ್ತದೆ. ಇದಕ್ಕೆ ತಮ್ಮ ತಮ್ಮ ಅಧಿಕಾರ, ಪ್ರಭಾವ, ಮತ್ತು ಕೀರ್ತಿ ಆಕಾಂಕ್ಷೆಗಳಿಂದ ಧಾರ್ಮಿಕ ರಂಗವನ್ನು ಪ್ರವೇಶಿಸಿರುವುದು ನೈಜ ವಿಷಯವೆನಿಸುತ್ತದೆ. ಪ್ರಾಯಶಃ ಮಹಿಳೆ ಅಂದಿನ ಕಾಲದಲ್ಲಿ ಬಹು ಸರಳ ಮತ್ತು ವಿಶ್ವಸನೀಯವಾಗಿ ತೊಡಗುತ್ತಿದ್ದ ಕ್ಷೇತ್ರವೆಂದರೆ ಧಾರ್ಮಿಕ ಕ್ಷೇತ್ರ. ಈ ಕ್ಷೇತ್ರದಲ್ಲಿ 'ಚತುಸ್ಸಮುದ್ದರಣಮ್' (ನಾಲ್ಕು ಧರ್ಮಗಳು) ಅಂದರೆ ಜೈನ, ಬೌದ್ಧ, ಶೈವ, ವೈಷ್ಣವ ಧರ್ಮಗಳನ್ನು ಪ್ರೋತ್ಸಾಹಿಸಿದ್ದಾರೆ. ಆಯಾಯ ರಾಜಮನೆನಗಳಲ್ಲಿ ಯಾವ ಧರ್ಮದ ಪ್ರಾಬಲ್ಯತೆ ಹೆಚ್ಚಾಗಿರುತ್ತಿತ್ತೋ ಆ ಧರ್ಮಗಳಿಗೆ ರಾಣಿಯರು ಕೊಡುಗೆಗಳನ್ನು ನೀಡಿದ್ದಾರೆ. ಹಾಗೆಂದ ಮಾತ್ರಕ್ಕೆ ಇತರ ಧರ್ಮಗಳನ್ನು ಪ್ರೋತ್ಸಾಹಿಸಿಲ್ಲವೆಂದಲ್ಲ. ಜೈನ, ಬೌದ್ಧ, ಶೈವ, ವೈಷ್ಣವ ಧರ್ಮಗಳನ್ನು ಪ್ರೋತ್ಸಾಹಿಸಿ ಬೆಳೆಸಿ ಬಸದಿ, ವಿಹಾರ, ದೇವಾಲಯಗಳನ್ನು ಸ್ಮಾರಕಗಳನ್ನು ನಿರ್ಮಿಸಿದ್ದಾರೆ.

ಈ ವಿಷಯವಾಗಿ ನಮ್ಮ ನಿಬಂಧದಲ್ಲಿ ಒಂದು ಉಪ ಅಧ್ಯಾಯವನ್ನಾಗಿ ಅಭ್ಯಸಿಸಲಾಗಿದೆ. ಗಂಗರ ಕಾಲದಲ್ಲಿ ಜೈನ ಧರ್ಮ, ಚಾಲುಕ್ಯ, ರಾಷ್ಟ್ರಕೂಟ, ಹೊಯ್ಸಳರ ಕಾಲದಲ್ಲಿ ಶೈವ ಮತ್ತು ವೈಷ್ಣವ ಧರ್ಮಗಳು ವಿಜಯನಗರ ಕಾಲದಲ್ಲಿ ಶೈವ ಮತ್ತು ವೈಷ್ಣವ ಧರ್ಮಗಳೆರಡೂ ಪ್ರಾಬಲ್ಯವಾಗಿದ್ದವೋ ಆದರೂ ಸಹ ಧರ್ಮಗಳ ನಡುವೆ ಸಮಸ್ಯೆಯತೆ ಇತ್ತು ಎಂಬುದಕ್ಕೆ ರಾಜನೊಂದು ಧರ್ಮವನ್ನು ಪ್ರೊತ್ಸಾಹಿಸಿದರೆ ರಾಣಿಯರೇ ಒಂದು ಧರ್ಮವನ್ನು ಪ್ರೋತ್ಸಾಹಿಸುತ್ತಿದ್ದರು. ಅನ್ಯ ಧರ್ಮಗಳನ್ನು ಗೌರವದಿಂದ ಕಾಣುತ್ತಿದ್ದರು. ಉದಾ: ಹೊಯ್ಸಳರ ಕಾಲದಲ್ಲಿ ವಿಷ್ಣುವರ್ಧನ ನಂತರದಲ್ಲಿ ವೈಷ್ಣವ ಧರ್ಮೀಯನಾದರೂ ಇದ್ದು ಜೈನಧರ್ಮವನ್ನು

ಪೋಷಿಸಿ ಬೆಳೆಸಿದ್ದನ್ನು ನೆನಪಿಸಿಕೊಳ್ಳಬಹುದು. ಈ ಬಗ್ಗೆ ಅಧ್ಯಯನದಲ್ಲಿ ಚರ್ಚಿಸಲಾಗಿದೆ. ಧಾರ್ಮಿಕ ಪರಿಸರದ ಪೋಷಣೆಗಳಿಂದಾಗಿ ಸಾಕಷ್ಟು ದೇವಾಲಯಗಳು ಸ್ಮಾರಕಗಳು ನಿರ್ಮಾಣವಾದ ಬಗ್ಗೆ ಪ್ರತ್ಯೇಕ ಅಧ್ಯಾಯವೊಂದರಲ್ಲಿಯೇ ಚರ್ಚಿಸಲಾಗಿದೆ. ವಿಜಯನಗದ ಕಾಲದಲ್ಲಿ ಹಿಂದೂ ಧರ್ಮದ ಉಳಿವಿಗಾಗಿ ಹಲವಾರು ಸ್ಮಾರಕಗಳು ಧಾರ್ಮಿಕ ಹಿನ್ನೆಲೆಯಲ್ಲಿ ಸ್ಥಾಪನೆಯಾಗಿರುವುದು ಮತ್ತೊಂದು ಗಮನಾರ್ಹವಾದ ವಿಷಯ.

ಸಾಮಾಜಿಕವಾಗಿಯೇ ಸಮಾಜದ ಘಟಕವಾಗಿ ಗುರ್ತಿಸಿಕೊಂಡ ರಾಣಿಯರು ಸಮಾಜದ ಶ್ರೇಯೋಭಿವೃದ್ಧಿಗೆ ಮನಪೂರ್ವಕವಾಗಿ ಶ್ರಮಿಸಿದ್ದಾರೆ. ವಿದ್ಯಾಭ್ಯಾಸದ ರಂಗದಲ್ಲಿ ಆಸಕ್ತಿ ಹೊಂದಿದ್ದ ರಾಣಿಯರು ಸಾಹಿತ್ಯ ರಚನೆಗಳಲ್ಲಿಯೂ ಕೈಹಾಕಿರುವುದು ಸ್ಪಷ್ಟವಾಗಿದೆ. ಕ್ರಿ.ಶ. 3–4ನೇ ಶತಮಾನಗಳಲ್ಲಿ ವಿದ್ಯಾಭ್ಯಾಸದಿಂದ ವಂಚನೆಗೊಳಗಾದ ಸ್ತ್ರೀಯರು ಪ್ರಾರಂಭದಲ್ಲಿ ವಿದ್ಯಾಭ್ಯಾಸಕ್ಕೆ ಅನರ್ಹರು ಎಂಬ ಭಾವನೆ ಬಂದಿದ್ದು ಕನ್ನಡ ಶಾಸನಗಳಲ್ಲಿ ಯಾವುದೇ ಮಹಿಳಾ ವಿದ್ಯಾರ್ಥಿನಿಯರ ಹೆಸರಾಗಲೀ ಪಂಡಿತೆಯ ಹೆಸರಾಗಲೀ ದಾಖಲಾಗದೇ ಇರುವುದು ಪುಷ್ಠಿನೀಡುತ್ತಿತ್ತು. ಆದರೆ ರಾಜಮನೆತನದ ಸ್ತ್ರೀಯರೆನಿಸಿದವರು ತಕ್ಕಮಟ್ಟಿಗೆ ವಿದ್ಯಾಬ್ಯಾಸವನ್ನು ಪಡೆದು ವಿದ್ಯಾವತಿಯರಾಗುತ್ತಿದ್ದರು. ಓದು–ಬರಹದ ಅಧ್ಯಯನಕ್ಕಿಂತಲೂ ಸಂಗೀತ, ನರ್ತನ, ಮೂಲೆಕಟಟುವಿಕೆಯಂತಹ ಅವಕಾಶಗಳ ಕಡೆ ವಾಲುತ್ತಿದ್ದರು. ಕ್ರಿ.ಶ. 900ರ ಶಾಸನವೊಂದರಲ್ಲಿ 'ಸಾವಿನಿರ್ಮಡಿ' 'ಸರ್ವಶಾಸ್ತ್ರಸಿದ್ದಿ' ಯಾಗಿದ್ದಳೆಂಬ ಉಲ್ಲೇಖ ದೊರೆತಿದೆ. ನಂತರದಲ್ಲಿ ಬರುವ ರಾಣಿಯರುಗಳು ವಿವಿಧ ಭಾಷೆಗಳಲ್ಲಿ ಪಾಂಡಿತ್ಯವನ್ನು ಪಡೆದಿರುತ್ತಿದ್ದರು. ಎಂಬುದನ್ನು ಅಧ್ಯಯನದಿಂದ ತಿಳಿದು ಬರುತ್ತದೆ.

'ಅತಿಚತುರೋಕ್ತಿಯೊಳೆ ಸರಸ್ವತಿಗಂ ಮಿಗಿಲ್ ಪುಣ್ಯಕಥನ ಪುರಾಣ ಪ್ರಸಂಗೆ ಪ್ರತಿಭಾ ಸರಸ್ವತಿ ವಿವೇಕ ನಮೂನೆ ಎಂಬ ಬಿರುದುಗಳನ್ನು ರಾಜ ಮನೆತನಗಳ ಕೆಲವು ರಾಣಿಯರು ಪಡೆದಿದ್ದು ಚಾಲುಕ್ಯರ ಚಂದ್ರಾದಿತ್ಯನ ಮಡದಿ, ಇಮ್ಮಡಿ ಪುಲಿಕೇಶಿಯ ಸೊಸೆಯಾದ ವಿಜಯ ಭಟ್ಟಾರಿಕೆ 'ಕ್‌ಮುದಿಮಹೋತ್ಸವ' ಸಂಗಮರ ಗಂಗಾದೇವಿಯ 'ಮಧುರವಿಜಯ' ಕೃಷ್ಣದೇವರಾಯನ 3ನೇ ರಾಣಿಯಾದ ಜಗನ್ಮೋಹಿನಿ 'ತುಕ್ಕಾ ಪಚಕಂ / ಭೃಂಗ ಪಂಚಕಂ' ಎಂಬ ಸಾಹಿತ್ಯ ಕೃತಿಗಳ ರಚನೆಯನ್ನು ಮಾಡಿ ಹೆಸರಾಂತ ಕವಿ ಮಹಾಶಯರುಗಳಿಗೆ ಸವಲೊಡ್ಡಿದಂತಹ ಸನ್ನಿವೆಶಗಳು ಸಹ ರಾಣಿಯರ ವಿದ್ವತ್ತಿನ ಮೇಲೆ ಬೆಳಕು ಚೆಲ್ಲುತ್ತದೆ. ಒಟ್ಟಾರೆಯಾಗಿ ಈವರೆಗೆ ಬೆಳಕಿಗೆ ಬಾರದ ಅನೇಕ

ಸಂಗತಿಗಳನ್ನು ಮೂಲವನ್ನು ಅನೇಕ ಸ್ಪಷ್ಟ ಮಾಹಿತಿಯ ಮೂಲಕ ಗುರುತಿಸಲಾಗಿದೆ. ಕರ್ನಾಟಕದ ಸಂಸ್ಕೃತಿಯ ಸರ್ವತೋಮುಖ ಅಭವೃದ್ಧಿಗೆ ಈ ಮೂಲಕ ರಾಣಿಯರು ನೀಡಿದ ಸಂಗತಿಗಳು ಕಾಣಸಿಗುತ್ತವೆ. ಪ್ರಜಾಕಲ್ಯಾಣಕ್ಕಾಗಿ ಕೆರೆ, ಕಾಲುವೆ, ದೇವಾಲಯಗಳ ನಿರ್ಮಾಣ ದಾನ, ದತ್ತಿ, ಇತ್ಯಾದಿ ವಿವಿಧ ಕ್ಷೇತ್ರಗಳಲ್ಲಿ ಪ್ರಾಚೀನ ಕರ್ನಾಟಕದ ರಾಣಿಯರು ವಹಿಸಿದ ಪಾತ್ರವನ್ನು ಇಲ್ಲಿ ಅವಲೋಕಿಸಲಾಗಿದೆ.

ಕೆಲವು ರಾಣಿಯರು ಅಂದಿನ ವೈಭವದ ಜೀವನವನ್ನು ಅವಕಾಶಗಳನ್ನು ಕೇವಲ ಅಂತಪುರದ ಜೀವನಕ್ಕೆ ತಮ್ಮನ್ನು ಸೀಮಿತಗೊಳಿಸಿಕೊಂಡು ಅರಸರ ಬೆನ್ನೆಲುಬುಗಳಾಗಿ ಹಾಗೂ ರಾಜಪುತ್ರರ ಶ್ರೇಯಸ್ಸಿಗಾಗಿ ಶ್ರಮಿಸಿರುವುದು ಹೆಚ್ಚಿನದಾಗಿದೆ. ವಿಜಯನಗರದ ಕಾಲದಲ್ಲಿ ತಿಪ್ಪಾಂಬೆ ಮತ್ತು ಓಬಾಂಬೆಯವರುಗಳನ್ನು ನಿದರ್ಶನಗಳಾಗಿ ನೀಡಿದರೆ ಪ್ರಾಚೀನ ರಾಜಮನೆತನಗಳಲ್ಲಿ ತುಸು ಹೆಚ್ಚಿನ ಸಂಖ್ಯೆಯಲ್ಲೇ ದೊರೆಯುತ್ತಾರೆ ಮತ್ತೆ ಕೆಲವರಾದ ಕಕುಸ್ಥವರ್ಮನ ಮಗಳಾದ ಅಜಿತಭಟ್ಟಾರಿಕೆ, ಇಮ್ಮಡಿ ಪುಲಿಕೇಶಿಯ ಸೊಸೆ ವಿಜಯಭಟ್ಟಾರಿಕೆ, ಅತ್ತಿಮಬ್ಬೆ, ಜಯಸಿಂಹನ ರಾಣಿ ಸುಗ್ಗಲೆ, ಒಂದನೇ ಪುಲಿಕೇಶಿಯ ರಾಣಿ ದುರ್ಲಭಾದೇವಿ, ಆರನೇ ವಿಕ್ರಮಾದಿತ್ಯನ ರಾಣಿಯರಾದ ಲೋಕಮಹಾದೇವಿ ಮತ್ತು ತ್ರೈಲೋಕ್ಯಮದೇವಿ, ವಿಜಯಾದಿತ್ಯನ ರಾಣಿ ವಿನಾಪೋಟಿ, ಹೊಯ್ಸಳರ ರಾಣಿ ಶಾಂತಲೆ, ಬಂಮಲಾದೇವಿ, ಇಮ್ಮಡಿ ದೇವರಾಯನ ರಾಣಿಯರಾದ ಪೊನ್ನಲಾದೇವಿ, ಮತ್ತು ಭೀಮಾದೇವಿ. ಕೃಷ್ಣದೇವರಾಯನ ರಾಣಿಯರಾದ ತಿರುಮಲಾದೇವಿ, ಚಿನ್ನಾದೇವಿಯರು ಶಾಸನಗಳ ಮುಖಾಂತರ ನಮ್ಮ ಇತಿಹಾಸದ ಬೆಲೆಯುಳ್ಳ ಘಟಕಗಳಾಗಿ ಕಾಣಿಸಿಕೊಂಡಿದ್ದಾರೆ. ಈ ದೃಷ್ಟಿಯಿಂದ ರಾಣಿಯರು ನಮ್ಮ ಬಾಳಿಗೆ ಒಂದು ಶ್ರೀಮಂತ ಪರಂಪರೆಯ ಕೊಂಡಿಗಳಾಗಿ ಕಂಡುಬರುತ್ತಾರೆ.

ಮತ್ತೊಂದು ಪ್ರಮುಖವಾಗಿ ಕಂಡುಬರುವ ವಿಚಾರವೆಂದರೆ, ರಾಜರುಗಳು ವಿವಾಹವಾದ ಮಹಿಳೆಯರು ಅಂದರೆ ರಾಣಿಯರುಗಳೆಲ್ಲರೂ, ಹೆಚ್ಚಾಗಿ ರಾಜಕುಟುಂಬಕ್ಕೆ ಸೇರಿದವರಲ್ಲ. 'ರಾಜನೋ ಬಹುವಲ್ಲಭಾ' ಎಂಬುದಕ್ಕೆ ಅವನ ಬಹುಪತ್ನಿಯರೇ ಉದಾಹರಣೆಗಳು. ರಾಜ ತಾನು ಮೋಹಿಸಿದ ಹೆಣ್ಣುಗಳನ್ನು ವಿವಾಹವಾಗುತ್ತಿದ್ದನು. ಉಚ್ಚವರ್ಗದವರುಗಳೇ ಅಲ್ಲದೆ ಕೆಳವರ್ಗದವರನ್ನು ಸಹ ವಿವಾಹವಾಗುತ್ತಿದ್ದನು. ಬಾದಾಮಿ ಚಾಲುಕ್ಯರ ವಿಜಯಾದಿತ್ಯ ಸೂಳೆಯರ ವಿನಾಪೋಟಿಯನ್ನು ವಿವಾಹವಾಗಿದ್ದನು? ಅವಳು ವಿಜಯಾದಿತ್ಯನ ಪ್ರಾಣವಲ್ಲಭೆಯಾಗಿದ್ದಳು ಎಂಬುದಕ್ಕೆ ಶಾಸನಾಧಾರಗಳು ಇವೆ. ಕೆಲವೊಮ್ಮೆ ದಂಡನಾಯಕರ ಸಾಮಂತರ, ಪ್ರಧಾನಮಂತ್ರಿಗಳು,

ಅಧಿಕಾರಿಗಳ, ಹೆಣ್ಣು ಮಕ್ಕಳನ್ನು ವಿವಾಹವಾಗುತ್ತಿದ್ದರು. ವಿಜಯನಗರದಲ್ಲಿ ಶ್ರೀಕೃಷ್ಣದೇವರಾಯನ ರಾಣಿಯರಾದ ನಾಗಲಾದೇವಿ, ಚಿನ್ನಾದೇವಿ ಮತ್ತು ಓದುವ ತಿರುಮಲಮ್ಮನವರ ಮೂಲದ ಬಗ್ಗೆ ಆಕರಗಳ ಕೊರತೆಯಿಂದ ಇಲ್ಲಿ ಗ್ರಹಿಸಬಹುದು.

ರಾಣಿಯರು ಆರ್ಥಿಕವಾಗಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ ಸ್ವತಂತ್ರರಾಗಿದ್ದು ತಮ್ಮ ಸಾಮರ್ಥ್ಯಕ್ಕೆ ತಕ್ಕಂತೆ ದತ್ತಿ, ದಾನ ಮಾಡಿದ್ದು ಉಲ್ಲೇಖನಾರ್ಹ. ತಮ್ಮ ಸಾಮರ್ಥ್ಯಕ್ಕೆ ತಕ್ಕಂತೆ ಅನೇಕ ದೇವಾಲಯಗಳ ನಿರ್ಮಾಣಕ್ಕೆ ಕೊಡುಗೆಗಳನ್ನು ನೀಡಿದ್ದಾರೆ. ಆ ಮೂಲಕ ಸರ್ವತೋಮುಖ ಅಭಿವೃದ್ಧಿಗೆ ಶ್ರಮಿಸಿದ್ದಾರೆ. ದೇವರ ಹೆಸರಿನಲ್ಲಿ ನಿರ್ಮಿಸಿದ ದೇವಾಲಯಗಳ ಒಳಿತಿಗಾಗಿ ಕೈಗೊಂಡ ತೀರ್ಥಯಾತ್ರೆಗಳು ಇಲ್ಲಿ ಮಹತ್ವಪಡೆದಿದೆ. ಈ ರೀತಿ ಯಾತ್ರೆ, ತೀರ್ಥಯಾತ್ರೆಗಳು ಇಲ್ಲಿ ಮಹತ್ವ ಪಡೆದಿವೆ. ಈ ರೀತಿ ಯಾತ್ರೆ, ತೀರ್ಥಯಾತ್ರೆ, ದಾನ, ದತ್ತಿ ನೀಡುವ ಉದ್ದೇಶವನ್ನು ಕುರಿತು ಶಾಸನಗಳು ಸಾಹಿತ್ಯಗಳು ವಿವರಣೆಯನ್ನು ನೀಡಿ ಪುಷ್ಟೀಕರಿಸಿವೆ. ಚಕ್ರವರ್ತಿಗಳೊಂದಿಗೆ ರಾಣಿಯರು ಹಲವಾರು ದೇವಾಲಯಗಳನ್ನು ನಿರ್ಮಿಸಿ ದಾನದತ್ತಿ ನೀಡುತ್ತಿದ್ದರೆಂಬ ಸಂಗತಿಯನ್ನು ಪರಿಗಣಿಸುವುದು ಔಚಿತ್ಯವಾಗಿ ಕಂಡುಬರುತ್ತದೆ.

ರಾಣಿಯರು ತಮ್ಮ ತಮ್ಮ ಕರ್ತವ್ಯಗಳನ್ನು ಹಕ್ಕು ಬಾದ್ಯತೆಗಳ ಬಗ್ಗೆ ಕೆಲವು ಕೃತಿಗಳಲ್ಲಿ ಉಲ್ಲೇಖವಿದ್ದು ತಮ್ಮ ತಮ್ಮ ಪುತ್ರ ಶ್ರೇಯೋಭಿವೃದ್ಧಿಗಾಗಿ ಸಾಮ್ರಾಜ್ಯದಲ್ಲಿ ಕ್ಲಿಷ್ಟಕರವಾದ ವಾತಾವರಣವು ಉಂಟಾಗುತ್ತಿತ್ತೆಂದು ಕಂಡು ಬಂದರೆ ಸವತಿ ಮತ್ಸರ ಇದ್ದ ಬಗ್ಗೆ ಆಧಾರಗಳಿಲ್ಲ. ಹೊಯ್ಸಳರ ಕಾಲದಲ್ಲಿ ಶಾಂತಲೆ, ಶ್ರವಣಬೆಳಗೊಳದಲ್ಲಿ 'ಸವತಿ ಗಂಧವಾರಣಿ' ಬಸದಿಯನ್ನು ನಿರ್ಮಾಣ ಮಾಡಿರುವುದು ಇದು ಉಲ್ಲೇಖನಾರ್ಹವಾದುದ್ದಾಗಿದೆ. ಆದರೆ ತಮ್ಮ ಮಕ್ಕಳು ಯುವರಾಜರಾಗಬೇಕೆಂದು ಹಂಬಲಿಸುತ್ತಿದ್ದ ವಿಚಾರ ಪ್ರಮುಖವಾದುದ್ದಾಗಿದೆ.

ರಾಣಿಯರು ಸಾಮಾನ್ಯ ಮಹಿಳೆಯರುಗಳೊಂದಿಗೆ ಅವಿನಾಭಾವ ಸಂಬಂಧ ಹೊಂದಿದ್ದರು. ಆದರೂ ಸಹ ಸಾಮಾನ್ಯ ಮಹಿಳೆಯರ ಪಾತ್ರ ವಿಶೇಷವೇನೂ ಆಗಿರಲಿಲ್ಲ. ಕುಟುಂಬ ವ್ಯವಸ್ಥೆ, ಆಚಾರ–ವಿಚಾರಗಳಲ್ಲಿ, ಆಹಾರ, ಆಭರಣ ಇತ್ಯಾದಿಗಳಲ್ಲಿ ಪರಸ್ಪರ ವಿನಿಮಯ ಲಕ್ಷಣಗಳಿದ್ದವು. ಆದರೂ ಸಹ ಅರಸನ ರಾಣಿಯರು ಉನ್ನತ ಮಟ್ಟದಲ್ಲಿಯೇ ಕಾಣಿಸಿಕೊಳ್ಳುತ್ತಿದ್ದರು. ರಾಣಿಯರ ವೈಭವ ಜನಸಾಮಾನ್ಯರಿಗಿಂತ ಉನ್ನತ ಮಟ್ಟದಲ್ಲಿತ್ತು. ಅರಸರೂ ಸಹ ರಾಣಿಯರಿಗೆ ನೀಡಿದ ಸ್ಥಾನ–ಮಾನ ದೊಡ್ಡದು. ಇಲ್ಲಿ ಅರಸರು ತಮ್ಮ ತಾಯಿಯರ ಬಗ್ಗೆ ರಾಣಿಯರ ಬಗ್ಗೆ ಇದ್ದ ಪ್ರೀತಿಯನ್ನು

ಗೌರವಗಳನ್ನು ಸ್ಮಾರಕ, ಭವನ, ನಗರ ಪಟ್ಟಣಗಳನ್ನು ನಿರ್ಮಿಸುವುದರೊಂದಿಗೆ ಅನನ್ಯತೆಯನ್ನು ಮೆರೆದಿರುವುದು ಶ್ಲಾಘನೀಯವಾಗಿದೆ.

ಒಟ್ಟಾರೆ ಹೇಳುವುದಾದರೆ, ಪ್ರಾಚೀನ ಕರ್ನಾಟಕದ ಭವ್ಯ ಸಂಸ್ಕೃತಿಗೆ ರಾಜ ಮನೆತನಗಳ ರಾಣಿಯರ ಪಾತ್ರ ಅಮೋಘ, ಅನನ್ಯ ರಾಣಿಯರ ಪ್ರೋತ್ಸಾಹ, ಬೆಂಬಲಗಳಿಂದ ರಾಜ್ಯ ವಿಸ್ತರಿಸಿದ್ದು, ನೆರೆ–ಹೊರೆಯ ರಾಜ್ಯಗಳೊಂದಿಗೆ ಅವಿನಾಭಾವ ಸಂಬಂಧ ಹೊಂದಲು ಕಾರಣರಾದ ರಾಣಿಯರು ಇಂದಿನ ಸಮಾಜಕ್ಕೆ ಆದರ್ಶಶೀಲರು. ಇವರುಗಳ ಸೇವೆಯೂ ಔಚಿತ್ಯಪೂರ್ಣವಾಗಿದೆ. ಹೀಗೆ ರಾಣಿಯರು ಮಹತ್ವಪೂರ್ಣ ಇತಿಹಾಸವನ್ನು ನೋಡಿದಾಗ್ಯೂ ಅವರ ಅಸ್ತಿತ್ವವನ್ನು ಗಮನಿಸಿದರೆ ಇಂದಿನ ಆಧುನಿಕ ಸಮಾಜದಲ್ಲಿ ಇರುವಂತಹ ಲಿಂಗಸಂಬಂಧೀ ತಾರತಮ್ಯಗಳು ಅಂದು ಅಸ್ತಿತ್ವದಲ್ಲಿದ್ದುದು ಅರಿವಾಗುತ್ತದೆ. ಆದಾಗ್ಯೂ ಅವಕಾಶಗಳು ದೊರೆತಾಗ ಮತ್ತು ಕಾರ್ಯಬಲದಿಂದ, ಸ್ಥಾನಬಲದಿಂದ ಸಾಮಾಜಿಕ, ಧಾರ್ಮಿಕ, ರಾಜಕೀಯ ಕ್ಷೇತ್ರಗಳಲ್ಲಿ ತಮ್ಮ ಬಲಕ್ಕೆ ಅನುಗುಣವಾಗಿ ಕೊಡುಗೆಗಳನ್ನು ನೀಡುವುದರ ಮೂಲಕ ಸಮಾಜದಲ್ಲಿ ಗುರುತಿಸಿಕೊಳ್ಳುವ ಪ್ರಯತ್ನ ಮಾಡಿದ್ದಾರೆ.

ಮಹಿಳಾ ಅಧ್ಯಯನಗಳು ಕೇವಲ ಆಕರಗಳ ಪರಿಶೀಲನೆ, ದಾಖಲೀಕರಣ ಮತ್ತು ಕೆಲ ಐತಿಹಾಸಿಕ ರಾಣಿಯರಾದ ನೂರುಜಹಾನ್, ಚಾಂದ್‌ಬೀಬಿ, ರಾಣಿ ದುರ್ಗಾವತಿ, ಅಕ್ಕಾದೇವಿ, ಉಮಾದೇವಿ ಮುಂತಾದವರ ವಿಮರ್ಶಾತ್ಮಕ ಮತ್ತು ಕೂಲಂಕುಷ ಅಧ್ಯಯನಕ್ಕೆ ಮಾತ್ರ ಸೀಮಿತವಾಗಿದೆ. ಇತಿಹಾಸದಲ್ಲಿ ತನ್ನ ತನದಿಂದ ಬಾಳಿ ಬದುಕಿದ, ಬಾಳಲಾರದ ಅನೇಕಾನೇಕ ಹರವುಗಳನ್ನು ಮಹಿಳಾ ಅಧ್ಯಯನದ ವ್ಯಾಪ್ತಿಗೆ ಸೇರಿಸಿ ಅಳವಡಿಸಿಕೊಳ್ಳಬೇಕಾಗಿದೆ. ಇದು ಭಾರತೀಯ ಇತಿಹಾಸದ ಬಹುಮುಖ್ಯ ನ್ಯೂನ್ಯತೆಯಾಗಿದೆ. ಮಹಿಳಾ ಅಧ್ಯಯನದ ಇತಿಹಾಸಕಾರರು, ಸಂಶೋಧಕನ ಪ್ರಾಚೀನ ಮತ್ತು ಆದುನಿಕ ಯುಗದಲ್ಲಿ ಸ್ತ್ರೀ ಸಮಾಜ ವ್ಯವಸ್ತೆ ಗುರುತಿಸುವ ಪ್ರಯತ್ನ ಮಾಡಿದರೂ, ಮಧ್ಯಯುಗದಲ್ಲಿ ಸ್ತ್ರೀಯರ ಸ್ಥಾನಮಾನ ಭಾವನೆ, ದುಗುಡ, ನಂಬಿಕೆ, ರೂಢಿ ಪರಂಪರೆಗಳ ಬಗ್ಗೆ ತರ್ಕಬದ್ಧವಾಗಿ ಪರಿಶೀಲಿಸುವ ಅಗತ್ಯವಿದೆ. ರಾಬಿನ್ಸ್ ವಿಂಕ್ಸನ್ ಪ್ರಕಾರ **"**History is minimally three things' what happened in the past, what people believe happened in the past, and what historians say happened in the past. Historiography is largely about the second and third of these definitions of history" ಈ ಮಾತು ಮಹಿಳಾ ಅಧ್ಯಯನದ ಇತಿಹಾಸಕ್ಕೂ ಅನ್ವಯಿಸುತ್ತದೆ.

Status of women in historical period has three things what was actually the status of women in the past, what people believed about the status of women and what historians say about the status of women in the past. Status of women in history is largely about the second and third of the above (Robin, W. winks (ed.) Historiography, oxford, 199, preface) ಎಂದು ಹೇಳುತ್ತಾ,

ಈ ಸಂಶೋಧನೆ ಪ್ರಾಚೀನ ಕರ್ನಾಟಕದ ಅರಸು ಮನೆತನಗಳಲ್ಲಿ ಭಾಗವಾಗಿದ್ದ ರಾಣಿಯರ ಬಗೆಗಿನ ಅನಾವರಣವಾಗಿದೆ. ಇವರ ಬಗ್ಗೆ ಈ ಹಿಂದೆ ಅಧ್ಯಯನಗಳಾಗಿರುವುದು ವಿರಳ ಆಗಿದ್ದರೂ ಸೂಕ್ಷ್ಮ ಮತ್ತು ಸಮಗ್ರ ಅಧ್ಯಯನಗಳಾಗಿರಲಿಲ್ಲ. ಆದುದ್ದರಿಂದ ಪ್ರಸ್ತುತ ಅಧ್ಯಯನ ರಾಣಿಯರ ಬಹುಮುಖ ಆಯಾಮಗಳನ್ನು ದಾಖಲಿಸುವ ಮತ್ತು ತೌಲನಿಕವಾಗಿ ವಿವೇಚಿಸುವ ವಸ್ತುನಿಷ್ಠ ಪ್ರಯತ್ನವಾಗಿದೆ.